# ಗೀತೆಯಲ್ಲಿ ಏನಿದೆ?

## ಒಂದನೇ ಭಾಗ

(೧ ರಿಂದ ೬ ಅಧ್ಯಾಯಗಳು—ಕರ್ಮಕಾಂಡ)

ನಾರಾಯಣ



ಮಾರಾಟದ ಪೂರ್ಣಾಧಿಕಾರಿಗಳು

**ವಿಚಾರ ಸಾಹಿತ್ಯ, ಲಿಮಿಟೆಡ್**

ಬಳೇಪೇಟೆ, ಬೆಂಗಳೂರು ೨

"ಸಿರಿಗನ್ನಡಂ ಗೆಲ್ಗೆ"



ನಮ್ಮ ರಾಜರ್ಷಿಗಳು

ಕರ್ಣಾಟಕಾಧೀಶ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರು

# ಅ ರ್ಪ ಣೆ

ಯಾರ ಸೇವೆಯ ಸದವಕಾಶದಿಂದ

ನನ್ನಲ್ಲಿನ ಭಗವದ್ಭಕ್ತಿ ಜಾಗ್ರತವಾಗಿ ತೀವ್ರವಾಯಿತೋ

ಯಾರ ಆಶ್ರಯದಲ್ಲಿ

ಈ ಗ್ರಂಥದ ಹೆಚ್ಚಿನ ಭಾಗ ಬೆಳೆಯಿತೋ

ಯಾರ ಕೃಪಾಕಟಾಕ್ಷದ ಸಹಾನುಭೂತಿಯಿಂದ

ಈ ಗ್ರಂಥವು ಬೆಳಕು ಕಂಡು

ಓದುಗರ ಕೈಸೇರಿದೆಯೋ

ಆ ನಮ್ಮ

ಭಕ್ತರಾಜ ಸತತದೇವಪೂಜಾನಿರತ ರಾಜರ್ಷಿ

ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್

ಅವರಿಗೆ ಚಿರಋಣಿಯಾಗಿದ್ದೇನೆ.

ಮೈಸೂರು
ಜಯನಾಮ ಸಂವತ್ಸರ
ಆಶ್ವಯುಜ ಬಹುಳ ದ್ವಿತೀಯೆ.

ನಾರಾಯಣ
(ಡಾಕ್ಟರ್ ಬಿ. ನಾರಾಯಣರಾವ್
ಶ್ರೀಮನ್ಮಹಾರಾಜರವರ ಆಪ್ತ ಮುಖ್ಯ ವೈದ್ಯ)

## ಶ್ರೀಮದ್ಭಗವದ್ಗೀತಾ

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನಸಂವಾದೇ
* * * ಯೋಗೋ ನಾಮ * * * ಅಧ್ಯಾಯಃ

ಎಂಬುದಾಗಿ ಪ್ರತಿ ಅಧ್ಯಾಯದ ಕೊನೆಯಲ್ಲೂ—ಶ್ರೀಮದ್ಭಗವದ್ಗೀತೆಯು ಉಪನಿಷತ್ತು ಎಂದೂ, ಬ್ರಹ್ಮವಿದ್ಯೆಯೆಂದೂ, ಯೋಗಶಾಸ್ತ್ರವೆಂದೂ, ಸ್ನೇಹ ಪರನಾದ ಶ್ರೀಕೃಷ್ಣನು ಕೇವಲ ಪ್ರೀತಿಯಿಂದ ಅರ್ಜುನನಿಗೆ ಸಂವಾದರೂಪ ದಲ್ಲಿ ಹೇಳಿದನೆಂದೂ ಉಲ್ಲೇಖವಿದೆ.

ಗೀತೆಯು ಉಪ+ನಿಷತ್—ಹತ್ತಿರಕ್ಕೆ ಸೇರಿಸುತ್ತದೆ; ಬ್ರಹ್ಮನ, ಆತ್ಮನ ಸನ್ನಿಧಿಗೆ ಒಯ್ಯುತ್ತದೆ. ವೇದಾಂತವಾದ ಉಪನಿಷತ್ತುಗಳಂತೆಯೇ ಇದೂ ಸರ್ವಶಕ್ತಿಯುಳ್ಳದ್ದಾಗಿದೆ. ಬ್ರಹ್ಮವಿದ್ಯಾಯಾಂ ಎಂದರೆ ಬ್ರಹ್ಮವಿಷಯಕ ವಾದ ಪರಾವಿದ್ಯೆಯನ್ನು ಒಳಗೊಂಡಿದೆ; ಮುಖ್ಯ ತತ್ತ್ವಜ್ಞಾನವಾಗಿದೆ. ಯೋಗಶಾಸ್ತ್ರೇ—ಪಡೆಯಬೇಕಾದ ಜ್ಞಾನವಿದ್ಯೆಯಾಗಿದೆ.

ಹೀಗೆಂದು ಪ್ರತಿ ಅಧ್ಯಾಯದ ಕೊನೆಯಲ್ಲೂ ವ್ಯಾಸರು ಒತ್ತಿ ಹೇಳಿದ್ದಾರೆ. ಇದು ಒಣ ವೇದಾಂತವಲ್ಲ; ಅಗತ್ಯವಾಗಿ ಹೊಂದಬೇಕಾದ ತಿಳಿವಳಿಕೆ; ಮುಖ್ಯವಾದ ಬ್ರಹ್ಮಾತ್ಮಜ್ಞಾನವನ್ನು ಒಳಕೊಂಡು, ಮಾರ್ಗದರ್ಶಿಯಾಗಿ, ಗುರಿ ಮುಟ್ಟಿಸುತ್ತದೆಂದು ಒತ್ತಿ ಹೇಳಿದ್ದಾರೆ.

# ಗೀತೆಯೊಳಗಿನ ವಿಷಯ

# ಕರ್ಮಕಾಂಡದ ವಿವರ

ಕರ್ಮಸಂನ್ಯಾಸಾತ್ಮಕ ಸಾಧನಾಪ್ರಧಾನವಾದ 'ತ್ವಂ' ಪದಾರ್ಥ ಪ್ರಮುಖವಾದ ಆದಿಯ ಆರು ಅಧ್ಯಾಯಗಳು; ಸಾಮವೇದಾಂತರ್ಗತ ವಾದ ಛಾಂದೋಗ್ಯದಲ್ಲಿರುವ ಮೂರನೆಯ ಮಹಾವಾಕ್ಯವಾದ 'ತತ್ತ್ವಮಸಿ' ಎಂದು ಒಂಬತ್ತು ಸಲ ಉದ್ದಾಲಕ ಆರುಣಿಯಿಂದ ತನ್ನ ಮಗನಾದ ಶ್ವೇತಕೇತುವಿಗೆ ಉಪದೇಶಿಸಲ್ಪಟ್ಟ ತತ್ತ್ವ.

# ಪರಿಚಯ

ಪಾವನಕ್ಕೆ ಅತಿಪಾವನವಾದ ಗ್ರಂಥ—ಗೀತೆ. ಪಾಮರರಲ್ಲಿ ಅತಿ ಪಾಮರ ನಾದವನು—ನಾನು. ಗೀತಾಗ್ರಂಥವನ್ನು ಪಠಿಸಿ ಅದಕ್ಕೆ ಭಾಷ್ಯ ಬರೆಯದ ಆಚಾರ್ಯಪುರುಷರಿಲ್ಲ. ಪಂಡಿತೋತ್ತಮರು ಎಷ್ಟೋ ಜನ, ಕಾಲಕಾಲದಲ್ಲೂ ತಮ್ಮತಮ್ಮ ವಿದ್ಯಾಪ್ರೌಢಿಮೆಯ ಅಳತೆಯ ಮೇರೆ, ತಮ್ಮತಮ್ಮ ದೃಷ್ಟಿ ಕೋನದಿಂದ, ತಮ್ಮತಮ್ಮ ಅನುಭವ ಪ್ರತಿಭೆಗಳಂತೆ ಗೀತೆಗೆ ಅರ್ಥಕೊಟ್ಟು, ಅನುವಾದ ಮಾಡಿ, ಬಿಡಿಸಿ ಬಿಡಿಸಿ ತತ್ತ್ವಗಳನ್ನು ಉಪದೇಶ ಮಾಡಿದ್ದಾರೆ. ಇತ್ತೀಚಿನ ಪ್ರತಿಭಾಶಾಲಿಗಳು ಲೋಕಮಾನ್ಯ ತಿಲಕರು, ಮಹಾತ್ಮಾ ಗಾಂಧಿ ಯವರು, ಅರವಿಂದ ಯತಿಗಳು, ಜನಜೀವನಜಾಗ್ರತರು ಗೀತಾಮಹಿಮೆ ಯನ್ನು ಕಂಡು, ಅದರ ತತ್ತ್ವಗಳ ಹಿರಿಮೆಯನ್ನು ಜನಸಾಮಾನ್ಯಕ್ಕೆ ತಿಳಿಯ ಪಡಿಸಲು ಅನೇಕ ವಿಧದಲ್ಲಿ ತಮ್ಮ ದೃಷ್ಟಿಯಿಂದ ತಮ್ಮ ಪಥವನ್ನು ಪ್ರತಿಪಾದಿ ಸಲು ಟೀಕಾಸಹಿತವಾಗಿ ಗೀತಾರ್ಥವನ್ನು ನಮ್ಮ ಕಾಲದಲ್ಲೂ ಪ್ರತಿಪಾದಿಸಿ ದ್ದಾರೆ. ಪರಮ ಜ್ಞಾನಿಗಳಾದ ಶ್ರೀ ಶಂಕರರು ಗೀತೆಯಲ್ಲಿ ಜ್ಞಾನಯೋಗವನ್ನು ಕಂಡರು; ಲೋಕಮಾನ್ಯ ತಿಲಕರು ಗೀತೆಯಲ್ಲಿ ಕರ್ಮಯೋಗವನ್ನು ಕಂಡರು; ಮಹಾತ್ಮಾ ಗಾಂಧಿಯವರು ಗೀತೆಯಲ್ಲಿ ಅನಾಸಕ್ತಿಯೋಗವನ್ನು ಕಂಡರು; ಅರವಿಂದ ಯೋಗಿಗಳು ಗೀತೆಯಲ್ಲಿ ಪುರುಷೋತ್ತಮಯೋಗ (ascent of man and descent of God) ವನ್ನು ಕಂಡರು.

ತಿರುಪತಿಯಲ್ಲಿ ಸ್ವಾಮಿಯ ಮೂರ್ತಿಯನ್ನು 'ಬಾಳಾಜಿ'ಯೆಂದು ಉತ್ತರ ದೇಶದ ಯಾತ್ರಿಕರು ಹುಡುಕಿಕೊಂಡು ಬಂದು, ಶ್ರೀ ಬಾಲಸುಬ್ರಹ್ಮಣ್ಯರೂಪಿ ಯನ್ನು ಕಾಣುತ್ತಾರೆ. ವಿಷ್ಣುವಿನ ಆರಾಧಕರು 'ಶ್ರೀನಿವಾಸ'ನೆಂದು ಸುಂದರ ಹರಿಬಿಂಬವನ್ನು ಕಾಣುತ್ತಾರೆ. ಮುಂಚೆ ಜೈನವಿಗ್ರಹವೆಂದು ಆ ಮತ ಪ್ರಾಬಲ್ಯದ ಕಾಲದಲ್ಲಿ ಜೈನರು ಅದನ್ನೇ ಆರಾಧಿಸಿದರೆಂದೂ ಹೇಳುತ್ತಾರೆ. ಆ ಸುಂದರ ಮೂರ್ತಿಯು, ಭಾವಿಸಿ ಬಂದವರಿಗೆ, ಅವರವರ ಅಂತರಂಗದಲ್ಲಿನ ಭಕ್ತಿಮೂರ್ತಿಯ ಭಾವವನ್ನೇ ತೋರಿ ಈಗಲೂ ಸರ್ವರ ಮನವನ್ನೂ ಸೆಳೆ ಯುವ ಸುರೂಪದ ಕಣ್ಮಣಿಯಾಗಿ, ಭಕ್ತರ ಅಭೀಷ್ಟಗಳನ್ನು ಅವರವರ ಮನ ದಂತೆ ಕರುಣಿಸುತ್ತಿದೆ. ಗೀತೆಯೂ ಅಂತೆಯೇ ಇದೆ; ಆ ಭಕ್ತರ ಭಕ್ತಿಭಾವ

ಮೂಡಿ ತನ್ಮಿತನ್ನು ಆತ್ಮವನ್ನೇ ತೋರುವ ಪರಿಶುದ್ಧ ಕನ್ನಡಿಯಂತಿದೆ. ಗೀತೆಯು ಎಲ್ಲ ಯೋಗಗಳ ಸಮನ್ವಯ; ಸಾಂಖ್ಯ, ವೇದ, ವೇದಾಂತ, ಉಪ ನಿಷತ್, ಶಾಸ್ತ್ರ, ಸೂತ್ರಗಳನ್ನೆಲ್ಲ ಸೂರೆಗೊಂಡಿದೆ. ಇವೆಲ್ಲದರ ತತ್ತ್ವಗಳೂ ಭಾವಗಳೂ ಸಾರವಾಗಿ ಅದರಲ್ಲಿ ಅಡಕವಾಗಿವೆ. ಯೋಗಿಗಳಿಗೆ, ತತ್ತ್ವದರ್ಶಿ ಗಳಿಗೆ, ಪ್ರತಿಭಾಶಾಲಿಗಳಿಗೆ ಬೇಕಾದ ಪ್ರಯೋಜನಕಾರಿಯಾದ, ಮಾರ್ಗದರ್ಶಿ ಯಾದ ಗ್ರಂಥ ಗೀತೆಯಾದರೂ, ಪಾಪಿಗಳಿಗೆ, ಪಾಮರರಿಗೆ, ಸಾಧಕರಿಗೆ ಇನ್ನೂ ಹೆಚ್ಚಿನ ಅಗತ್ಯವಾದ, ಉಪಕಾರಿಯಾದ ಮಾರ್ಗದರ್ಶಿಯಾದ ಗ್ರಂಥ ವೆಂದು ನನ್ನ ಭಾವನೆ. ಪುಣ್ಯವಂತನಾದವನಿಗೆ, ಭಕ್ತನಿಗೆ, ಭಗವಂತ ಬೇಕು. ಪಾಪಿಗೆ, ಪರದೇಶಿಗೆ, ಪಾಮರನಿಗೆ ಭಗವಂತ ಇನ್ನೂ ಅಗತ್ಯವಾಗಿ ಬೇಕು; ಹೆಚ್ಚಿನದಾಗಿ ಬೇಕು; ಬೇಕೇಬೇಕು. ಪುಣ್ಯಪುರುಷನಾದ ಭಕ್ತನ ಮೇಲೆ ಭಗವಂತನಿಗೆ ಪ್ರೀತಿ ಇರಬಹುದು; ಆದರೆ ಪಾಪಿಯು, ಪಾಮರನ, ಪರದೇಶಿಯ ಮೇಲೆ ಹೆಚ್ಚು ಮಮತೆ, ಹೆಚ್ಚು ಕರುಣೆ, ಕರುಣಾಸಿಂಧುವಿಗೆ ಏಕೆಂದು ಕೇಳ ಬಹುದು. ಪುಣ್ಯಪುರುಷನಾದ ಭಕ್ತನ ಮೇಲೆ ಪ್ರೀತಿ ಪುಣ್ಯವಂತ ಭಕ್ತ ನಾದುದರಿಂದಲೇ ಹೇಗೋ ಭಗವಂತನಿಗೆ, ಅಂತೇ ಪಾಪಿ ಪಾಮರ ಪರದೇಶಿಯ ಮೇಲೆ, ಪಾಪಿ, ಪರದೇಶಿ, ಪಾಮರನಾಗಿರುವುದರಿಂದಲೇ ಹೆಚ್ಚು ಪ್ರೀತಿ. ತಾಯಿಗೆ ಹೆಳವು ಮಗುವಿನ ಮೇಲಿರುವ ಪ್ರೀತಿಯಂತೆ. ಒಂಭತ್ತು ಮಕ್ಕಳ ತಾಯಿ ಮಿಕ್ಕ ಎಂಟು ಮಕ್ಕಳು ಪ್ರವರ್ಧಮಾನಕ್ಕೆ ಬಂದಿರುವದನ್ನು ನೋಡಿ ನಲಿಯುವಳು, ಪ್ರೀತಿಸುವಳು; ಆದರೆ ಈ ಹೆಳವು ಮಗು ಹೆಳವಾದ್ದರಿಂದಲೆ, ಪ್ರವರ್ಧಮಾನಕ್ಕೆ ಬಾರದಿದ್ದರಿಂದಲೆ ಮಡಿಲಲ್ಲೇ ಹೊತ್ತಿರುವಳು, ಹೆಚ್ಚು ಪ್ರೀತಿಸುವಳು. ಉಳಿದ ಮಕ್ಕಳು ಆ ಹೆಳವನ್ನು ಹೀಯಾಳಿಸಿದರೆ, ಕೋಪಿಸು ವಳು, ಒಲ್ಲಳು. ಶ್ರೀ ಶಂಕರಾಚಾರ್ಯರ ಪ್ರಿಯ ಮುಖ್ಯ ಶಿಷ್ಯರಾದ ಸುರೇಶ್ವರ, ಪದ್ಮಪಾದ, ಹಸ್ತಾಮಲಕ, ತೋಟಕರ ಪೈಕಿ ಪೂರ್ವಾಶ್ರಮದಲ್ಲಿ ಆನಂದಗಿರಿ ಯೆಂದು ಸೇವೆಗೈಯುತ್ತಿದ್ದ ತೋಟಕರು ಮೊದ್ದೆಂದೂ ಶ್ರೀ ಶಂಕರರ ಪ್ರತಿಭಾ ಪಾಠಗಳನ್ನು ಗ್ರಹಿಸಲು ಅಶಕ್ತರೆಂದೂ ಶಿಷ್ಯರಲ್ಲಿ ಭಾವನೆಯಿದ್ದುದರಿಂದಲೇ, ಶ್ರೀ ಶಂಕರರು ಬಟ್ಟೆಯೊಗೆಯಲು ಹೋಗಿದ್ದ ಗಿರಿಯ ಆಗಮನಕ್ಕಾಗಿ, ಬಂದ ಮೇಲೆ ಪಾಠ ಮಾಡಲು ಕಾಯುತ್ತಿದ್ದರು. ಮಿಕ್ಕವರಿಗೆ ಅವಸರ. ಪಾಠ ಪ್ರವಚನ ಬರಲು ನಿಧಾನಿಸಿದ ಗಿರಿಯಿಂದ ತಮಗೆ ತಡವಾಗುವುದೆಂಬ ಉದ್ರೇಕ,

ಬಂದುತಾನೆ ಏನು ಗ್ರಹಿಸಿಯಾನೆಂಬ ಉದಾಸೀನತೆ, ಗಿರಿ ಕಲಿತು ತಾನೆ ಏನು ಪಂಡಿತನಾದಾನೆಂಬ ಅಲಕ್ಷ್ಯ;—ಹೀಗೆಯೇ ಭಾವಿಸಿದ್ದು, ಹೀಗೆಯೇ ಕಾಲ ದಬ್ಬುತ್ತ, ಒಂದಾವರ್ತಿ 'ಎಷ್ಟು ಹೊತ್ತಾದರೂ ಗಿರಿ ಬರಲಿಲ್ಲ. ಬಾರದಿದ್ದರೇನು ನಷ್ಟ? ಆತನೆಂತೂ ಗ್ರಹಿಸಲಾರ' ಎಂಬ ಭಾವನೆಯಲ್ಲಿಯೇ ಪಾಠ ಆರಂಭ ಮಾಡಿರೆಂದು ಇತರ ಶಿಷ್ಯರು ಹೇಳಿದರು. ಶ್ರೀ ಶಂಕರರು ಶಾಂತರಾಗಿ ಕಾದರು. ಶ್ರೀ ಗುರುಗಳ ಕೃಪೆಯಾದರೂ ಎಷ್ಟು ಅಗಾಧ, ಎಷ್ಟು ಶೀಘ್ರ, ಮೂಢನ ಮೇಲೆ! ಕಡಮೆ ಬುದ್ಧಿಯವನ ಮೇಲೆ, ಸೂಕ್ಷ್ಮಗ್ರಾಹಿಯಲ್ಲದವನ ಮೇಲೆ ಮಮತೆ. 'ಇಕೋ, ಬಂದ. ಬರಲಿ'—ಎಂದು ಶ್ರೀಗಳು ಕೃಪಾದೃಷ್ಟಿಯಲ್ಲಿ ನೋಡುವ ವೇಳೆಗೆ ಘನ ಪಾಂಡಿತ್ಯದಿಂದ ಘನವೃತ್ತದಲ್ಲಿ ಶ್ಲೋಕ ಹೇಳುತ್ತ ಬಂದೇ ಬಂದರು, ಮೂಢ ಶಿಷ್ಯ ಆನಂದಗಿರಿ. ಅವರು ಆಗ 'ಭವ ಶಂಕರ ದೇಶಿಕ ಮೇ ಶರಣಂ' ಎಂದು ಗುರುಸ್ತುತಿ ಹೇಳಿಕೊಂಡು ಗುರುಗಳ ಸಮ್ಮುಖಕ್ಕೆ ಬಂದರು. ಆ ಶ್ಲೋಕವೃತ್ತವೇ ಇಂದಿಗೂ ಪ್ರಸಿದ್ಧವಾಗಿದೆ, 'ತೋಟಕವೃತ್ತ' ವೆಂದು. ಅಂತೆಯೇ ಗುರುಕೃಪೆಯು ದಡ್ಡ ಶಿಷ್ಯನಿಗೆ ಹೇಗೆ ಅತ್ಯಗತ್ಯವೋ ಹಾಗೆಯೇ ಪಾಮರನಿಗೆ ಗೀತೋಪದೇಶ ಹೆಚ್ಚಿನ ಅಗತ್ಯವುದ್ದು. ಈ ಭಾವನೆ ಯಿಂದಲೇ ನಾನು ಗೀತೆಗೆ ಕೈಹಾಕಿದುದು. (ಬಾಯಿ ಹಾಕಿದುದೆಂದೇ ಹೇಳ ಬೇಕು.) ಸಂಸ್ಕೃತ ಜ್ಞಾನವಿಲ್ಲ, ಕನ್ನಡ ಹೆಚ್ಚು ಬಾರದು. ಕನ್ನಡ ತಕ್ಕಷ್ಟು ಬಂದರೂ, ಕನ್ನಡ ಭಾಷೆಯಲ್ಲಿ ಆ ಕಾಲದಲ್ಲಿ ಈ ಸದ್ಗ್ರಂಥಗಳು ಅತಿ ವಿರಳ; ಹುಡುಗರ ಕೈಗಂತೂ ಸಿಕ್ಕದಷ್ಟು ವಿರಳ. ಇದ್ದವೂ ಕೂಡ ಕಬ್ಬಿಣದ ಕಡಲೆ ಯಂತೆ ಕಠಿಣವಾಗಿ ಅತಿಗಂಭೀರೋಕ್ತಿಯಲ್ಲಿಯೋ ಶುದ್ಧ ಹಳಗನ್ನಡದಲ್ಲಿಯೋ ಮೆರೆಯುತ್ತಿದ್ದವು. ಆದರೂ ಬಾರದಿರುವ ಇಂಗ್ಲಿಷ್ ಭಾಷೆಯಲ್ಲೇ, ಇನ್ನೂ ವಿದ್ಯಾಭ್ಯಾಸದ ತರುಣದಲ್ಲೇ ಈ ಗೀತಾಭಾಷಾಂತರಗಳನ್ನು ಅರ್ಥವಾಗ ದಿದ್ದರೂ ಓದುವುದು, ಓದುವುದು, ಓದುವುದು.

ಏನು ಹಣೆಯಬರಹವಿದು! ನಮ್ಮ ದೇಶದ ಗ್ರಂಥರಾಜ ಗೀತೆ. ನಮ್ಮ ಸಂಸ್ಕೃತಿಯ ಸನಾತನ ಭಾಷಾಸಾರ್ವಭೌಮನಾದ ಸಂಸ್ಕೃತಭಾಷೆಯಲ್ಲಿದೆ. ನಾನು ಓದಲು ಪ್ರಯತ್ನಿಸಿದುದು ಪರಭಾಷೆಯಲ್ಲಿ. ಬಹಳ ತಮಾಷೆಯಾಗಿದೆ ಪ್ರಸಂಗ. ಬರೆದ ಪಂಡಿತ—ಆಂಗ್ಲೇಯ "Lafcadio Hearne" ಎಂದು ಕಾಣುತ್ತೆ. ಆತ ಜಪಾನಿನಲ್ಲಿ ಸಂಸ್ಕೃತ, ಶಾಸ್ತ್ರಪಂಡಿತ, ಬರೆದು ಅಚ್ಚು

ಹಾಕಿಸಿದ. ಓದುಗರೋ ಅಮೆರಿಕನರು. ಆದರೆ ಗ್ರಂಥ "ಗೀತೆ", ಭಗವದ್ಗೀತೆ. ಈಗಲೂ ಜ್ಞಾಪಕವಿದೆ. ಪುಸ್ತಕಭಂಡಾರದಿಂದ ಅವನ ಉಪನ್ಯಾಸದ "ಗೀತಾ" ಪುಸ್ತಕ ತಂದು "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎನ್ನುವದನ್ನು ಆತನು ಎಷ್ಟು ಸೊಗಸಾಗಿದೆ ಎಂದು ವರ್ಣಿಸಿರುವುದನ್ನು ಓದಿಯೇ, ಅರ್ಥವಾಗದ ನನಗೂ ಭಾವೋದ್ರೇಕದಿಂದ ರೋಮಾಂಚವಾಯ್ತು. ಆ ಕಾಲಕ್ಕೆ ಕನ್ನಡದಲ್ಲಿ ಗೀತಾಭಾಷ್ಯ, ಅನುವಾದಗಳಿದ್ದುವೋ ಇಲ್ಲವೋ, ನನ್ನ ಕೈಗಂತೂ ಸಿಕ್ಕಲಿಲ್ಲ. ಈಗ ತಾನೆ ಕನ್ನಡದಲ್ಲಿ ಎಷ್ಟು ಶ್ರೇಷ್ಠ ಪುಸ್ತಕವಿದ್ದರೆ ತಾನೆ ಓದುವರಾರು? ಅವಕ್ಕೆ ಮನ್ನಣೆಯೆಲ್ಲಿ? ಅವಕ್ಕೆ ಪ್ರಚಾರವೆಲ್ಲಿ? ಬೆಳಕಿಗೆ ಕೂಡ ಬರಲು ಅವಕಾಶವಿಲ್ಲದಾಗ, ಆಗಿನ ಕನ್ನಡ ಪುಸ್ತಕಗಳಿಗೆ ಪ್ರಸಿದ್ಧಪತ್ರಿಕೆ ಕೊಡುವವರಾರು? ನಮ್ಮ ಭಾಷೆ ನಮ್ಮ ಗ್ರಂಥಗಳು ಮೂಲೆಗೊತ್ತಲ್ಪಟ್ಟಿದ್ದವು. ಇಂಗ್ಲಿಷ್ ಓದುವವನೇ ಸಂಭಾವಿತ, ಇಂಗ್ಲಿಷ್ ಭಾಷೆಯೇ ಸಂಭಾವಿತೆ. ಹೋಗಲಿ, ನಮ್ಮ ಸನಾತನಧರ್ಮಗ್ರಂಥಗಳನ್ನು ಓದಿ ತಿಳಿದುಕೊಳ್ಳಲು ಸಾಧ್ಯವಿಲ್ಲವಾದರೂ ಆ ಆಂಗ್ಲಭಾಷೆಯು ನಮ್ಮ ಧರ್ಮಗ್ರಂಥಗಳಲ್ಲಿ ನಮ್ಮ ಮಾತೃಭಾಷೆಗಳಲ್ಲಿ ಮಮತೆಯನ್ನು ಉಂಟುಮಾಡಿದುದಕ್ಕಾಗಿ ಅದಕ್ಕೆ ಋಣಿಯಾಗಿರಬೇಕಾಗಿದೆ. ಭಾಷಾಂತರಗಳಲ್ಲಿ, ಅದರಲ್ಲೂ ಗ್ರಂಥದ ಸಂಸ್ಕೃತಿಯ ಸಂಪರ್ಕವೇ ಇಲ್ಲದ ಭಾಷೆಯ ಭಾಷಾಂತರಗಳಲ್ಲಿ ಓದಿ ತಿಳಿಯಲಾಗುತ್ತದೆಯೆ? ಅಂತಹ ಪವಿತ್ರಗ್ರಂಥದ ಧರ್ಮಮರ್ಮಗಳನ್ನು? ಏನೇ ಆಗಲಿ, ಆಗ ಹುಟ್ಟಿತು ಚಟ. 'ಗೀತೆಯಲ್ಲಿ ಏನಿದೆ?' ಎಂದು ಅದೇ ಬೆನ್ನುಬಿದ್ದು ತಿಳಿಯಲು ಪರದಾಟವೂ ಹತ್ತಿತು. ವಿಚಾರಮಾಡಿದರೆ "ಗೀತೆಯಲ್ಲಿ ಏನಿದೆ?" ಎಂದು ಬರೆಯುವ ಬದಲು "ಗೀತೆಯಲ್ಲಿ ಏನಿಲ್ಲ!" ಎಂದು ನಾಮಾಂಕಿತ ಮಾಡಬಹುದಾಗಿತ್ತು. 'ಮಹಾಭಾರತದಲ್ಲಿ ಕಾಣದ್ದು ಲೋಕದಲ್ಲೇ ಇಲ್ಲ!' ಎಂದು ಹೇಳುವರು. ಇಹವ್ಯಾಪಾರವ್ಯವಹಾರಕ್ಕೆ ಬೇಕಾದ ನೀತಿಗಳೆಲ್ಲ ಕಥಾರೂಪವಾಗಿ ಸನ್ನಿವೇಶಗಳಲ್ಲಿ ಅಡಕವಾಗಿದೆ. ನೀತಿಶಾಸ್ತ್ರ, ರಾಜಕೀಯ, ವ್ಯವಹಾರಜ್ಞಾನವೆಲ್ಲ ತುಂಬಿದೆಯಂತೆ. ಹಾಗೆಯೇ ಗೀತೆಯಲ್ಲಿ ಇಹಕ್ಕೆ ಬೇಕಾದುದೆಲ್ಲ ಮಹಾಭಾರತದಲ್ಲಿರುವಂತೆ ಸಾರರೂಪವಾಗಿ, ಪರಕ್ಕೆ ಬೇಕಾದುದೆಲ್ಲ ಮಹಾಭಾರತದಲ್ಲಿ ಅಡಕವಾದ ಗೀತೆಯಲ್ಲಿ ಅಡಗಿದೆ ಎನ್ನಬಹುದು. ಏನಿಲ್ಲ? ಕರ್ಮ, ಧ್ಯಾನ, ಭಕ್ತಿ, ಜ್ಞಾನ,

ರಾಜಯೋಗಗಳು ಮೊದಲುಗೊಂಡು ಅಭ್ಯಾಸ, ವೈರಾಗ್ಯಮಾರ್ಗವೆಲ್ಲ ಒಂದು ಬಿಟ್ಟಿದೆ, ಸರ್ವಕಾಲ ಸರ್ವಜನಸಾಮಾನ್ಯವಾಗಿ. ಆದಕ್ಕೇ ಟೋಕಿಯೋ ವಿದ್ಯಾನಿಲಯದ ಆಂಗ್ಲ ಪಂಡಿತ ಅಮೇರಿಕನರಿಗೆ ತತ್ತ್ವಜ್ಞಾನ ಉಪದೇಶಕ್ಕಾಗಿ ಉಪನ್ಯಾಸಮಾಡಿದ ಈ ಕಾಲದಲ್ಲಿ ಆಗಿನ ಗೀತೆಯನ್ನು ತೆಗೆದುಕೊಂಡದ್ದು. ಅದಕ್ಕೇ ಅದು ಶ್ರೀಮದ್ಭಗವದ್ಗೀತಾ! ಶಾಸ್ತ್ರಗಳಲ್ಲಿ ಶಾಸ್ತ್ರ, ಗೀತಾ! ನಮಗೆ ಬಳುವಳಿಯಾಗಿ ಬಂದ ನಮ್ಮ ಸ್ವಂತ ತಾತನ ಆಸ್ತಿಯಾದ ಈ ಮಹದ್ಗ್ರಂಥ ದಲ್ಲಿ ಏನಿದೆ ಎಂದಾದರೂ ನಾವು ನೋಡಬೇಡವೆ? ಈ ಪರದಾಟದಲ್ಲಿ, ತಿಳಿಯಬೇಕೆಂಬ ಹುಚ್ಚಿನಲ್ಲಿ ಗೀತಾಪ್ರಸ್ತಾಪ ಯಾವ ಹರಿಕಥೆಯಲ್ಲಾದರೂ ಕೇಳುವುದೇ. ಗೀತಾ ಉಪನ್ಯಾಸವನ್ನು ತಿಳಿಯದಿದ್ದರೂ ಕೇಳಲು ಬಾಯಿ ಬಿಟ್ಟು ಕೂಡುವುದೇ. ಗೀತಾ ಭಾಷಾಂತರಗಳನ್ನು, ಭಾವವಿಲ್ಲದಿದ್ದರೂ ಓದು ವುದೇ. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ." ಒಳ್ಳೆಯದು, ಓದುವುದು, ಓದೋಣ. ಉತ್ತೀರ್ಣವಾಗುವುದು, ಆಗದಿರುವುದು ನನಗೆ ಸೇರಿದು ದಲ್ಲ ಎಂದು ವಿದ್ಯಾರ್ಥಿಯ ದೆಸೆಯಲ್ಲಿ ಓದಿದ್ದೂ ಓದಿದ್ದೇ. ವೈದ್ಯವೃತ್ತಿ ಹೊಟ್ಟೆಯ ಪಾಡಿಗೆ ಮಾಡುತ್ತ ರೋಗಿಗೆ ವಾಸಿಯಾಗಲಿ, ವಾಸಿಯಾಗದಿರಲಿ, 'ಫಲ ಕಟ್ಟಿಕೊಂಡು ನನಗೇನು? ಎಂದು ಔಷಧಿ ಕೊಟ್ಟದ್ದೂ ಕೊಟ್ಟದ್ದೇ. ಖಜಾನೆ ಅಧಿಕಾರಿಗೆ ಇರುವಂತೆ ನಮಗೂ ಕರ್ಮದಲ್ಲಿ ಅಧಿಕಾರ, ಕರ್ಮ ಫಲ ನಮ್ಮದಲ್ಲ. ಖಜಾನೆಯಲ್ಲಿನ ಹಣದಲ್ಲಿ ಒಂದು ಚಿಕ್ಕ ಕವಡೆಯೂ ಖಜಾನೆಯ ಅಧಿಕಾರಿಯ ಉಪಯೋಗಕ್ಕಲ್ಲ. ಎಲ್ಲವೂ ರಾಜ್ಯದ ಹಣ, ಸರ್ವರ ಸ್ವತ್ತು. ಅದು ದುರ್ವಿನಿಯೋಗವಾಗದಂತೆ, ಕರಾರುವಾಕು ನಿಯಮದಪ್ರಕಾರ ಖರ್ಚಾಗುವಂತೆ, ಅಪ್ಪಣೆಯ ಪ್ರಕಾರ ಹಣ ಕಟ್ಟಿದುದನ್ನು ತೆಗೆದುಕೊಳ್ಳು ವುದು, ತೆರಬೇಕಾದವರಿಗೆ ಕೊಡುವ ಅಧಿಕಾರ ಆ ಅಧಿಕಾರಿಗೆ ಉಂಟೇ ಹೊರತು, ಖಜಾನೆಯ ಹಣ ತನ್ನದೆಂಬ ಭಾವನೆಯಿಂದ ಒಂದು ಕುರುಡುಕಾಸು ಉಪಯೋಗಿಸಿಕೊಂಡರೂ ದುರ್ವಿನಿಯೋಗದ ಅಪವಾದ ಬೀಳುವುದು ಅವನ ಮೇಲೆ. ನಮಗಿರುವ ಕರ್ಮಫಲದ ಅಧಿಕಾರವಾದರೂ ಅಷ್ಟೆ. ಅವ ನೇಮಿಸಿ ದಲ್ಲಿ, ಅವ ಕೊಟ್ಟ ಕೆಲಸವನ್ನು, ಅವನ ಸೇವೆಗಾಗಿ, ಅವನದೆಂದು, ಫಲವನ್ನು ಅವನಿಗೆ ಸಮರ್ಪಣೆಮಾಡಿ, ಏನು, ಏಕೆ ಎಂದು ಕೇಳದೆ, ದೂಡಿದಲ್ಲಿ ದುಡಿಯುವ ಅಧಿಕಾರವಷ್ಟೇ ನಮ್ಮದು. ಕಮುಕ್ ಕಿಮುಕ್ ಎನ್ನಬಾರದು.

ಎಂತಲೇ ನಾನು ಪ್ರಯತ್ನಿಸಿದ್ದೂ ಪ್ರಯತ್ನಿಸಿದ್ದೇ. ಫಲ ನನ್ನದೂ ಅಲ್ಲ; ಗೀತಾರ್ಥವಾಯಿತೆಂದೂ ಹೇಳಲಾರೆ. ಅಷ್ಟು ಸುಲಭವಾಗಿ ಕಂಡರೂ ಕಬ್ಬಿಣದ ಕಡಲೆ ಈ ಗೀತೆ. ಇದರಲ್ಲಿನ ಮರ್ಮ ಧರ್ಮಸೂಕ್ಷ್ಮಗಳನ್ನರಿಯಲು ಕಷ್ಟ. "ಅರ್ಥವಾಗುವುವೇ ಇಲ್ಲವಲ್ಲ, ಏನು ಸ್ವಾಮಿ ಇದು?" ಎಂದು ಒಂದಾವರ್ತಿ ಒಬ್ಬ ಗುರುಗಳನ್ನು ಕೇಳಿಕೊಂಡೆ. "ಅರ್ಥವಾಗಿಬಿಟ್ಟರೆ ಓದುವುದು ಬಿಟ್ಟು ಬಿಡುತ್ತೀ, ಇಷ್ಟೇ ತಾನೆ ಗೀತಾರ್ಥ ಎಂದು. ಓದುತ್ತಾ ಇರು. ಗೀತಾಪಠನ ಒಳ್ಳೆಯದು. ಅರ್ಥವಾಗದಿರುವುದು ಅದಕ್ಕೇ" ಎಂದುಬಿಟ್ಟರು. ಶ್ರೀ ರಮಣ ಋಷಿಗಳಲ್ಲಿ ಒಬ್ಬ ನನ್ನಂಥ ಮೂಢ ಹೇಳಿಕೊಂಡ: 'ನನ್ನ ಪ್ರಾರ್ಥನೆಯೇ ಸಫಲವಾಗಲಿಲ್ಲ, ಏನು ಮಾಡಲಿ?' ಎಂದ. ಅದಕ್ಕೆ ಶ್ರೀ ರಮಣರು ಹೇಳಿದರು: 'ನಿನ್ನ ದೇವತಾಪ್ರಾರ್ಥನೆ ಸಫಲವಾಗಿಬಿಟ್ಟರೆ, ನಿನ್ನ ಪ್ರಾರ್ಥನೆಯಿಂದ ದೇವದರ್ಶನವಾಗಿಬಿಟ್ಟರೆ, ಇನ್ನು ಸಿದ್ಧಿಯಾಗಿಬಿಟ್ಟಿತೆಂದು ನೀನು ಪ್ರಾರ್ಥನೆಯನ್ನೆ ಬಿಟ್ಟುಬಿಡುತ್ತೀ. ಅದರಿಂದಲೇ ದೇವನು ಕರುಣಿಸಿ, ನೀನು ಪ್ರಾರ್ಥನೆಯನ್ನು ಎಡೆಬಿಡದೇ ಮಾಡುತ್ತಲೇ ಇರಲೆಂದು, ನಿನ್ನ ಪ್ರಾರ್ಥನೆಯನ್ನು ಸಫಲಮಾಡಿಲ್ಲ. ನಿನ್ನ ಒಳ್ಳೆಯದಕ್ಕೇ ಸಫಲವಾಗದಿರುವುದು. ಮಾಡು, ಇನ್ನೂ ಮಾಡು ಪ್ರಾರ್ಥನೆಯನ್ನು; **ಪ್ರಾರ್ಥನೆಯೇ ಪ್ರಾರ್ಥನೆಯ ಫಲ**' ಎಂದರು ಭಾವಪೂರಿತವಾಗಿ. ಹಾಗೆ, ನಮಗೆ ಗೀತಾರ್ಥವಾಗದಿರುವುದು ಒಂದು ವಿಷಯಕ್ಕೆ ಒಳ್ಳೆಯದೇ. ಅರ್ಥವಾಗಲಿಲ್ಲವೆಂದು ಪುನಃ ಪುನಃ ಪಠಣಕ್ಕಾದರೂ ಸದವಕಾಶವಿದೆ.

ಆದರೂ ಅರ್ಥವಾಗಿದೆಯೆಂದು ಬರೆಯಹತ್ತಿದ್ದೇನೆ. ಒಬ್ಬ ನನ್ನಂತಹ ಶಿಷ್ಯನಿಗೆ ಒಂದು ಕಠಿಣಸಮಸ್ಯೆಯನ್ನು ಒಬ್ಬ ಗುರುಗಳು ವಿಸ್ತರಿಸಿ ಹೇಳಿದರು. ಮಾರನೆಯ ದಿನ ಪಾಠದಲ್ಲಿ ಶಿಷ್ಯ ಆ ಪಾಠ ಅರ್ಥವಾಗಿಲ್ಲವೆಂದು ಪ್ರಾರ್ಥಿಸಿದ. ಪುನಃ ಹೇಳಿದರು. ಮೂರನೇ ದಿನವೂ ಅರ್ಥವಾಗಿಲ್ಲ. ಪುನಃ ಹೇಳಬೇಕೆಂದು ಕೋರಿದ. ಹೇಳಿದರು. ಹೀಗೆಯೇ ಒಂದು ವಾರ, ಆ ಒಂದು ಸಮಸ್ಯೆಯ ಪಾಠವೇ ಜರುಗಿತು. ಅನಂತರ ಪ್ರವಚನ ಮುಂದೆ ಸಾಗುವ ಮುನ್ನ ಏನೂ ಕೇಳದಿದ್ದ ಶಿಷ್ಯನನ್ನು ಗುರುಗಳು, "ಅರ್ಥವಾಯಿತೇ ಆ ಸಮಸ್ಯೆ?" ಎಂದು ಕೇಳಿದರು. ಶಿಷ್ಯ "ಆಯಿತು" ಅಂದ. ಗುರುಗಳು "ಏನು ಅರ್ಥವಾಯಿತು? ಹೇಳು" ಅಂದರು. ಶಿಷ್ಯ "ಅದು ನನಗೆ ಅರ್ಥವಾಗುವುದಿಲ್ಲವೆಂದು ಅರ್ಥ

ವಾಯಿತು" ಎಂದು ಒಪ್ಪಿಕೊಂಡು ತಲೆಬಾಗಿ ಕುಳಿತುಬಿಟ್ಟನಂತೆ. ಎಲ್ಲಾ ಓದಿದ ಮೇಲೆ, ಕಲಿತೆವೆಂದು ತಿಳಿದ ಮೇಲೆ, ತಿಳಿದೆವೆಂದು ಭಾವಿಸಿದ ಮೇಲೆ ಗೀತಾರ್ಥವೂ ಪರಮಾತ್ಮಸ್ವರೂಪವೂ ಇಷ್ಟೇ ನಮಗೆ ಅರ್ಥವಾಗುವುದೆಂದು ಕಾಣುತ್ತೆ. ನಮಗೆ ಅರ್ಥವಾಗುವುದಿಲ್ಲವೆಂದು ಭಾನವಾದರೆ ಅರ್ಥವಾದಂತೆಯೆ ಎಂದು ಕಾಣುತ್ತೆ. ಪುನಃ ಪಠನ, ಪುನಃ ಪ್ರಾರ್ಥನೆಯಲ್ಲಿಯೇ ಕಾಲ ದಬ್ಬಿ ಬಿಡೋಣ.

ನನ್ನ ದೃಷ್ಟಿಕೋನವಾದರೋ ಅತಿ ವಿಚಿತ್ರವಾದದ್ದು. ಆಚಾರ್ಯರೂ ಪಂಡಿತರೂ ಜ್ಞಾನದೃಷ್ಟಿಯಿಂದ, ಶ್ರದ್ಧಾ ಭಕ್ತಿಗಳಿಂದ ನೋಡುತ್ತಿದ್ದರು. ನಾನಾದರೋ, ಯತ್‌ಕಿಂಚಿತ್ ಈಗಿನ ಮೂಢ ಸಂದಿಗ್ಧ ಇಹವ್ಯಾಪಾರದಲ್ಲಿ ಲೋಲನಾಗಿ, ಪಾಪಿಗಳಲ್ಲಿ ಪಾಪಿಯಾಗಿ, ಇಲ್ಲದ ಸಲ್ಲದ ಅನುಮಾನಗ್ರಸ್ತನಾಗಿ ಶ್ರದ್ಧಾಭಕ್ತಿಗಳಿಲ್ಲದ ಪಾಮರ. ಶಾಸ್ತ್ರ, ವಿಜ್ಞಾನ ತಿಳಿದವನೆಂದು ಈಗಿನ ಅವಿದ್ಯಾವಿದ್ಯೆಯಿಂದ, ಎಲ್ಲದರಲ್ಲೂ ಅಪನಂಬಿಕೆಯಿಂದ, ಸಲ್ಲದ ಸಂಶಯಗಳಿಂದ ತೂಗಿನೋಡುವ ಚಪಲಸ್ವಭಾವದವ.

ಈ ದೃಷ್ಟಿಕೋನದಿಂದಲೆ ಎಲ್ಲವನ್ನೂ (ಪವಿತ್ರ ವಸ್ತುಗಳೆಂಬುದೇ ಇಲ್ಲವೆಂಬ ಭಾವ) ಇಣಿಕಿ ಇಣಿಕಿ ನೋಡುವ ಈಗಿನ ನನ್ನಂತಿರುವ ಪಾಮರ ಬಂಧುಗಳಿಗೆ, ಈ ಪಾಮರನ ಹರಟೆರೂಪವಾದ ಈ "ಗೀತೆಯಲ್ಲಿ ಏನಿದೆ?" ಎಂಬುದು ರುಚಿಸೀತೇನೋ ಎಂಬ ಚಪಲದಿಂದ, ನಾನು ಗೀತಾರ್ಥಮಾಡಿಕೊಳ್ಳಲು ಬರೆದುಕೊಳ್ಳುತ್ತಿದ್ದ ವಿಷಯಗಳನ್ನೇ ಸಂಗ್ರಹಿಸಿ, ಅವರ ಮುಂದಿಟ್ಟಿದ್ದೇನೆ.

**ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಂ |**
**ಯತ್ಕೃಪಾ ತಮಹಂ ವಂದೇ, ಪರಮಾನಂದಮಾಧವಮ್ ||**

ಎಂದು ಗೀತಾಧ್ಯಾನದಲ್ಲಿನ ಅಷ್ಟಮಶ್ಲೋಕ (ಅಷ್ಟಮಾವತಾರ ಕೃಷ್ಣ)ದಲ್ಲಿ ಹೇಳಿರುವಂತೆ ಯಾವ ಪರಮಾನಂದಸ್ವರೂಪನಾದ ಶ್ರೀಕೃಷ್ಣಪರಮಾತ್ಮನ ಕೃಪೆಯೊಂದುಂಟಾದರೆ ಮೂಕನು ಕೂಡ ವಾಚಾಳಿಯಾಗಿಯೂ ಹೆಳವ (ಕುಂಟ)ನು ಕೂಡ ಪರ್ವತವನ್ನು ದಾಟಲು ಸಮರ್ಥನಾಗಿಯೂ ಆಗುವನೋ ಆತನನ್ನು ನಮಸ್ಕರಿಸುತ್ತೇನೆ ಎನ್ನುವ ಧೈರ್ಯದ ಮೇಲೆ ನಾನು 'ಗೀತೆಯಲ್ಲಿ ಏನಿದೆ?' ಎಂದು ಸಮರ್ಥಿಸಲು ದೈನ್ಯದಿಂದ ಹೊರಟಿರುವೆನಷ್ಟೆ. ಈ ರೀತಿ ಅಬಲರನ್ನು ಸಬಲರನ್ನಾಗಿ ಮಾಡುವದು ಮಾಧವನಿಗೆ ಒಂದು ಪರಮಾನಂದ.

ಮಗು ತಪ್ಪುಹೆಜ್ಜೆಗಳನ್ನಿಟ್ಟುಕೊಂಡು ನಡೆಯಲು ಪ್ರಯತ್ನಿಸುವುದು ಕಂಡು 'ಬಾ, ಬಾ, ಮುಂದೆ ಬಾ' ಎಂದು ಚಪ್ಪಾಳೆ ತಟ್ಟಿ ಆನಂದಿಸುವ ಮಾತೆಯ ಪರಮಾನಂದ. ಒಂದು ತೊಡಕು ಸಮಸ್ಯೆಯನ್ನು ಬಗೆಹರಿಸಲು ಹೇಳಿ ಹುಬ್ಬು ಗಂಟುಹಾಕಿಕೊಂಡು ಪ್ರಯತ್ನಿಸುತ್ತಿರುವ ಶಿಷ್ಯನನ್ನು ಕಂಡು'ಸರಿ, ಮುಂದಕ್ಕೆ?' ಎಂದು ಹರ್ಷಿಸುತ್ತಿರುವ ಗುರುವಿನ ಪರಮಾನಂದ. ತಪ್ಪು ಹೆಜ್ಜೆಯಲ್ಲಿ ತತ್ತರಿಸಿದರೆ, ಬಾಚಿ ತಬ್ಬಿ ಆಸರೆ ಕೊಡಲು ಮಾತೆಯಿರುವಳು ಹಿಂದೆಯೇ. ಸಮಸ್ಯೆ ಬಗೆಹರಿಸುವುದರಲ್ಲಿ ತಪ್ಪಾಗಿ ಬೆಪ್ಪಾದರೆ ಸೂಚನೆ ಕೊಟ್ಟು ಸರಿಪಡಿಸಲು ಹಸನ್ಮುಖನಾದ ಗುರುವಿರುವನು. ಮುಂದೆಯೇ, ಅಂತೇ ಪರಮಾನಂದ ಮಾಧವನೂ ಮೂಕನು ತಪ್ಪು ಮಾತಾಡಿದರೆ ತಿದ್ದಲೂ, ಹೆಳವನು ಹಾದಿಯಲ್ಲಿ ಆಯಾಸಗೊಂಡರೆ ಸಹಾಯನಾಗಲೂ ಹಿಂದೆಯೂ ಮುಂದೆಯೂ ಕಾವಲಿರುವನು. ಎಂಬುದೊಂದೇ ಧೈರ್ಯ ನನಗೆ.

ಈ ಧರ್ಮೋಪದೇಶವನ್ನು ಯುದ್ಧರಂಗದ ಹೊಸಲಿನಲ್ಲಿ ಸಾಂಗವಾಗಿ ಹೇಳುವುದಕ್ಕೂ, ಗಮನವಿಟ್ಟು ಕೇಳುವುದಕ್ಕೂ ಸಾಧ್ಯವೆ? ಎಂದು ಕುತಾರ್ಕಿಕರು ಸಂದೇಹಪಡುವರು. ಶ್ರೀರಾಮಕೃಷ್ಣರು ಹೇಳಿರುವಂತೆ ನಾವು ಮಾವಿನ ತೋಪಿಗೆ ಹಣ್ಣು ಸವಿಯಲಿಕ್ಕೆ ಹೋದವರು, ಗಿಡಗಳನ್ನೆಣಿಸುವ ವ್ಯಾಕುಲಕ್ಕೆ ಏಕೆ ಹೋಗಬೇಕು? ಯಾರು ಗಿಡ ನೆಟ್ಟದ್ದರೇನು? ನಮಗೆ ಬೇಕಾದ ಹಣ್ಣು ಆರಿಸಿ ತೆಗೆದುಕೊಂಡು ಸವಿಯುಣದೆ ಒಣ ತರ್ಕ ಜಿಜ್ಞಾಸಗಳು ಏಕೆ?

ಗೀತೆಯಲ್ಲಿ ಅಮೂಲ್ಯ ರತ್ನಗಳಿವೆ ಎನ್ನುವುದರಲ್ಲಿ ವಿವಾದವೆ ಇಲ್ಲ, ಧರ್ಮಸೂತ್ರದ ಸಾರಾಂಶವಿದೆ ಎನ್ನುವುದರಲ್ಲಿ ಭಿನ್ನಾಭಿಪ್ರಾಯವೆ ಇಲ್ಲ, ತರ್ಕಾಸ್ಪದವಾದ ತತ್ವವಿಚಾರಗಳೇ ಇಲ್ಲ. ಸರ್ವಸಮ್ಮತವಾದ, ಸರ್ವಹಿತವಾದ ಧರ್ಮಕರ್ಮಮರ್ಮಗಳನ್ನೆ ಸುಲಲಿತವಾಗಿ ಹೇಳಿದೆ. ಗಾಢತತ್ತ್ವಗಳನ್ನು ಗಂಟಲಿಗೆ ಇಳಿಯುವಂತೆ ಹದಮಾಡಿದೆ. ಇಂತಹ ಸವಿಯುಣದೆ, ಅದರ ವಿಷಯದಲ್ಲಿ ತರ್ಕವೇಕೆ? ಕಾವ್ಯವೆಂದೇ ಇಟ್ಟುಕೊಳ್ಳಿ. ಅದರ ಮಹತ್ತಿಗೆ ಲೇಶವೂ ಮೊಟಕಿಲ್ಲ. ಇಂತಹ ಕಾವ್ಯವನ್ನು ನಮಗೆ ದಯಪಾಲಿಸಿದ ಕವಿಯಾದರೂ ಎಂತಹ ಮಹಾಮಹಿಮನಿರಬೇಕು! ಭಗವದಂಶವೇ, ಭಗವದವತಾರವೇ! ಎಷ್ಟು ಚಮತ್ಕಾರವಾಗಿ ಹೆಣೆದಿದ್ದಾನೆ!

ಆತನ ಜ್ಞಾನಭಂಡಾರದ, ಬುದ್ಧಿವಿಕಾಸದ ವ್ಯಾಸವಾದರೂ ಏನು! ಅನುಭವಾಮೃತದ ಸವಿಯಾದರೂ ಎಷ್ಟು! ಕಾಲಕಾಲಕ್ಕೂ, ದೇಶದೇಶಗಳಲ್ಲೂ ತಲೆದೂಗಿಸುವ ಕವಿತೆ! ಇದೇನು ಹರಡಿದ ರತ್ನಮಣಿಗಳಲ್ಲ. ಸೊಗಸಾಗಿ ಜೋಡಿಸಿ ಹೆಣೆದ ವಜ್ರಮಾಲಾ; ಕೆತ್ತಿದ ನಯನಮನೋಹರ ಆಭರಣ! ಅಧ್ಯಾಯ ಅಧ್ಯಾಯಕ್ಕೂ, ಶ್ಲೋಕ ಶ್ಲೋಕಕ್ಕೂ ಸೂತ್ರವಿದೆ; ಪ್ರಶ್ನೆಗೂ ಉತ್ತರಕ್ಕೂ ವೈಖರಿಯಿದೆ, ಸಂಶಯಗಳಿಗೆ ಪರಿಹಾರವಿದೆ, ತತ್ತ್ವವಿಚಾರ ವಿವರಣೆಯಲ್ಲಿ ಜಾಣ್ಮೆಯಿದೆ. ಹೀಗೆಯೇ ನಡೆಯಬೇಕು, ಹಾಗೆಯೇ ಮಾಡಬೇಕು ಎಂಬ ವಿಧಿಯಿಲ್ಲ. ವಿಚಾರ ವಿವರಣೆಗಳಾದ ಮೇಲೆ ಅದರ ಅಭ್ಯಾಸಕ್ಕೆ ಅನುಸರಣೆಗೆ (೧೮ ಅ, ೬೩ ಶ್ಲೋ.) "ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು" ಎಂದು 'ಮಯಾ ಗುಹ್ಯಾತ್ ಗುಹ್ಯತರಂ ಆಖ್ಯಾತಂ ಜ್ಞಾನಂ" ತನ್ನಿಂದಲೇ ಅತಿ ಗೋಪ್ಯವಾದ ಜ್ಞಾನಸ್ವರೂಪವು ಪ್ರತಿಪಾದಿಸಲ್ಪಟ್ಟಿದ್ದರೂ ಅದನ್ನೆಲ್ಲ ಚೆನ್ನಾಗಿ ವಿಮರ್ಶೆ ಮಾಡಿದನಂತರ ನಿನಗೆ ಹೇಗೆ ತೋರುವುದೋ ಹಾಗೆ ವರ್ತಿಸು, ನಿನ್ನಿಚ್ಛೆ ಬಂದಂತೆ ಮಾಡು, ನಿರ್ಬಂಧವೇನೂ ಇಲ್ಲ ಎಂದು ಕಾರ್ಯಸ್ವಾತಂತ್ರ್ಯವನ್ನು ಸ್ವಬುದ್ಧಿಗೆ ಬಿಡುತ್ತಾನೆ. ನೀರಿಗೆ ಕುದುರೆಯನ್ನು ತೆಗೆದುಕೊಂಡು ಹೋಗಬಹುದು; ಆದರೆ ಕುದುರೆಯನ್ನು ನೀರುಕುಡಿಯುವಂತೆ ಮಾಡಲಾಗುವುದಿಲ್ಲ. ನೀರು ಕುಡಿಯುವುದಕ್ಕೆ ದಾಹ ಬೇಕು. ಅಂತೆಯೇ ಧರ್ಮತತ್ತ್ವವನ್ನು ಎಷ್ಟಾದರೂ ವಿಮರ್ಶೆ ಮಾಡಬಹುದು. ಅದನ್ನು ಗ್ರಹಿಸುವುದಕ್ಕೂ ದಾಹ ಬೇಕು. ಗೀತಾಪಾನಮಾಡಲು ಪರಮಾತ್ಮನ ವಿಷಯಕವಾದ ದಾಹ ಬೇಕು. ಆಗ ಅಮೃತಪಾನದ ಆನಂದ ಉಂಟು. ಯಾವುದಾದರೂ ಸತ್ಕಾಲಕ್ಷೇಪದಲ್ಲಿ, ಪರಾತ್ಪರ ವಿಷಯ ಚರ್ಚೆಯಲ್ಲಿ, ನಾನು ಅನ್ಯಮನಸ್ಕನಾಗಿದ್ದರೆ, ಸರಿಯಾದ ಗಮನ ಕೊಡದಿದ್ದರೆ, ನನ್ನ ತೀರ್ಥರೂಪರು ಬೇಜಾರಿನಿಂದ ಹೇಳುತ್ತಿದ್ದರು: 'ಈ ಆಸಕ್ತಿಗೂ ಸಂಸ್ಕೃತಿ ಬೇಕು, ಕೇಳಿಕೊಂಡು ಬಂದಿರಬೇಕು, ಭಗವದನುಗ್ರಹವಿರಬೇಕು. ಇಲ್ಲವಾದರೆ ಏನು ಪ್ರಯೋಜನ? ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ,' ಎಂದು. ಮನುಷ್ಯನಾಗಿ ಹುಟ್ಟುವುದು ದುರ್ಲಭ. ಅದರಲ್ಲೂ ಬ್ರಹ್ಮವಿದ್ಯೆಗೆ ಅಧಿಕಾರಿಯಾಗಿ ಹುಟ್ಟುವುದು ಇನ್ನೂ ದುರ್ಲಭ. ಅದು ಸಂಭವಿಸಿದಾಗಲೂ, ಆ ಸದವಕಾಶ ಸಾರ್ಥಕಪಡಿಸಿಕೊಂಡು, ಸನ್ಮಾರ್ಗ ಪ್ರವರ್ತಕನಾಗದಿದ್ದರೆ ಎಲ್ಲಾ ವ್ಯರ್ಥ.

ಇದಕ್ಕೂ ಪೂಜಾಫಲವಿರಬೇಕು, ಹಿಂದಿನ ವಾಸನೆ ಬೇಕು. ಯೋಗಭ್ರಷ್ಟನಾದವನು, ಸಾಧನೆಯನ್ನು ಪೂರ್ತಿಮಾಡಲು ಸಾಧ್ಯನಾಗದವನು, ಶ್ರೀಮಂತರ ಗೃಹದಲ್ಲಿ ಜನಿಸುವನೆಂದು ಇದಕ್ಕೇ ಸ್ವಾಮಿಯು ಹೇಳುವುದು. ಸತ್ಕುಲದಲ್ಲಿ ಹುಟ್ಟಿ ತನ್ನ ಯೋಗಸಾಧನೆ ಪೂರ್ತಿಗೊಳಿಸುವನು. ಈಗಿನ ಆಸಕ್ತಿಗೆ ಹಿಂದಿನ ಪುಣ್ಯ ಬೇಕು.

ಒಂದು ಕಪಿಲೆಭಾವಿಯಲ್ಲಿ ಎರಡು ಭಾಂಡಗಳು ನೀರನ್ನು ಹೊತ್ತು ತಂದು ತಂದು ತೋಟಕ್ಕೆ ಸುರಿಯುತ್ತ ಇದ್ದವು. ಒಂದು ನೀರು ಸುರಿದು ಖಾಲಿಯಾಗಿ ಕೆಳಕ್ಕೆ ಹೋಗುತ್ತ ಇದ್ದಾಗ ನೀರು ತುಂಬಿಕೊಂಡು ಮೇಲಕ್ಕೆ ಬರುತ್ತಿದ್ದ ಕಪಿಲಾಭಾಂಡವನ್ನು ಕುರಿತು ಹೇಳಿತಂತೆ: "ಅಣ್ಣಾ ಏನಿದು! ನಾವು ಎಷ್ಟು ಸಾರಿ ನೀರು ತುಂಬಿ ತುಂಬಿ ಹೊತ್ತುಹೋದರೂ ಖಾಲಿಯಾಗಿಬರುತ್ತೇವೆ! ಏನು ಸಾರ್ಥಕ?' ಎಂದು. ಅದಕ್ಕೆ ತುಂಬಿ ಬರುತ್ತಿದ್ದ ಕಪಿಲಾಭಾಂಡ ಹೇಳಿತಂತೆ: 'ತಮ್ಮ, ಹಾಗೆನ್ನಬೇಡ, ನಾವು ಎಷ್ಟು ಸಾರಿ ಬರಿದಾಗಿ ಕೆಳಕ್ಕೆ ಬಂದರೂ ತುಂಬಿ ತುಂಬಿ ಪುನಃ ಮೇಲಕ್ಕೆ ಬರುತ್ತೇವೆ. ಗೊಣಗಬೇಡ. ನಾವು ಮತ್ತೊಬ್ಬರಿಗೆ ನಮ್ಮಲ್ಲಿರುವದನ್ನೆಲ್ಲ ಸದ್ವಿನಿಯೋಗ ಮಾಡಿದರೆ ಪುನಃ ಅಖಂಡ ನಿಧಿಯು ನಮ್ಮನ್ನು ತುಂಬುವುದು. ನಾವೆಂದೂ ಬರಿದಾಗಲೊಲ್ಲೆವು" ಎಂದು. ಪರಮಾತ್ಮನ ಕರುಣಾಸಾಗರವು ಕೊನೆಯಿಲ್ಲದುದು. ಆ ಅಮಿತ ಶಕ್ತಿಯು ನಾವು ನಮ್ಮ ಶಕ್ತಿ, ರಹವನ್ನೆಲ್ಲ ಸದ್ವಿನಿಯೋಗ ಮಾಡಿದಷ್ಟೂ ಪುನಃ ಶಕ್ತಿಯಿಂದ ನಮ್ಮನ್ನು ತುಂಬುವುದು. ಸಾಯಂಕಾಲ ಸೂರ್ಯಾಸ್ತಮಯದ ಹೊಂಬೆಳಕಿನಲ್ಲಿ ಆ ಕಪಿಲಾ ಭಾಂಡಗಳೆರಡೂ ಭಾವಿಯ ಕಟ್ಟೆಯ ಕಲ್ಲಿನ ಮೇಲೆ ಕುಳಿತು, ವಿಸ್ತಾರವಾದ ತೋಟವನ್ನು ನೋಡಿ, ಹುಲುಸಾಗಿ ಹಸುರಾಗಿ ಸೊಂಪಿನಿಂದ ಬೆಳೆದು ಸಂಜೆಗಾಳಿಗೆ ತಲೆತೂಗುತ್ತಿದ್ದ ಬೆಳೆಪೈರನ್ನು ನೋಡಿ, ತಮ್ಮ ಕೆಲಸ ಸದ್ವಿನಿಯೋಗವಾಯಿತೆಂದು ಆನಂದಿಸಿದುವಂತೆ. ಈ ಗೀತೆಯಾದರೂ ಅಂತಹದು. ಶ್ರೀಕೃಷ್ಣನು ಅರ್ಜುನನ ನಿರಾಶಾವಾದಕ್ಕೆ 'ಬರಿದಾದಾಗಲೆಲ್ಲ ತುಂಬುವೆ, ನಾನೂ ನಿನ್ನೊಡನೆ ಕೆಲಸಮಾಡುತ್ತಿದ್ದೇನೆ' ಎಂದು ಆ ಕಪಿಲಾ ಭಾಂಡಕ್ಕೆ ಹೇಳಿದಂತೆ ಹೇಳಿ, ನರನಾರಾಯಣ ಸಂವಾದ ರೂಪದಲ್ಲಿ, ಜ್ಞಾನ ಸಾಗರದಿಂದ ಎಲ್ಲರಿಗೂ ಅಮೃತವೆರೆದು ಜಗತ್ಕಲ್ಯಾಣ ಮಾಡಿದ. ಬರಿದಾಗುವುದು ತುಂಬುವುದಕ್ಕೇ; ತುಂಬುವುದು ಬರಿದಾಗುವುದಕ್ಕೇ; ಎರಡೂ ಲೋಕ

ಸೇವೆಗೆ, ನೀನು ನಿಮಿತ್ತಮಾತ್ರ. ಹರಿಯುವುದು ಭಗವತ್ ಚಿಚ್ಛಕ್ತಿ ನಿನ್ನ ಮೂಲಕ. ನೀನು ಬೇಸಾಯಗಾರ, ಸಲಕರಣಿ ಮಾತ್ರ, ಎಂದು ಸಾರುತ್ತೆ.

ಗೀತಾಮೂರ್ತಿಯು ತ್ರಿಮೂರ್ತಿಯ ವಿಗ್ರಹದಂತೆ ಜ್ಞಾನ, ಭಕ್ತಿ, ಕರ್ಮ ಗಳೆಂಬ ಮೂರು ಮುಖ ಉಳ್ಳದ್ದು. ಇವನ್ನು ದರ್ಶಿಸಲು, ಇವರ ಮೂರು ಮಾರ್ಗಗಳನ್ನು ಏಕರೂಪದಲ್ಲಿ ಕಾಣಲು ನಮಗೆ ಹಾಕಿಕೊಂಡಿರುವ ಮುಖ ವಾಡ ಕಣ್ಣಾಟ್ಟಿಗಳನ್ನು ಕಳಚಬೇಕು. ಮನುಷ್ಯನಿಗೆ ಅನೇಕ ದಿನಗಳಿಂದ ಅಭ್ಯಾಸಕ್ಕೆ ಬಂದ ಆ ಮುಖವಾಡಗಳನ್ನು ತೆಗೆಯುವುದು ಬಹಳ ಕಷ್ಟ. ಮನುಷ್ಯನಿಗೆ ತನ್ನ ಕುಂಟುದಾರಿಯಲ್ಲಿ ನೆರವಾಗಿರುವ ಊರುಗೋಲನ್ನು ತೆಗೆದು ಬಿಸುಡುವುದು ಸುಲಭವಲ್ಲ. ಇದನ್ನೆಲ್ಲ ತ್ಯಜಿಸಿ ವಿಶಾಲದೃಷ್ಟಿಯಿಂದ ಸ್ವಂತ ಕಾಲಿನ ಮೇಲೆ ನಿಂತ ಹೊರತು ನಿಜತತ್ತ್ವ ಭಾಸವಾಗುವುದಿಲ್ಲ. ಹಿಂದಿನಿಂದ ರಕ್ತಗತವಾದ ಸಂಶಯಗಳನ್ನೆಲ್ಲ ಬಿಸುಡುವುದೂ, ಬಹು ಮುಖ್ಯ ವೆಂದು ಕಾಪಾಡಿಕೊಂಡು ಬಂದ ಕುರುಡು ನಂಬಿಕೆಗಳನ್ನು ಗಾಳಿಗೆರಚುವುದೂ ಮನುಷ್ಯನಿಗೆ ಸಂಕಟ ಉಂಟುಮಾಡುವಷ್ಟು ಕಷ್ಟವಾಗುವುದು. ಆದರೆ ಅದನ್ನೆಲ್ಲ ತ್ಯಜಿಸಿದ ಹೊರತು ಗೀತಾಸಂದೇಶದ ವಿಶಾಲದೃಷ್ಟಿ, ಸರ್ವಗತ ಆತ್ಮನ ದರ್ಶನ ಆಗಲಾರದು. ಅದಕ್ಕಾಗಿಯೇ ಹೊರಳಿಸಿ ಹೊರಳಿಸಿ ಮುಖ್ಯ ತತ್ತ್ವಗಳನ್ನು ಉಪದೇಶಿಸಿರುವನು ಪರಮಾತ್ಮ.

ನೂರಾರು ಕುರಿಗಳನ್ನು ಮೇಯಿಸಿ ಕಾಪಾಡುತ್ತಿರುವ ಕುರುಬ, ಮಂದೆ ಯಿಂದ ಒಂದು ಕುರಿ ತಪ್ಪಿಸಿಕೊಂಡು ದಿಕ್ಕುಕಾಣದೆ ತಿರುಗುತ್ತಿರುವುದೆಂದು ಕಂಡ ಮೇಲೆ, ಉಳಿದ ನೂರೈದು ಕುರಿ ಸೌಖ್ಯವಾಗಿದೆಯೆಂದು ಸಮಾಧಾನ ದಿಂದ ಮನೆಗೆ ಹಿಂತಿರುಗದೆ, ಆ ತಪ್ಪಿಸಿಕೊಂಡು ದಾರಿ ಕಾಣದೆ ಅರಚುತ್ತಿರ ಬಹುದಾದ ಕುರಿಯನ್ನು ಹುಡುಕಿಕೊಂಡು ತಿರುಗಿ ತಿರುಗಿ, ಅದು ಸಿಕ್ಕಿದರೆ ಅದನ್ನು ಆದರದಿಂದ ಮೈತಡವಿ, ಸುಸ್ತಾಗಿ ತಿರುಗಿ ಕಾಲು ನೊಂದಿರಬಹು ದೆಂದು ಆ ಕುರಿಮರಿಯನ್ನು ಹೆಗಲ ಮೇಲೆ ಹಾಕಿಕೊಂಡು ಸಂತೋಷದಿಂದ ಹಿಂತಿರುಗಿ ಮನೆಗೆ ಬಂದು ಮಂದೆ ಸೇರಿಸಿ, ಮಾರ್ಗ ತೋರಿಸಿ ಮನೆಗೆ ಬರು ವಂತೆ, ಪರಮಾತ್ಮನೂ ಅಖಂಡ ಭಕ್ತವೃಂದದಿಂದ ಸಂತುಷ್ಟನಾಗದೆ ದಾರಿ ತಪ್ಪಿರುವ, ಮಾರ್ಗ ತಿಳಿಯದ, ದುರ್ಬಲರಾದ 'ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ— ಪಾಪಯೋನಯಃ— ದುರಾಚಾರೊ' ಎಲ್ಲರೂ ಪರಾಂಗತಿಯನ್ನು

ಸೇರಲೆಂದು ಎಲ್ಲರ ಸಾಧನಾನುಕೂಲಕ್ಕಾಗಿ ಸರ್ವಪರಿಯಲ್ಲಿ ಎಲ್ಲರಿಗೂ ದಾರಿ ಕಾಣಿಸಿ ತನ್ನಲ್ಲಿಗೆ ಬರಲು ಅನುಕೂಲವಾಗುವಂತೆ ಮಾಡಿರುವುದೇ ಈ ಗೀತೋಪದೇಶ.

ಮಂದೆಯಲ್ಲಿ ಸುರಕ್ಷಿತವಾಗಿರುವ ಕುರಿಗಳ ರಕ್ಷಣೆಗೆಳಿಗೆ ಕುರುಬನ ಕಾವಲು ಹೊರಗಿನ ಶತ್ರುಗಳನ್ನು ತಡೆಗಟ್ಟಲೂ ಹೊರಗಿನ ಘಾತಗಳಿಂದ ಕಾಪಾಡಲೂ ಅತ್ಯಗತ್ಯವಾದರೂ, ಮಂದೆಯಿಂದ ತಪ್ಪಿಸಿಕೊಂಡುಹೋಗಿ, ದಾರಿ ಕಾಣದೆ ಪರದಾಡುತ್ತಿರುವ ಕುರಿಗೆ ಕುರುಬನ ಕಾವಲು ಹೆಚ್ಚಿನ ಅಗತ್ಯವಾಗಿದೆ. ಕಾಯಿದೆ ಕಾನೂನುಗಳು ಪುರಜನಸಾಮಾನ್ಯನಾಗರಿಕರ ರಕ್ಷಣೆಗೆ ಬೇಕಾದರೂ, ಅವು ನಾಗರಿಕರಲ್ಲದ ಜಾರಚೋರರ ರಕ್ಷಣೆಗೆ ಇನ್ನೂ ಹೆಚ್ಚು ಅವಶ್ಯಕವಾಗಿದೆ. ಅವರನ್ನು ಸನ್ಮಾರ್ಗಕ್ಕೆ ತರಲು ದಾರಿತೋರಿ ಕಾಪಾಡಲು ಅಗತ್ಯ. ಗಡಿ ಪಾರು, ಗಲ್ಲಿಗೇರಿಸುವ ಶಿಕ್ಷೆಯು ಮಾತು ಕರುಣಾಕರ ಭಗವಂತನ ಕಾಯಿದೆ ಕಾನೂನುಗಳಲ್ಲಿಲ್ಲ. ತಪ್ಪಿತಸ್ಥರನ್ನು ಸುಶಿಕ್ಷೆಯಿಂದ ಸನ್ಮಾರ್ಗಕ್ಕೆ ತರಲು ಮಾತ್ರ ಅವನ ತತ್ತ್ವ. ಈ ದೃಷ್ಟಿಯಿಂದ, ಯೋಗಿಗಳಿಗೂ ಭಕ್ತವೃಂದಕ್ಕೂ ಸಾಧಕರಿಗೂ ಬೇಕಾಗಿರುವುದಕ್ಕಿಂತ, ಗೀತೋಪದೇಶವು ಭೋಗಿಗಳಿಗೂ ಪಾಮರರಿಗೂ ಅಸಾಧಕರಿಗೂ ಹೆಚ್ಚು ಬೇಕಾಗಿದೆ. ಅವರ ಪರಿಸ್ಥಿತಿಯಲ್ಲಿ ಇಂತಹ ಸದುಪದೇಶವು ಹಿತಕರ. ಆದರಿಂದಲೇ ನಮಗೆ ಗೀತೆಯು ಉಪಯೋಗ ಕರವೆಂದು ನನ್ನ ಭಾವನೆ

ಹಿಂದಿನ ಕಾಲದಲ್ಲಿ, ನಮ್ಮ ಸನಾತನ ಧರ್ಮದಲ್ಲಿ ಮಾನವನು ಕೇವಲ ತನ್ನ ಪಶುಶಕ್ತಿಯ ಮೇಲೆ ನಿಂತಿರಲಿಲ್ಲ, ಅಸ್ತ್ರಶಸ್ತ್ರಗಳ ಬಲದ ಮೇಲೆ ನಂಬಿರ ಲಿಲ್ಲ. ಈಗಿನಂತೆ 'ಅಣುಶಕ್ತಿ; ಆಟಂಬಾಂಬು'ಗಳ ಬಲದ ಮೇಲೆ ಕೂಡ ಯೋಧರು ಭಾರಹಾಕುತ್ತಿರಲಿಲ್ಲ. ತಮ್ಮ ನೀತಿ, ರೀತಿ, ಆತ್ಮಶಕ್ತಿಗಳ ಆಧಾರದ ಮೇಲೆ ನಿಲ್ಲುತ್ತಿದ್ದರು.

ಶ್ರೀಮದ್ರಾಮಾಯಣದಲ್ಲಿ ಲಕ್ಷ್ಮಣನೂ ಇಂದ್ರಜಿತ್ತೂ ಮಹಾಯುದ್ಧದಲ್ಲಿ, ಬಲಾಬಲಗಳು ಸಮನಾಗಿ, ಅಪ್ರತಿಮ ವೀರರಾದ ಈ ಇಬ್ಬರೂ ಹೋರಾಡು ತ್ತಿದ್ದ ಸಮಯದಲ್ಲಿ ಶಕ್ತಿಯಲ್ಲಿ, ಸಾಮರ್ಥ್ಯದಲ್ಲಿ ಒಬ್ಬರನ್ನೊಬ್ಬರು ಮೀರಿಸಿರಲು ಕೊನೆಯ ಶಸ್ತ್ರವನ್ನು ತೊಟ್ಟು ಅದನ್ನು ಇಂದ್ರಜಿತುವಿನ ಮೇಲೆ ಬಿಡುವ ಮುನ್ನ, ಲಕ್ಷ್ಮಣಸ್ವಾಮಿಯು ಆ ಬಾಣವನ್ನು ಸಂಬೋಧಿಸುತ್ತಾನೆ:

“ ಧರ್ಮಾತ್ಮಾ ಸತ್ಯಸಂಧಶ್ಚ
ರಾಮೋ ದಾಶರಥಿರ್ಯದಿ
ಪೌರುಷೇ ಚ ಅಪ್ರತಿದ್ವಂದ್ವಃ
ಶರೇನಂ ಹನ ರಾವಣಿಂ

ಶರಶಕ್ತಿಯಿಂದಲ್ಲ, ಇತರ ಹೊರಬಲದಿಂದಲ್ಲ, ಆತ್ಮಶಕ್ತಿಯಿಂದ. ‘ದಶರಥಪುತ್ರ ನಾದ ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಆಗಿದ್ದರೆ, ಪೌರುಷದಲ್ಲೂ ಅದ್ವಿತೀಯನಾಗಿದ್ದರೆ ರಾವಣಕುಮಾರನಾದ ಇಂದ್ರಜಿತುವನ್ನು ಕೊಲ್ಲು’ ಎಂದು ಬಾಣ ಬಿಡುತ್ತಾನೆ. ಆ ಬಾಣವು ಇಂದ್ರಜಿತುವಿನ ಪ್ರಾಣಾಪಹರಣ ಮಾಡುತ್ತದೆ. ದಶರಥಪುತ್ರರಾದ ರಾಮಲಕ್ಷ್ಮಣರು ಒಂದೆಡೆ, ರಾವಣನೂ ಅವನ ಕುಮಾರನಾದ ಇಂದ್ರಜಿತುವೂ ಒಂದೆಡೆ. ಸಂತತಿರೂಪದ ಧರ್ಮಾ ಧರ್ಮ, ಸತ್ಯಾಸತ್ಯ, ಬಲಗಳ ಪ್ರತಿನಿಧಿಗಳು ಈ ಸತ್ಯಾಸತ್ಯ, ಧರ್ಮಾಧರ್ಮ ಗಳು ಕೂಡ ಪಿತ್ರಾರ್ಜಿತ; ತಾತಮುತ್ತಾತದಿರಿಂದ ಬಂದ ನಮ್ಮ ಸ್ವತ್ತು. ಎಂಥೆಂಥ ಬಾಣಪ್ರಯೋಗಗಳಿಂದ ಹತನಾಗದ ಇಂದ್ರಜಿತ್ತು ಈ ಮಂತ್ರಬಾಣ ದಿಂದ ಹತನಾದುದು, ಇಂದ್ರಜಿತ್ತು ಸತ್ತುದು, ಆ ಬಾಣದ ಪಶುಶಕ್ತಿಯಿಂದ ಅಲ್ಲ; ಅದರ ಹಿಂದಿನ ಮಂತ್ರಶಕ್ತಿಯಿಂದ, ಧರ್ಮ, ಸತ್ಯ, ಆತ್ಮಬಲದಿಂದ ಎಂದು ವೇದ್ಯವಾಗುತ್ತದೆ. ಯುದ್ಧದಲ್ಲೇ ಅಲ್ಲ, ನಮ್ಮ ನಿತ್ಯವ್ಯವಹಾರದಲ್ಲೂ ಈ ಧರ್ಮಸತ್ಯದ ಹಿನ್ನೆಲೆ ಅತಿ ಮುಖ್ಯ. ಅದೇ ಜೀವದ ಸೂತ್ರ. ಅದೇ ಜೀವನದ ಜೀವಾಳ.

ಈ ತತ್ತ್ವವನ್ನೇ ಗೀತೆ ಮುಖ್ಯವಾಗಿ ಉಪದೇಶ ಮಾಡುತ್ತದೆ. ಧರ್ಮ, ಸತ್ಯ ಕ್ಷೀಣಿಸುತ್ತಿರುವ ಈ ಕಾಲದಲ್ಲಿ, ಧರ್ಮ ಸತ್ಯಗಳಲ್ಲಿ ನಂಬಿಕೆ ಸಡಿಲವಾಗು ತ್ತಿರುವ ನಮ್ಮಂಥವರಿಗಲ್ಲದೆ ಈ ಗೀತೋಪದೇಶ ಇನ್ನಾರಿಗೆ ಅಗತ್ಯ?

ತನ್ನ ವಿಶ್ವರೂಪವನ್ನು ನೋಡಿ ತಣಿಯಲು ಪರಮಾತ್ಮನು ಅರ್ಜುನನಿಗೆ ದಿವ್ಯಚಕ್ಷುವನ್ನು ಕರುಣಿಸಿದನು. ಸಂಜಯನು ಧೃತರಾಷ್ಟ್ರನಿಗೆ “ ಧರ್ಮಕ್ಷೇತ್ರೆ ಕುರುಕ್ಷೇತ್ರೆ ’ ಏನಾಯಿತೆಂದು ವಿವರಿಸಲು, ಅವನಿಗೆ ಸವಿಸ್ತಾರವಾಗಿ ಕಾಣಲು, ಸಂಜಯನಿಗೂ ಸೂಕ್ಷ್ಮ ದೃಷ್ಟಿ ದಯಪಾಲಿಸಿದನು. ಆದರ ಸಹಾಯದಿಂದಲೇ ಸಂಜಯನು ಗೀತೆಯನ್ನು ಯಥಾರ್ಥವಾಗಿ ಗಾನಮಾಡಿದ್ದಾನೆ. ಅಂತೆಯೇ ಇದ್ದದ್ದು ಇದ್ದಂತೆ ಕಾಣಲು ಭಗವಾನನು ತಾನೆ ಕರುಣೆಯಿಂದ ನಮಗೂ

ನಮ್ಮ ಅಂತಶ್ಚಕ್ಷುವನ್ನು ತೆರೆಯುವಂತೆ ಮಾಡಿ, ಸತ್ಯವನ್ನು ತಿಳಿಯಲು ಪ್ರೇರಿಸ ಬೇಕು. ಆ ಅವಲಂಬನದಿಂದ ನಾನು ಹೇಳಬೇಕು, ನೀವು ಕೇಳಬೇಕು.

ನಾನು ಬಾಲ್ಯಾವಸ್ಥೆಯಲ್ಲಿ ವಾಮನರೂಪದಲ್ಲಿದ್ದಾಗ ಪರಿಷೆ ಉತ್ಸವಗಳನ್ನು ನೋಡಲು ನನ್ನ ಹಿರಿಯರುಗಳ ಜೊತೆಯಲ್ಲಿ ಹೋದಾಗ ಆ ಜನಸಂವಣಿಯಲ್ಲಿ ನನಗೆ ನೋಟಗಳು, ದೃಶ್ಯಗಳು ಏನೂ ಕಾಣವು. ಆಗ ಕರುಣೆಯಿಂದ, ಉನ್ನತ ರಾದ ಹಿರಿಯರು ನನ್ನನ್ನು ಹೆಗಲಿನ ಮೇಲೇರಿಸಿಕೊಂಡು ನನಗೆ ನೋಟಗಳನ್ನು ನೋಡಿಸುತ್ತಿದ್ದರು. ಅವರಿಗೆ ಕಾಣುವುದಕ್ಕಿಂತ ಹೆಚ್ಚಾಗಿ, ಅವರಿಗೆ ಕಾಣು ವುದಕ್ಕಿಂತ ವಿಸ್ತಾರವಾಗಿ ನನಗೆ ದೃಶ್ಯ ಭವ್ಯವಾಗಿ ಕಂಡು ಆನಂದದಿಂದ ಚಪ್ಪಾಳೆ ತಟ್ಟಿ ಕೇಕೆ ಹಾಕುತ್ತಿದ್ದೆ.

ಅಂತೆಯೇ ಈ ಗೀತಾದರ್ಶನದಲ್ಲೂ ನಾನು ಸಿರ್ಲಜ್ಜೆಯಿಂದ, ಗೀತಾಭಾಷ್ಯ ಗಳನ್ನೂ ಟೀಕೆಗಳನ್ನೂ ಕೈಗೆ ಬಿದ್ದವುಗಳನ್ನೆಲ್ಲ ಓದಿದುದಲ್ಲದೆ, ಈ ಹರಟೆ ಯಲ್ಲೂ ಉಪಯೋಗಿಸಿಕೊಂಡಿದ್ದೇನೆ. ಯಥೇಚ್ಛವಾಗಿ ಅವರ ವಿಶಾಲಭುಜದ ಮೇಲೇರಿ, ಸುತ್ತಲೂ ಮರೆಯಿಲ್ಲದೆ ದೂರವಿಶಾಲ ಗೀತಾಪ್ರಪಂಚದ ಮೇರೆ ಯನ್ನು ಅವಲೋಕಿಸಿ ಆನಂದಿಸಿದ್ದೇನೆ. ಅವರ ಉನ್ನತೋನ್ನತ ವಿಚಾರ ಗಳೊಡನೆ ನನ್ನ ಹರಟೆಯನ್ನೂ ಸೇರಿಸಿದ್ದೇನೆ. ಅವರ ಆಗಿನ ದೃಷ್ಟಿಯನ್ನು ಈ ಕಾಲದ, ಈ ವಾತಾವರಣದ ದೃಷ್ಟಿಯ ಸರಣಿಯಿಂದ ಉಪಯೋಗಿಸಿ ಕೊಂಡಿದ್ದೇನೆ. ನಮ್ಮ ಕುಬ್ಜದೃಷ್ಟಿಗೆ ಏನೂ ಕಾಣದೆಂದು ಕರುಣೆಯಿಂದ ಎತ್ತಿ ಸುಂದರ ನೋಟವನ್ನು ತೋರಿಸಲೆಂದೇ ಆ ಹಿಂದಿನ ಸರ್ವಜ್ಞಸತ್ಪುರುಷರು ತಮ್ಮ ಟೀಕಾ, ಭಾಷ್ಯಗಳನ್ನು ಬರೆದಿರುವುದು; ಅನುವಾದ ವಿವರಣೆಗಳನ್ನು ಮಾಡಿರುವುದು. ಆ ಮಹಾತ್ಮರೆಲ್ಲರಿಗೂ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು. ಅವರ ತೋಟದ ಪಂಚವರ್ಣದ ಹೂಗಳನ್ನೆಲ್ಲ ಆರಿಸಿ, ಜೊತೆಗೆ ನನ್ನ ಹಸಿರುಸೊಪ್ಪನ್ನೂ ಸೇರಿಸಿ, ಮಾಲೆಯನ್ನು ಕಟ್ಟಿ ಮಹದಾತ್ಮನಿಗೆ ಅರ್ಪಣೆ ಮಾಡಲು ಪ್ರಯತ್ನಿಸಿದ್ದೇನೆ. ಮಧುಕರನು ಶೇಖರಕನಷ್ಟೆ, ಸವಿಮಧು ವಿನಲ್ಲಿ ತನ್ನದೇನೂ ಇಲ್ಲ. ಎಲ್ಲ ಪುಷ್ಪಗಳಲ್ಲಿನ ತೃಣಮಧುವನ್ನು ಆನಂದ ದಿಂದ ಹೀರಿ ತಂದು ಶೇಖರಿಸುವನು. ಆದರೆ ಆ ಶೇಖರಿಸಿದ ಮಧು, ಎಷ್ಟು ಸಿಹಿ! ಔಷಧ ಚೂರ್ಣ ಸೇವನೆಗೆ ಎಷ್ಟು ಶ್ರೇಷ್ಠ! ಹೆಚ್ಚು ಹೆಚ್ಚು ಪುಷ್ಪಗಳಿಂದ ಅಲ್ಪ ಅಲ್ಪ ಶೇಖರಿಸಿದಷ್ಟೂ ಹೆಚ್ಚು ರುಚಿ, ಹೆಚ್ಚು ಗುಣಕಾರಿಯೆಂದು ತಿಳಿ

ದವರು ಹೇಳುವರು. ತಾನು ಕದಿಯುವ ಚೋರನೆಂಬ ಭಯವೇ ಇಲ್ಲದೆ, ಪ್ರಭಾಕರನ ಬೆಳಗಿನಲ್ಲೆ, ನಿರ್ಲಜ್ಜೆಯಿಂದ ಮಧುರಗಾನ ಮಾಡುತ್ತ, ಪುಷ್ಪ ಸಂಗ್ರಹವಾದ ಶ್ರೇಷ್ಠ ಮಧುವನ್ನು ಜೇರೆಂದು ಬಹಿರಂಗವಾಗಿ ಹೀರುವನು. ಪರರ ಉಪಕಾರಕ್ಕಾಗಿ ತಂದು ಶೇಖರಿಸುವ ಜೇನಿಗೆ ಭಯವೇತಕ್ಕೆ ? ಲಜ್ಜೆ ಯೇತಕ್ಕೆ ? ಅಂತರಂಗವೇತಕ್ಕೆ ? ಪುಷ್ಪಗಳು ಕೂಡ ಆನಂದದಿಂದ ಮಧುದಾನ ಮಾಡಲು ನವವಧುವು ಕೈಸನ್ನೆ ಮಾಡಿ ಲಜ್ಜಾಚ್ಛಾದಿತ ಇಣಕಿನ ನೋಟದಿಂದ ಪ್ರಿಯನನ್ನು ಸ್ವಾಗತಿಸಿ ಕರೆಯುವಂತೆ ತಂಗಾಳಿಯಲ್ಲಿ ತಲೆಯಾಡಿಸಿ ತಮ್ಮ ಸುಗಂಧ ಬೀರಿ ಅಮಲೇರಿಸಿ ಮಧುಕರನನ್ನು ಇಚ್ಛಿಸಿ ಕರೆಯುವುವು; ಅವು ಅರಳಿ ಮಧು ಸೂಸಿದುದು ಸತ್ಫಲವಾಗಲೆಂದು. ಹಾಗೆಯೇ ಕಾಲಾನುಕಾಲಕ್ಕೆ ಉಪಯೋಗವಾಗಿ ಉಪಕಾರವಾಗಲೆಂದೇ ಅಲ್ಲವೆ ಆ ಮಹಾತ್ಮರುಗಳೂ ಸುಗಂಧ ಕುಸುಮೋಪಾದಿಯಂತಿರುವ ತಮ್ಮ ಸದ್ಗ್ರಂಥಗಳನ್ನು ಪಾಮರರಿಗೆ ಮಧು ಪಾನಮಾಡಿಸಲಲ್ಲವೇ ರಚಿಸಿರುವುದು ಕೂಡ! ನಾನೂ ಅವುಗಳಲ್ಲಿನ ಮಧು ವನ್ನು ಆನಂದದಿಂದ ಸೇವಿಸಿ, ಉಪಯೋಗಿಸಿ ಪರರ ನೆರವಿಗೆ ಸಿದ್ಧಪಡಿಸಿದ್ದೇನೆ.

ಈ ತತ್ತ್ವಸತ್ಯಗಳಲ್ಲಿ ಹೊಸದೇನೂ ಹೇಳಲು ಇಲ್ಲವೆ ಇಲ್ಲ, ಎಲ್ಲಾ ಸೊಗಸಾಗಿ ವಿಶದವಾಗಿ ಹೇಳಿಬಿಟ್ಟಾಗಿವೆ. ಆದರೆ ಹೇಳಿರುವವರೆಲ್ಲ ಈಚೆಗೆ ಹೊಸ ವಿಷಯಗಳನ್ನು ಹೇಳದಿದ್ದರೂ ಹೇಳಿರುವ ರೀತಿ ಹೊಸದಷ್ಟೆ. ಭಾಷೆ ವಿರಳವಷ್ಟೆ. ಶ್ರೀ ಶಂಕರರ ಭಾಷ್ಯ ಕೆಲವೆಡೆ ತಲೆ ತೂಗಿಸಿಬಿಡುವುದು. ಏಕೆ? ಅವರು ಬಿಡಿಸಿ, ವಿಸ್ತರಿಸಿ, ಉಪಮಾನ ಕೊಟ್ಟು, ಒಗ್ಗರಣೆ ಹಾಕಿ, ಸುಲಭವಾಗಿ ಅದರಲ್ಲಿನ ಮುಖ್ಯ ತತ್ತ್ವವನ್ನು ಮನದಟ್ಟು ಮಾಡಿರುವ ಸರಳತ್ವಕ್ಕೆ. ಅವರ ದೃಷ್ಟಿಕೋನದಿಂದ ನೋಡಿ, ಅವರು ಹಚ್ಚಿದ ನೇತ್ರಾಂಜನದಿಂದ ಕಣ್ತೆರೆದರೆ, ಕಾಣುವ ದೃಶ್ಯದ ಸೊಗಸನ್ನು ಏನು ಹೇಳೋಣ! ಅಂತೆಯೇ ಈಗಿನ ಕಾಲದ ದೃಷ್ಟಿಗೆ ತಾಕಲು, ಈ ಕಾಲದ ರೀತಿ ನೀತಿಗಳಿಗೆ ಸಮನ್ವಯ ಮಾಡಿಕೊಂಡು, ಈಗಿನ ನಮ್ಮ ಬುದ್ಧಿಶಕ್ತಿಯ ಮಟ್ಟಕ್ಕೆ ನಮ್ಮ ಅವಿದ್ಯಾಶಾಸ್ತ್ರಸಂಪನ್ನ ಸಂಶಯ ಭರಿತ ಮನಸ್ಸಿಗೆ ತಟ್ಟುವಂತೆ ನಾನು, ಉಪಮಾನ ಭಾಷೆಗಳನ್ನೂ ಬದಲಾ ಯಿಸಿಕೊಂಡಿದ್ದೇನೆ ಕೆಲವೆಡೆ. ಅದರಿಂದ ಗೀತಾಂತರ್ಗತತತ್ತ್ವಕ್ಕೆ ಅವ ಮರ್ಯಾದೆಯಾಯಿತೆಂದು ಯಾರೂ ಭಾವಿಸಲಾಗದು. ಅದರ ಪವಿತ್ರತೆಗೆ ಕಳಂಕ ತರಲು ಯಾವ ಪಾಮರನಿಗೂ ಶಕ್ಯವಿಲ್ಲ.

ಪ್ರಸ್ಥಾನತ್ರಯಗಳಲ್ಲಿ ದಶೋಪನಿಷತ್ತು, ಬ್ರಹ್ಮಸೂತ್ರ, ಗೀತಾ—ಗೀತೆಯೇ ಇತ್ತೀಚಿನದು ಎನ್ನಬಹುದು.—ಇವು ಮೂರನ್ನೂ ಪಠಿಸಿದರೆ ನಮ್ಮ ವೇದ ವೇದಾಂತಗಳ ಸಾರವನ್ನೇ ತಿಳಿಯಬಹುದೆಂದು ನನ್ನ ಅಭಿಪ್ರಾಯ. ಆದ್ದರಿಂದ ಗೀತೆಯು ಚಿಕ್ಕದಾದರೂ, ಇತ್ತೀಚಿನದಾದರೂ ಎಷ್ಟು ಅತ್ಯಮೂಲ್ಯವೆಂದು ನಾವು ಭಾವಿಸಬಹುದು. ಅಲ್ಲದೆ ಈ ಅಮೂಲ್ಯ ತತ್ತ್ವಗಳ ಇತ್ತೀಚಿನ ವಿವರಣೆ ನಮಗೆ ವಿರಾಟ್‌ಕಾಲಪ್ರಮಾಣದಿಂದ ನೋಡಿದರೆ ಅತಿ ಹತ್ತಿರದ್ದು. ಇವುಗಳೇ ನಮಗೆ ಆತ್ಮದರ್ಶನವಾಗಲು ಸಹಾಯಕಗಳು. ಗೀತೆಯೂ ಆ ದರ್ಶನಕ್ಕೆ ಸೋಪಾನಮಾರ್ಗ.

ಆದರೆ ಗೀತೆಯಲ್ಲಿ ಒಂದು ಮಹತ್ತ್ವವಿದೆ. ಎಷ್ಟೋ ಮಾರ್ಗಗಳಲ್ಲಿ, ಮಾರ್ಗದರ್ಶನಗಳಲ್ಲಿ ಮತಬೋಧೆಯಲ್ಲಿ ಇದು ಮಾಡಬಾರದು ಎಂಬ ಅನೇಕ ಉಪದೇಶಗಳ ನಿರ್ಬಂಧಗಳಿವೆ. ಕ್ರಿಸ್ತರ ಹತ್ತು ಮುಖ್ಯ ಆಜ್ಞೆ (Ten Commandments)ಗಳು ನಿಮಗೆ ತಿಳಿದಿರುವಂತೆ "ಕದಿಯಬೇಡ, ಸುಳ್ಳು ಹೇಳಬೇಡ" ಮುಂತಾಗಿವೆಯೇ ಹೊರತು, 'ಇದು ಮಾಡಬೇಡ'ವೆಂಬ ನಿಷೇಧದ ಮೇಲೆ ಹೆಚ್ಚು ಪ್ರಾಧಾನ್ಯವೇ ಹೊರತು, 'ಇದು ಮಾಡು' ಎಂಬ ವಿಧಿಯಿಲ್ಲ. ಬೌದ್ಧಧರ್ಮದ ಸಾರತತ್ತ್ವವೂ 'ಅಹಿಂಸೆ'—ಹಿಂಸೆಮಾಡ ಬೇಡ ಎನ್ನುವುದೇ. ಈ ನಿಷೇಧಗಳೇನೋ ಬಹಳ ಮುಖ್ಯವೇ. ಆದರೆ ಉಗಿಬಂಡಿ (Steam Engine) ಏರು ಹತ್ತಬೇಕಾದರೆ ಹಿಡಿತದ ತಡೆ ಕುದುರೆಗೆ ಹಾಕಿದ ಲಗಾಮಿನಂತೆ. (Brake) ಮುಖ್ಯ ಜಾರಿ ಹಿಂದೆ ಹೋಗ ದಂತೆ ಮುಖ್ಯವಾದರೂ, ಏರು ಹತ್ತಲು, ಆವಿಯ ಶಕ್ತಿ (Steam) ಹೆಚ್ಚಿಗೆ ಕೊಡುವುದು ಮತ್ತೂ ಮುಖ್ಯ. ಅಂತೆಯೇ, ಸಾಧಕನಿಗೆ ಇರುವ ಹಂತದಿಂದ ಜಾರಲು ಆಸ್ಪದವಿಲ್ಲದಂತೆ ನಿಷೇಧಗಳು—ಇಂತಹವನ್ನು ಮಾಡಬಾರದೆಂಬ ಆಜ್ಞೆ ಮುಖ್ಯವಾದರೂ, ತನ್ನ ಸಾಧನೆಯ ಏರಿನಲ್ಲಿ ಹತ್ತಲು ಮಾಡಬೇಕಾ ದುದು ಇಂತಹದೆಂದು ವಿಧಿಶಕ್ತಿ ಕೊಡುವಂತಹ ಉಪದೇಶ ಗೀತೆಯಲ್ಲಿದೆ. ಸಾಧಕನಿಗೆ ಉಪಾಯಗಳನ್ನೂ, ಕರ್ತವ್ಯವನ್ನು ಮಾಡುವ ಮಾರ್ಗವನ್ನೂ ಎಲ್ಲಾ ಸವಿಸ್ತಾರವಾಗಿ ಉಪದೇಶಿಸುತ್ತಾನೆ ಭಗವಂತ. ನಿಸ್ಸಹಾಯಕರಿಗೆ, ನಿಶ್ಶಕ್ತರಿಗೆ ಅನುಕೂಲವಾದ ಮಾರ್ಗ ತೋರುತ್ತಾನೆ. ಮಾಡುವ ವಿವರಣೆ ಇತ್ತಿದ್ದಾನೆ.

ಗೀತಾಪ್ರಸಂಗವಾದರೂ ಆ ಸನ್ನಿವೇಶದಲ್ಲಿ ಉತ್ಪನ್ನವಾಗಿದೆ. ಎದುರಿಸಲು ಕೈಲಾಗದ ಸ್ಥಿತಿಯಲ್ಲಿ, ದಾಟಲು ಮಾರ್ಗ ಕಾಣದಾಗ, ಬಂದ ಅರ್ಜುನನ ದೌರ್ಬಲ್ಯದ ನಿರುತ್ಸಾಹದಿಂದ ಉತ್ಪನ್ನವಾದ ಸಂದೇಹಕ್ಕೆ ತಾನೇ ಏರು ಹತ್ತಲಾರದ, ತಡವರಿಸುತ್ತಿರುವ ಉಗಿಬಂಡಿಗೆ (Engine) ಹೆಚ್ಚು ಶಕ್ತಿ ಕೊಡುವುದಕ್ಕಾಗಿ ಚಾಲಕನು ಹೆಚ್ಚು ಆವಿ (Steam) ತುಂಬುವಂತೆ ಭಗವಂತನು ಅರ್ಜುನನಿಗೂ ಬೋಧಪ್ರದವಾದ ಜ್ಞಾನ ಭಕ್ತಿ ಕರ್ಮ ಸಮನ್ವಯ ಮಾರ್ಗವನ್ನು ಹೇಳಿ ಹುರಿದುಂಬಿಸಿ ಶಕ್ತನನ್ನಾಗಿ ಮಾಡಲು ಮಾಡಿದ ಉಪದೇಶಮಾಲೆ. ಅದು ಸರ್ವಸಾಧಕರಿಗೂ ಸರ್ವಕಾಲದಲ್ಲಿಯೂ ಹೃದಯ ದೌರ್ಬಲ್ಯ ಬಂದಾಗ, ಅಸಾಧ್ಯತ್ವ ಬಂದಾಗ, ಆರ್ಯತ್ವದ ಸರಿದಾರಿ ತೋರಿ, ಉತ್ಸಾಹ ಕೊಡುವ ಮಂತ್ರವಾಗಿದೆ.

ಆದರೂ ವ್ಯಾಸರು ಒಂದು ಚಮತ್ಕಾರ ಮಾಡಿದರು. ವೈರಾಗ್ಯ ಗ್ರಂಥವನ್ನು ಬೇರೆ ಬರೆದು ಪ್ರಕಟಿಸಿದರೆ ಯಾರು ತಾನೆ ಓದುತ್ತಾರೆ? ಅದು ಎಷ್ಟೇ ಚೆನ್ನಾಗಿರಲಿ, ಓದಬೇಕಾದ್ದೇ ಆಗಿರಲಿ, ಯಾರಿಗೆ ಬೇಕೋ ಈ ಗೊಡ್ಡು ವೈರಾಗ್ಯವೆಂದು ಎಸೆಯುವರು. ಜನಗಳಿಗೆ ಆರೋಗ್ಯ ನಿಯಮ ಕಲಿಸಲು ಚಿತ್ರಪ್ರದರ್ಶನಗಳನ್ನೆಸಗಿ ಆ ಇಲಾಖೆಯವರು ಚಲಚ್ಚಿತ್ರಗಳನ್ನು ತೋರಿಸಿ ಮನಸೆಳೆಯಲೆಸಗಿದರೂ, ಅದನ್ನು ನೋಡಲು ಜನ ಬರುವುದಿಲ್ಲ. ಆ ಪ್ರದರ್ಶನದಲ್ಲಿ 'ದಸರಾ ಮೆರವಣಿಗೆ ತೋರಿಸುವುದಾದರೆ ನಮ್ಮ ಹಳ್ಳಿ ಜನದಲ್ಲಿ, ಹುಡುಗರು ಹೆಣ್ಣುಗಳಲ್ಲಿ, ನಮ್ಮ ಶ್ರೀಮನ್ಮಹಾರಾಜರನ್ನೂ ಅವರ ವೈಭವವನ್ನೂ ಮೆರವಣಿಗೆಯನ್ನೂ ನೋಡಲು ಆಸಕ್ತಿ ಇರುವುದರಿಂದ ಬಂದು ನೋಡುವರು. ಹಾಗೆಯೇ ವ್ಯಾಸರು ಮಹಾಭಾರತ ಕಾವ್ಯವೆಂಬ ಒಂದು ದೊಡ್ಡ ಮನೋರಂಜಕ ಗ್ರಂಥ ಬರೆದರು. ಅದರಲ್ಲಿ ಶಕುನಿಯ ದ್ಯೂತ, ದ್ರೌಪದಿ ವಸ್ತ್ರಾಪಹರಣ, ಅರ್ಜುನ ಬೃಹನ್ನಳೆಯಾದುದು, ಉತ್ತರನ ಪೌರುಷ, ಮಹಾಯುದ್ಧ ಎಲ್ಲ ಬರೆದು, ಮಧ್ಯೆ ಈ ಗೀತೆಯನ್ನೂ ಸೇರಿಸಿದರು. ರಸಿಕ ಜನಗಳಿಗೆ ಇನ್ನೇನು ಬೇಕು, ಕಥೆ ಕಾದಂಬರಿಗಳಲ್ಲಿ? ದ್ಯೂತ, ಹೆಣ್ಣಿನ ಕಥೆ, ಹೆಣ್ಣಿನಂತೆ ನಟಿಸಿದವನ ಕಥೆ, ಪುಕ್ಕಲನ ಜಂಭ, ಹೊಡೆದಾಟ, ಪ್ರಣಯ ಎಲ್ಲಾ ಓದಲು ಜನಸಾಮಾನ್ಯಕ್ಕೂ ಅಕ್ಕರೆ ಇದ್ದೇ ಇರುತ್ತೆ. ಅದೂ ಜನಸಾಮಾನ್ಯಕ್ಕೆ ಬೇಕಾದ ಪುರಾಣಶ್ರವಣ, ಆಟ, ನಾಟಕಗಳಲ್ಲೆಲ್ಲ ಈ ಪ್ರಸಂಗಗಳು ಬರುವಂತೆ

ಆಕರ್ಷಣೀಯವಾಗಿದೆ. ಈ ಮಧ್ಯೆ ಒಂದು ವೈರಾಗ್ಯದ ಪ್ರಕರಣ ಬಂದರೆ ಅದೇನೆಂದು ನೋಡುವ, ಓದುವ, ಕೇಳುವ, ಕುತೂಹಲ ಬಂದೇಬರಲೆಂದು ಕಳ್ಳಿಗೆಯ್ಯ ಯುದ್ಧಸನ್ನಿವೇಶದಲ್ಲಿ, ಕೃಷ್ಣಾರ್ಜುನರ ಸಂವಾದದಲ್ಲಿ ಈ ಉಪದೇಶ ವನ್ನು ಹೆಣೆದರು.

ಅಪ್ರತೀತವಾದ 'ವಾಸಿಷ್ಠರಾಮಾಯಣ'ದಂತಹ ಗ್ರಂಥಗಳು ಇದ್ದರೂ, ಎಷ್ಟೋ ಜನಗಳ ಗಮನಕ್ಕೆ ಅವು ಬಂದಿಲ್ಲ. ಅವನ್ನು ಹುಡುಕಿಕೊಂಡು ಹೋಗಿ ಓದಬೇಕು, ವೈರಾಗ್ಯಗ್ರಂಥಗಳಲ್ಲಿ ಆಸಕ್ತಿ ಇರುವವರು ಕೂಡ. ಅದೇ ಈ 'ಗೀತೆ' ಜನಸಾಮಾನ್ಯಮಂತ್ರಗಳಾಗಿಬಿಟ್ಟಿವೆ. 'ಪರಿತ್ರಾಣಾಯ ಸಾಧೂನಾಂ ಸಂಭ ವಾಮಿ ಯುಗೇ ಯುಗೇ' ಎನ್ನುವುದನ್ನು ಹೇಳದ ಹರಿಕಥೆಗಾರನಿಲ್ಲ; ಹೇಳಿದ ಪುರಾಣಕ್ಕೆ ಹೋಗಿ ಹೂಬತ್ತಿ ಮಾಡುತ್ತ ಕೂಡದ ವೃದ್ಧ ಹೆಣ್ಣಿಲ್ಲ. ಜನಸಾ ಮಾನ್ಯರ ಮನಸ್ಸಿಗೆ ಹಿಡಿಯುವ ತೆರದಲ್ಲಿ, ಜನಸಾಮಾನ್ಯಕ್ಕೆ ಅವರ ನಿತ್ಯ ವ್ಯವ ಹಾರಕ್ಕೆನೆರವಾಗುವ ತತ್ತ್ವಗಳ ಸರಳಾನುವಾದದಂತೆ ಸುಲಲಿತವಾಗಿದೆ 'ಗೀತೆ.'

ನಾವು ನಮ್ಮ ವೇದವೇದಾಂತಗಳನ್ನು ಶ್ರೀ ಪರಬ್ರಹ್ಮನ ನಿಃಶ್ವಾಸವೇ ಎಂದು ಪವಿತ್ರವಾಗಿ ಭಾವಿಸಿದರೆ, ಸಿಕ್ಕರು ತಮ್ಮ ಪವಿತ್ರ ಗ್ರಂಥವನ್ನು 'ಗ್ರಂಥ ಸಾಹೇಬ್' ಎಂದು ದೇವರಂತೆ ಪೂಜಿಸುವರು; ಮುಸಲ್ಮಾನರು ಕೊರಾನನ್ನು ಪವಿತ್ರ ವಸ್ತುವೆಂದು ಭಾವಿಸುವರು. ನಾವೂ ಸರಸ್ವತೀಪೂಜೆಯೆಂದು ಪುಸ್ತಕ ಗಳನ್ನು ಪೂಜಿಸುವುದೂ ಉಂಟು. ಶಬ್ದಬ್ರಹ್ಮನನ್ನೇ ಒಳಗೊಂಡ ಆ ಮೂರ್ತಿ ಗಳು ದೇವರಲ್ಲದೆ ಮತ್ತೇನು? ಪೂಜಿಸುವುದರಲ್ಲಿ ತಾನೆ ತಪ್ಪೇನು? ಆದರೆ ಪೂಜಿಸುವುದಕ್ಕಿಂತ ಹೆಚ್ಚಾಗಿ ನಮಗೆ ಅದರ ಒಳಪರಿಚಯವಾಗುವುದು ಅಗತ್ಯ. ಅವು ನಮ್ಮ ಅಂತರಂಗದ ಗೆಳೆಯರಾಗಿ, ನಮ್ಮ ಅಂತರಾತ್ಮಬೋಧಕರಾಗ ಬೇಕು. ಪಂಡಿತಪಾಮರರೆಲ್ಲರಿಗೂ ಹಾಗೆ ಅಂತರಾತ್ಮಗುರುವಾಗಬಲ್ಲುದು ನಮ್ಮ ಗ್ರಂಥಗಳ ಪೈಕಿ ಗೀತೆ. ಅದರಲ್ಲಿ ಆ ಸರಳತೆ ಇದೆ. ಆದುದರಿಂದ ಹಿಂದೂಗಳೆಲ್ಲರೂ, ಹೆಚ್ಚೇಕೆ? ಪ್ರಪಂಚದ ಎಲ್ಲ ಮತದವರೂ, ಗೀತೆಯಲ್ಲಿ ಏನಿದೆ ಎಂದು ಉತ್ಸಾಹದಿಂದ ನೋಡುವರು. ಎಲ್ಲರೂ ತಮ್ಮ ತತ್ತ್ವಗಳಿಗೆ ಸಮನ್ವಯಮಾಡಿಕೊಳ್ಳುವರು. ಸಂದರ್ಭವು ಹೀಗಿರುವಲ್ಲಿ ನಾವೂ ನಮ್ಮ ಗೀತಾರತ್ನದಲ್ಲಿ—ಇದು ಪಂಚರತ್ನಗೀತಾದಲ್ಲಿ ಒಂದು—ಏನಿದೆಯೆಂದು ತಿಳಿಯಲಾದರೂ ಪ್ರಯತ್ನಿಸಬೇಡವೆ?

# ಅಧ್ಯಾಯ ೧: ಅರ್ಜುನವಿಷಾದ ಯೋಗ

## ಲೋಕಕಲ್ಯಾಣಕ್ಕಾಗಿ ಭಗವಂತನ ಅಮೃತವಾಣಿಯಿಂದ ಗೀತೆಯು ಉದ್ಭವವಾಗುವುದಕ್ಕೆ ಕಾರಣ

ಗೀತೆಯನ್ನು ಕೇಳಿದವ ಕುರುಡ—ಹುಟ್ಟುಕುರುಡ. ಶ್ರೀಕೃಷ್ಣನು ಗೀತೆಯನ್ನು ಹೇಳಿದನೆಂದೂ, ಅರ್ಜುನನು ಅದನ್ನು ಕೇಳಿದನೆಂದೂ ಸಾಮಾನ್ಯವಾಗಿ ಹೇಳುವರು. ನಿಜ, ಆದರೆ ಅರ್ಜುನನನ್ನು "ನಿಮಿತ್ತಮಾತ್ರಂ ಭವ ಸವ್ಯಸಾಚಿನ್" ಎಂದಂತೆ ನಿಮಿತ್ತಕ್ಕೆ ಮಾತ್ರ ಇಟ್ಟುಕೊಂಡು ಶ್ರೀಕೃಷ್ಣಪರಮಾತ್ಮನು ಗೀತೆಯನ್ನು ಸರ್ವಜನಕ್ಕೂ ಸರ್ವಕಾಲಕ್ಕೂ ಸರ್ವದೇಶಗಳಿಗೂ ಆಗುವಂತೆ ಉಲ್ಲೇಖಿಸಿದಂತಿದೆ. ಗೀತಾ ನಮಗೆ ದೊರಕಿರುವುದು ಶ್ರೀಕೃಷ್ಣನು ಏನು ಹೇಳಿದನೆಂದು; ಅರ್ಜುನನು ಹೇಳಿದುದಾಗಲಿ, ಕೇಳಿದ ಇತರರು ಬರೆದಿಟ್ಟುದಾಗಲಿ ಅಲ್ಲ. ನಾವು ಪಠಿಸುವ ಗೀತೆ, ನಮಗೆ ಪರಮಪೂಜ್ಯವಾಗಿ, ನಾವು ಪವಿತ್ರವೆಂದು ಭಾವಿಸಿ, ಉಪನಿಷತ್, ವೇದಾಂತ ಭಂಡಾರಗಳನ್ನೆಲ್ಲ ಸೂರೆಮಾಡಿರುವ ಗೀತೆ ನಮಗೆ ಸಂಜಯನು ಧೃತರಾಷ್ಟ್ರನಿಗೆ ಹೇಳಿದ ಕಥೆ. ಸಂಜಯನಿಗೆ ದಿವ್ಯಚಕ್ಷುಸ್ಸು ಲಭಿಸಿ, ನಡೆದಂತೆಯೇ ಕಂಡು, ಕಣ್ಣಿಲ್ಲದೆ ಕೇಳುವವನಿಗೆ ಮೊದಲಿಂದ ಕೊನೆಯುವರೆಗೂ ಹೇಳಿದನು, ಚಿತ್ರಿಸಿದನು. ಇದು ವಾಕ್ಚಿತ್ರ. ನಡೆದುದೇನು, ಯಾವ ರೀತಿ, ಯಾವ ಸಂದರ್ಭದಲ್ಲಿ, ಯಾವ ವಿಭೂತಿ ಯಾವ ವಿಭೂತಿಗೆ ಹೇಳಿದನು, ಏತಕ್ಕೆ, ಸಂದರ್ಭವೇನು, ವಾತಾವರಣವೇನು, ಸಂಘಟನೆಯೇನು, ಎಲ್ಲಕ್ಕೂ ಸಂಜಯನು ಒಂದು ಹಿನ್ನೆಲೆಯ ಚಿತ್ರವನ್ನು ರಚಿಸಿ, ಸುಲಲಿತವಾಗಿ ಶ್ರೀಕೃಷ್ಣಾರ್ಜುನರ ಸಂವಾದ ರೀತ್ಯಾ ಗೀತೆಯನ್ನು ಹಾಡಿದನು.

ಗೀತೆಯಲ್ಲಿ ಮೂರು ಮುಖ್ಯ ವಿಷಯಗಳಿವೆ:

೧. ಹೇಳಿದವ ಭಗವಂತ—ಇದನ್ನು ನಾವು ಎಲ್ಲಿ ಮರೆತುಬಿಡುವೆವೋ ಎಂದು ಭಗವಾನ್ ವ್ಯಾಸರು (ಶ್ರೀ ಶಂಕರರು ಗೀತಾಭಾಷ್ಯದಲ್ಲಿ ವ್ಯಾಸರನ್ನು ಭಗವಾನ್ ವ್ಯಾಸರೆಂದು ಬಹಳ ಭಕ್ತಿಯಿಂದ ಕರೆದಿದ್ದಾರೆ) ಎಲ್ಲೂ 'ಶ್ರೀ ಕೃಷ್ಣ ಉವಾಚ' ಎಂದು ಹೇಳದೆ ಪ್ರತಿಸಲವೂ 'ಶ್ರೀ ಭಗವಾನುವಾಚ' ಎಂದೂ,

ಉಪದೇಶಿಸುತ್ತಿರುವ ಮಹಾತ್ಮನು ಸಾಧಾರಣನಲ್ಲವೆಂದೂ, ಕೇವಲ ಭಗವಂತನೇ ಉಪದೇಶಿಸುತ್ತಿರುವನೆಂದೂ ನೆನಪು ಕೊಡುತ್ತಿರುವರು.

೨. ಕೇಳಿದವ ಆಪ್ತಮಿತ್ರ, ಬಂಧು, ನರ, ಆ ಕಾಲದೇಶಗಳ ಪ್ರತಿನಿಧಿ ಆದುದರಿಂದ ಉಪದೇಶ "ನರ-ನಾರಾಯಣ" ಸಂವಾದರೂಪದಲ್ಲಿ, ಕೇವಲ ಹಿತೋಪದೇಶ ವೃಷ್ಟಿಯಿಂದ, ಬಂದ ಸಂಶಯಗಳನ್ನೆಲ್ಲ ಎತ್ತಿ ಕೇಳುತ್ತಲೂ, ಅವುಗಳಿಗೆ ಸಮಾಧಾನವನ್ನು ಒತ್ತಿ ಹೇಳುತ್ತಲೂ ಏನು ಗುಟ್ಟು ಮರೆಯಿಲ್ಲದೆ ನಡೆದಿದೆ.

೩. ನಡೆದ ಸನ್ನಿವೇಶ: ಜೀವನ ಸಂದಿಗ್ಧದಲ್ಲಿ ಪರಿಣಾಮಕಾರಿಯಾದ ಯಾವುದಾದರೂ ಸನ್ನಿವೇಶಗಳು ಮನಸ್ಸನ್ನು ಕಲಕಿ, ಮನಸ್ಸನ್ನು ಹುಡುಕುವಂತೆ ಮಾಡಿ ಬೆಳಕಿಗೆ ಹಾತೊರೆಯುವಂತೆ ಮಾಡುತ್ತವೆ. ಅರ್ಜುನನಿಗೆ ಅಂಥ ಸಂದರ್ಭ, ಅದನ್ನೇ ನಿಮಿತ್ತವಾಗಿ ಮಾಡಿಕೊಂಡು ಸರ್ವರಿಗೂ ಅಂತಹ ಸನ್ನಿವೇಶಗಳಲ್ಲಿ ಸಮಾಧಾನ ತರುವ ಮಾರ್ಗದರ್ಶಿಯಾಗುವ ಉಪದೇಶ. ಕೇಳಿದವನಿಗೆ ಮಾತ್ರ ಕಣ್ಣಿಲ್ಲ. ಆದುದರಿಂದ ನಾವು ಗೀತಾಶ್ರವಣ ಮಾಡಬೇಕಾದರೂ ಕಣ್ಣು ಮುಚ್ಚಿ ಏಕಾಗ್ರತೆಯಿಂದ ಕೇಳಬೇಕು. ನಾವು ಕಣ್ಣು ಮುಚ್ಚಿದ್ದರೂ ಕಣ್ತೆರೆದಿದ್ದರೂ ನಾವೂ ಕುರುಡರೇ ವೇದಾಂತ ವಿಚಾರಗಳಲ್ಲಿ. ಶ್ರೀಕೃಷ್ಣನು ಉಪದೇಶಿಸಿರುವ ಗಾಢತತ್ತ್ವಪರಂಪರೆಗಳ ವಿಷಯದಲ್ಲಿ ನಾವು ಕುರುಡರೇ ಸರಿ. ಆದುದರಿಂದ ಗೀತೆಯು ಕುರುಡ ಶ್ರೋತೃವಿಗೆ ಹೇಳಿದ ಉದ್ದೇಶದಿಂದಲೇ ನಮಗೂ ಹೇಳಲ್ಪಟ್ಟಿದೆ. ಆ ನಿರ್ಭಾಗ್ಯ ಕುರುಡ ಸಾಮ್ರಾಟನಿಗೆ ಉಪದೇಶವಾದ ಮೇಲೆಯೂ ಕಣ್ತೆರೆಯಲಿಲ್ಲ. ಕೊನೆಯ ವರೆಗೂ ಕೇಳಿದ ಕುರುಡನು ಕಿವುಡನಂತೆ ಕೊನೆಯಲ್ಲಿ ಏನೂ ಕೇಳದವನಂತಿದ್ದನು. ಮೂಕನಂತೆ ಮಾತನಾಡಬೊಲ್ಲನು. ಹೇಳಿದ ಸಂಜಯನಿಗೇ ರೋಮಾಂಚವಾಯಿತು, ತುಷ್ಟಿಯಾಯಿತು. 'ತುಷ್ಯಂತಿ ಚ ರಮಂತಿ ಚ' ಎಂದು ಗೀತೆಯಲ್ಲಿ ಬರುವಂತೆ, 'ಹೇಳುವವರು ತುಷ್ಯಂತಿ, ಎಂದರೆ ಸಂತುಷ್ಟಿಪಡುವರು, ಕೇಳಿದವರು ರಮಂತಿ ಎಂದರೆ ರಮಿಸುವರು, ಆನಂದದಲ್ಲಿ" ಎಂದಾಗಬೇಕಾಗಿತ್ತು. ಗೀತಾ ಪುರಾಣ ಶ್ರವಣವು ಯಾವಾಗ ಆಗಲಿ, ಯಾವ ಶ್ರೋತೃವೃಂದದಲ್ಲಾಗಲಿ, ಹೇಳಿದವರು ಸಂತುಷ್ಟಿಪಟ್ಟೇಪಡುವರು, ಕೇಳಿದವರು ಆನಂದಪಡುವರು. ಆದರೆ ಪ್ರಥಮತಃ ನಡೆದಾಗ ಮಾತ್ರ, ಹೇಳಿದ ಸಂಜಯನಿಗಾದರೋ ಸಂತುಷ್ಟಿ

ಯಾಯಿತು; ಕೇಳಿದ ಕುರುಡನಿಗೆ ಆನಂದವಾಗಲಿಲ್ಲ. ನೂರು ದುಷ್ಟಪುತ್ರರು ನಾಶವಾದರೂ ಇನ್ನೂ ಇವನ ಅಜ್ಞಾನ ನಾಶವಾಗಿರಲಿಲ್ಲ. ಇವನು ಕೇಳಿ ತಿಳಿದುಕೊಂಡುದಾದರೂ 'ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ' ಎಂಬ ಪ್ರಶ್ನೆಗೆ ಉತ್ತರ. ಅವರು ಯುದ್ಧಭೂಮಿಯಲ್ಲಿ ಏನು ಮಾಡಿದರು ಎನ್ನುವದರ ಮೇಲೆ ಮನಸ್ಸು ಹೋಯಿತೇ ಹೊರತು, ಗೀತೆಯಲ್ಲಿನ ಅಮೂಲ್ಯ ತತ್ತ್ವ ಅವನಲ್ಲಿ ನಾಟಲಿಲ್ಲ. ಸಂಜಯನಾದರೋ ಅವನು ಕೇಳಿದ್ದಕ್ಕೆ ಹೇಳಿದುದೇನು? ಹೋಗಲಿ, ಬಾರಿಸುವ ಘಂಟೆ ಬಾರಿಸಿದ, ಮಾಧವನ ಪೂಜೆಯಾದರಾಗಲಿ, ಬಿಟ್ಟರೆ ಬಿಡಲಿ. ಆ ಘಂಟಾಘೋಷವು ಕುರುಡನ ಕಿವಿ ಹೊಕ್ಕಿದ್ದಿದ್ದರೆ, ಆ ಅಂಧನ ಅಂತಶ್ಚಕ್ಷು ತೆರೆದು ಆತನಿಗೂ ವಿಶ್ವರೂಪ ದರ್ಶನವಾಗುತ್ತಿತ್ತೋ ಏನೊ! ಆ ಅಮೃತಪಾನದಲ್ಲಿ ಮೃತರಾದ ಸುತರನ್ನೂ ಮರೆತು ಸಮದೃಷ್ಟಿ ಬರುತ್ತಿತ್ತೋ ಏನೋ! ಅವನಿಗೆ ಅದು ಲಭ್ಯವಿಲ್ಲ. ನಮಗಾದರೂ ಅಂತಾಗದಿರಲಿ. ಗೀತಾಶ್ರವಣದಿಂದ ನಮಗೆ ಆನಂದವಾಗಲಿ, ರೋಮಾಂಚವಾಗಲಿ, ಆ ಪರಮಾತ್ಮನ ದರ್ಶನವಾಗಲು ಕೇಳಿದ ಅನಂತರವೂ ಅವನೆಡೆಯೇ ಇದ್ದಂತೆ ರಮಿಸುವ. ಗೀತಾಮೃತದಲ್ಲಿ ಆ ಮಧುವಿದೆ. ಗೀತೆ ಹೇಳಿದವ ಕೃಷ್ಣ. ಪಡೆದವ ಅರ್ಜುನನಿಗೂ ಕೃಷ್ಣಮಯತ್ವ ಬಂತು, ಕೃಷ್ಣನೆಂಬ ಹೆಸರು ಬಂತು. ಬರೆದ ವ್ಯಾಸನಂತೂ ಗೀತಾ ಬರವಣಿಗೆಯಲ್ಲೇ ಕರಗಿ ಕೃಷ್ಣನಲ್ಲೇ ತಲ್ಲೀನನಾಗಿಬಿಟ್ಟಿದ್ದಾನೆ. ಓದುವ ನಾವೆಲ್ಲಾ, ಮೂಢರು ಕೂಡ, ಅವರಲ್ಲಿ ಬೆರೆತುಬಿಡುತ್ತೇವೆ. ಹೀಗೆ—ಹೇಳುವವ ಕೃಷ್ಣ, ಕೇಳುವವ ಕೃಷ್ಣ; ಕಥೆ ಕಟ್ಟಿದವ ಕೃಷ್ಣ; ಓದುಗರು ನಾವೂ ಕೃಷ್ಣಮಯರಾಗೋಣ, ಒಂದಾಗಿಬಿಡೋಣ. ಇದೇ ಅದ್ವೈತ ತತ್ತ್ವ. ಅದುವರಿಂದಲೇ ಯೋಗಿಗಳೂ ಕಣ್ಮುಚ್ಚಿ ನೋಡಿಯೇ ಹೆಚ್ಚು ಅವಲೋಕಿಸುವರು. ಆದರೆ ಧೃತರಾಷ್ಟ್ರನಲ್ಲಿ ಮಾತ್ರ ಆ ಪರಿಣಾಮ ಏಕಾಗಲಿಲ್ಲ? ಚಕ್ರವರ್ತಿಯೇನೋ ಅಹುದು. ಆದರೆ ಅಂಧ; ಪ್ರಾಪಂಚಿಕ ಬಾಹ್ಯಚಕ್ಷುಸ್ಸಿಲ್ಲದ ಅಂತಶ್ಚಕ್ಷುಸ್ಸೂ ಮುಚ್ಚಿಬಿಟ್ಟಿತು. ಗೀತಾಮೃತ ಪಾನ ಕೂಡ ಆ ಅಂತಶ್ಚಕ್ಷುವನ್ನು ತೆರೆಯಲಾರದ್ದಾಯಿತು. ಛಾಂದೋಗ್ಯದಲ್ಲಿ ಪ್ರಜಾಪತಿಯ ಬಳಿಗೆ ದೇವತೆಗಳ ಪರ ಇಂದ್ರನೂ, ರಾಕ್ಷಸರ ಪರ ವಿರೋಚನನೂ, ಆತ್ಮತತ್ತ್ವಜ್ಞಾನಾರ್ಥಿಗಳಾಗಿ ಬಂದು ಕಲಿತು ಅದನ್ನು ದೇವಾಸುರರಿಗೆ ಕೊಡಲೋಸುಗ ಪ್ರಜಾಪತಿಯಿಂದ

ವಿರೋಚನನು ಪೂರ್ತಿ ತಿಳಿದುಕೊಳ್ಳದೆ, ದೇಹವೇ ಆತ್ಮನೆಂದು ತಿಳಿದುಕೊಂಡು ದೇಹಾನಂದವೇ ಆತ್ಮಾನಂದವೆಂದು ಭಾವಿಸಿಹೋಗಿ ಅದನ್ನೇ ಕಲಿತ ರಾಕ್ಷಸರು ಅಸುರರಾದರು. ಆದರೆ ಸಂಶಯಗ್ರಸ್ತನಾದ ಇಂದ್ರನು ಪುನಃ ಪುನಃ ಬಂದು ೧೦೧ ವರ್ಷ ಬ್ರಹ್ಮಚರ್ಯವನ್ನಾಚರಿಸಿ, ಪುನಃಪುನಃ ಪ್ರಶ್ನಿಸಿ ಪ್ರಜಾಪತಿ ಯಿಂದ ನಿಜತತ್ತ್ವವನ್ನು ಸಂಪಾದಿಸುವಾಗ 'ಆಕಾಶಮನುವಿಷಣ್ಣಂ ಚಕ್ಷುಸ್ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುಃ' 'ಹೊರಪ್ರಪಂಚವನ್ನು ನೋಡು ವಾಗ ನೋಡುವ ಪುರುಷನಿಗೆ ಕಣ್ಣು ಚಕ್ಷುಸ್ಸು', ಆದರೆ "ಯೋವೇದೇದಂ ಮನ್ವಾನೀತಿಸ ಆತ್ಮಾಮನೌಸ್ಯದೈವಂಚಕ್ಷುಃ" "ಆತ್ಮದರ್ಶನಕ್ಕಾಗಿ ಯೋಚಿಸಿ ತಿಳಿಯಬೇಕಾದ ಮನಸ್ಸೆ ದೈವಚಕ್ಷು" ಆದರಿಂದಲೇ 'ಪಶ್ಯನ್ ರಮತೆ'— ನೋಡಿ ನಲಿವನು ಎಂದು ಈ ಅಂತಶ್ಚಕ್ಷುವಿನ ವಿಷಯ ಪ್ರಸ್ತಾಪಿಸಿದ್ದಾರೆ. ಪರಮಾತ್ಮನಿಂದ ಪಾಲಿತವಾದ ದಿವ್ಯಚಕ್ಷುವಿನಿಂದ ನೋಡಿಯೇ ಸಂಜಯ ಗೀತಾಸಂಕೀರ್ತನ ಪಾಡಿದುದು, ಈ ದಿವ್ಯ ಚಕ್ಷುವಿನಿಂದಲೇ ಮುಂದೆ ಅರ್ಜು ನನು ವಿಶ್ವರೂಪದರ್ಶನವನ್ನು ಕಂಡುದು. ಧೃತರಾಷ್ಟ್ರ ಬಾಹ್ಯತಃ ಕುರುಡ ನಾದರೂ ಅವನ ದೌರ್ಭಾಗ್ಯವಾದರೂ ಎಂತಹುದು! ನೂರು ಜನ ಅಸಹಾಯ ವೀರ ಪುತ್ರರು. ಆದರೆ ಅವರೂ ಅಂತಹ ಅಂಧರು; ಬಾಹ್ಯಚಕ್ಷುವಿದ್ದೂ ಪ್ರಾಪಂಚಿಕ ದೂರದೃಷ್ಟಿಯುವರಂತೆ ಆಚರಿಸಿದರೂ ಅವರು ಆತ್ಮತಃ ಕುರುಡರು, ಹುಟ್ಟುಕುರುಡರು. ಹುಟ್ಟುಕುರುಡನಾದ ತಂದೆಯ ಒಡಲಿನಲ್ಲಲ್ಲವೇ ಹುಟ್ಟಿ ದುದು ? ಜಡಜೀವನವನ್ನು ಮುಂದೆ ಸಾವಿರಾರು ವರ್ಷ ಉದ್ಧರಿಸಲು ಸಂಕಲ್ಪಿಸಿ ಸ್ವಾಮಿ ಶ್ರೀಕೃಷ್ಣನು ಅರ್ಜುನನ ನೆಪದಿಂದ ಲೋಕಕ್ಕೆ ಗೀತಾದಾನ ಮಾಡಿ ದ್ದಾನೆ. ಗೀತೆಯಲ್ಲಿ ಅರ್ಜುನನ ಪ್ರಶ್ನೆಗೆ ಉತ್ತರವಿಲ್ಲ, ಶಂಕೆಗೆ ಸಮಾಧಾನ ವಿಲ್ಲ. ಆದರೆ ಕರ್ತವ್ಯವನ್ನು ಮಾಡದೆ ಬಿಡುವ ಮೋಹದ ಮೇಲೆಯೇ ಗದಾ ಪ್ರಹಾರ. ಅರ್ಜುನನ ಪ್ರಶ್ನೆಯನ್ನು ನಿಮಿತ್ತಮಾಡಿಕೊಂಡು ಕರ್ತವ್ಯದ ವಿಷಯದಲ್ಲಿ ಅನುಮಾನಿಸುತ್ತಿರುವವರಿಗೆಲ್ಲ ಇಂತಹ ಮೋಹ ಮುಸುಕಿದ ಸಂದರ್ಭದಲ್ಲಿ ಎಂತು ಕರ್ಮಯೋಗಪ್ರಯೋಗ ಮಾಡಬೇಕೆಂಬ ಉಪದೇಶ ಧಾರಾಪೂರ್ವಕವಾಗಿದೆ. ಹಿಂದೆ ಹ್ಯಾಮ್ಲೆಟನಿಗೆ (Hamlet) ಈ ರೀತಿ ಧರ್ಮ ಸಂಕಟ ಬಂದು, ರೀತಿ ನೀತಿ ಹೇಳುವವರಿಲ್ಲದೆ ಎಷ್ಟು ವಿಪರೀತಗಳಾಗಿ ಬಿಟ್ಟವೋ ಅಂತೆಯೇ ಪ್ರಾಯಶಃ ಶ್ರೀಕೃಷ್ಣನ ಹಿತೋಪದೇಶವಿಲ್ಲದಿದ್ದರೆ

(ಅರ್ಜುನನು ವ್ಯಾಮೋಹಕ್ಕೆ ಸಿಲುಕಿದ್ದಾಗ) ಈ ರೀತಿ ನೀತಿ ತಿಳಿಯದೆ ಏನೇನು ಅನರ್ಥಗಳು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಸಂಭವಿಸುತ್ತಿದ್ದವೋ ಹೇಳುವವರು ಯಾರು?

ಪಾಪವನ್ನು ಆಚರಿಸುವವನಿಗಿಂತ, ಪಾಪಿಗಳಿಗೆ ಜನ್ಮಸ್ಥಾನನಾದವನು ಹೆಚ್ಚು ಪಾಪಿ. ಪಾಪಾತ್ಮರಿಗೆ ಕೇಂದ್ರಸ್ಥಾನವಾಗುವುದು ಹೆಚ್ಚು ಅವಹೇಳನ. ದುರಾಚಾರ ಮಾಡುವವರಿಗಿಂತ ದುರಾಚಾರ ಮಾಡುವವರಿಗೆ ಎಡೆ ಕೊಟ್ಟು, ಆಸ್ಪದ, ಉತ್ತೇಜನ ಕೊಟ್ಟು, ದುರಾಚಾರ ಬಿಡಲು ಬುದ್ಧಿ ಹೇಳದೆ, ಸನ್ಮಾರ್ಗಕ್ಕೆ ತಿರುಗಿಸದೆ ಇದ್ದವ ಹೆಚ್ಚು ದುರಾಚಾರಿ. ಅವನು ಅವರಿಗೆ ಮಧ್ಯಸ್ಥಾನನಾಗಿ ಅಭಿವೃದ್ಧಿಗೆ ಕಾರಣನಾಗುತ್ತಾನೆ. ಅಂತೆಯೇ ಧೃತರಾಷ್ಟ್ರನಾದರೂ ತನ್ನ ಮಕ್ಕಳನ್ನು ಕೆಟ್ಟದಾರಿಯಿಂದ ತಿರುಗಿಸಲು ಪ್ರಯತ್ನಿಸಲಿಲ್ಲ—'ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ . . .' ಎನ್ನುವ ಶ್ಲೋಕದಂತೆ.

> ದ್ವಿವಿಧೌ ವಾಸನಾವ್ಯೂಹಃ ಶುಭಾಶ್ಚೈವಾಶುಭಾಶ್ಚ ತೌ ।
> ವಾಸನೌಘೇನ ಶುದ್ಧೇನ ತತ್ರಚೇದನುನೀಯತೇ ॥
> ಪ್ರಾಕ್ತನಸ್ತದ ಸೌ ಯತ್ರಾಜ್ಯೋತವ್ಯೋಭವತಾ, ಕಪೇ ॥
> ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ ।
> ವಹಂತಿ ವಾಸನಾ ಸರಿತ್ ॥
> ಪೌರುಷೇಣ ಪ್ರಯತ್ನೇನ
> ಯೋಜನೀಯಾ ಶುಭೇಪಥಿ ।
> ಅಶುಭೇಷು ಸಮಾವಿಷ್ಟಂ
> ಶುಭೇಷ್ವೇವಾವತಾರಯೇತ್ ॥
>
> "ಮುಕ್ತಿಕೋಪನಿಷತ್"
> (ಅಧ್ಯಾಯ ೨ : ಶ್ಲೋಕ ೩, ೫, ೬.)

ಶ್ರೀ ರಾಮಚಂದ್ರನು ಮಾರುತಿಗೆ ಉಪದೇಶ ಮಾಡಿದುದು, ಮನುಷ್ಯ ವಾಸನಾ ತೊರೆಯು, ಶುಭ ಮತ್ತು ಅಶುಭ ಮಾರ್ಗಗಳಲ್ಲಿ ಹರಿಯಲೆತ್ನಿಸುವುದು. ಆದರೆ ಪುರುಷಪ್ರಯತ್ನದಿಂದ ಆ ಝರಿಯನ್ನು, ಇನ್ನೂ ಚಿಕ್ಕದಾಗಿದ್ದಾಗಲೆ ದೊಡ್ಡ ಹೊಳೆಯಾಗಲು ಮೊದಲೇ, ಸರಿಯಾದ ಮಾರ್ಗಕ್ಕೆ ತಿರುಗಿಸಲೆತ್ನಿಸಬೇಕು. ತಿಳಿಯದೆ ಆ ರೀತಿ ದುರ್ಮಾರ್ಗಾವಲಂಬಿಗಳಾದವರಿಗೆ ಬುದ್ಧಿವಾದ ಹೇಳಬೇಕು. ಸನ್ಮಾರ್ಗದಲ್ಲಿ ನಡೆಯಲು ಬಂದ ಕಷ್ಟ

ಗಳನ್ನೆಲ್ಲ ಎದುರಿಸಿ ಅವನ್ನು ತಪ್ಪಿಸಿಕೊಂಡು ನಡೆಯಬೇಕು. ದುರ್ಮಾರ್ಗಕ್ಕೆ ಎಡೆಕೊಡಬಾರದು. ಒಬ್ಬ ನಾವಿಕನ ಪಥಕ್ಕೆ ಎದುರುಗಾಳಿ ಬೀಸಿ ದಾರಿ ತಪ್ಪಿಸಲೆಳಸುತ್ತವೆ. ತನ್ನ ಕೈಲಿ ಆ ದಾರಿಯಲ್ಲಿ ನೌಕೆಯನ್ನು ಪಥ ಬಿಡದೆ ನಡಸಲಾಗದಿದ್ದಾಗ ನೌಕೆಯ ಪಟಗಳನ್ನು ಪಸರಿಸುವನು. ತನ್ನ ಕೌಶಲ ದಿಂದ ಆ ಎದುರುಗಾಳಿಯನ್ನೇ ತನ್ನ ಪಟಗಳನ್ನು ಪಸರಿಸುವ ರೀತಿಯಲ್ಲಿ ತನ್ನ ಪಥಗಮನಕ್ಕೆ ಸಹಾಯವಾಗುವಂತೆ ಮಾಡಿಕೊಳ್ಳುವನು. ಎದುರು ಗಾಳಿಯ ಸಹಾಯದಿಂದಲೆ ತನ್ನ ಪಥವನ್ನು ಎದುರಿಸಿಯೇ ನಡೆಯುವನು. ಇದಕ್ಕೇ ಪರಮಾತ್ಮನು "ಯೋಗಃ ಕರ್ಮಸು ಕೌಶಲಂ" ಎಂದಿರುವುದು. ತನ್ನ ಬುದ್ಧಿಚಟುಪಟಿಕೆಯಿಂದ ಯಾವ ಎದುರುಶಕ್ತಿಯನ್ನೂ ತನ್ನ ಸನ್ಮಾರ್ಗ ಸಹಾಯಕ್ಕೆ ಉಪಯೋಗಿಸಿಕೊಳ್ಳುವ ಪ್ರಯತ್ನವೇ ಕೌಶಲ. ಕಾರ್ಯ ದಲ್ಲಿ ಆ ಕೌಶಲವನ್ನು ಸಮಯರಿತು ಉಪಯೋಗಿಸಬಲ್ಲವನೇ ಯೋಗಾ ಭ್ಯಾಸಿ, ಎದುರುಶಕ್ತಿಯನ್ನು ಎದುರಿಸಲು ಎದೆಗೊಡಲಾರದ ತಲೆಯ ಮೇಲೆ ಕೈಯಿಟ್ಟು ಪ್ರಯತ್ನಮಾಡದೆ ಕೂಡುವವನೂ ಅಲ್ಲ, ಆ ಎದುರು ಶಕ್ತಿಗೆ ಸೋತು ಮುಳುಗುವವನೂ ಅಲ್ಲ. ವಿರೋಧ ಶಕ್ತಿಯಾದರೂ ಹೆದರದೆ ಎದೆ ಕೊಟ್ಟು ನಿಂತು, ಉಪಾಯಗಳಿಂದ ಅದನ್ನು ಗೆಲ್ಲಲು ಪ್ರಯತ್ನಿಸುವಂತಹ ಯೋಗಿಗೆ "ಯೋಗಕ್ಷೇಮಂ ವಹಾಮ್ಯಹಂ" ಎನ್ನುವ ಅಭಯಹಸ್ತದ ಸಹಾಯ ನೀಡಲು ಪರಮಾತ್ಮನ ಶಕ್ತಿ ಆತ್ಮನಲ್ಲಿ ಉದ್ಭವವಾಗಿಯೇ ಆಗುತ್ತೆ.

ಹಾಗೆ ಮಾಡುವುದಿರಲಿ; ಮಕ್ಕಳನ್ನು ದುರ್ಮಾರ್ಗಿಗಳಾಗಬೇಡಿರೆಂದು ಕೂಡ ಹೇಳಲು ಧೈರ್ಯವಿರಲಿಲ್ಲವೆಂದು ಕಾಣುತ್ತೆ ನಮ್ಮ ಕುರುಡು ಚಕ್ರವರ್ತಿಗೆ. ಅವರೋ ನೂರೊಂದು ಮಕ್ಕಳು, ಅವರಿಗೆ ನೂರೊಂದು ದುರ್ಮಾರ್ಗ, ನೂರೊಂದು ದುರಾಶೆ, ನೂರೊಂದು ದುಶ್ಚೇಷ್ಟೆ. ಕೆಡಲು ನೂರಾರು ದುರ್ಮಾರ್ಗಗಳಿವೆಯೆಂದು ತೋರಲೆಂದೇ ಧೃತರಾಷ್ಟ್ರನಿಗೆ ನೂರೊಂದು ಮಕ್ಕಳೆಂದು ಕಾಣುತ್ತೆ. ಬದುಕಲು ಮಾತ್ರ ಇರುವುದೊಂದೇ ಮಾರ್ಗ, ಧರ್ಮಮಾರ್ಗ, ಅದು ಪಂಚಪಾಂಡವರ ಧರ್ಮರಾಯನ ಏಕನಾಯಕತ್ವದಲ್ಲಿ ತೋರುತ್ತೆ.

ಇರುವುದೊಂದೇ ಧರ್ಮಮಾರ್ಗಕ್ಕೆ ಇದ್ದವನೊಬ್ಬನೇ ಧರ್ಮರಾಯ. ಅವ ತೋರಿದ ಹಾದಿಗೆ ಇತರ ನಾಲ್ವರು ಇಲ್ಲವೆನ್ನುತ್ತಿರಲಿಲ್ಲ. ಅವರಿಗೆ ಸಮ್ಮತವಲ್ಲ

ದಿದ್ದರೂ ಧರ್ಮರಾಯನ ಮಾತಿಗೆ ತಲೆಬಾಗಿ ಅವ ತೋರಿದ ಮಾರ್ಗವನ್ನನು ಸರಿಸುತ್ತಿದ್ದರು. ಧೃತರಾಷ್ಟ್ರನ ನೂರು ಮಕ್ಕಳು ಅಂತಲ್ಲ. ತಮತಮಗೆ ತೋರಿದ ಮಾರ್ಗಾವಲಂಬಿಗಳು. ಸಾಲದುವಕ್ಕೆ ಸಲಹೆ ಕೊಡಲು, ಆ ದುರ್ಮಾರ್ಗರಿಗೆ ಉತ್ತೇಜನ ಕೊಡಲು ತಕ್ಕಂತೆ ಬೇಕಾದಷ್ಟು ದುಷ್ಟಪರಿವಾರ, ಸ್ನೇಹ ವೃಂದ. ಅವರನ್ನು ಅವರ ಮಾರ್ಗದಲ್ಲಿಯೇ ಪ್ರಸಲಾಯಿಸಿ, ಮನ ಪೊಲಿಸಿಕೊಂಡು ತಮ್ಮ ಫಲವನ್ನು ಸಾಧಿಸುವುದಕ್ಕಾಗಿ ಶಕುನಿ ಕರ್ಣ ಮುಂತಾ ದವರಂತೆ ಕಾದಿದ್ದ ಸ್ವಾರ್ಥರ ತಂಡ, ಇವೆಲ್ಲಾ ಒಂದು ಕಡೆ. ಇದನ್ನೆದುರಿಸಲು ನಿಂತಿದ್ದ ಏಕೈಕ ನಾಯಕತ್ವದಲ್ಲಿ, ಅದನ್ನು ಶ್ರೀಕೃಷ್ಣಪರಮಾತ್ಮನೆಂದೇ ಹೇಳ ಬಹುದು—ದೇವರನ್ನು ಮರೆಹೊಕ್ಕು ಧರ್ಮದೊಡನೆ ನಿಂತಿದ್ದ ಪಾಂಡವ ರೊಂದು ಕಡೆ. 'ಎಲೈ ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧಕ್ಕೆ ಸಮವಾಗಿ ಉತ್ಸಾಹಿಗಳಾಗಿ ಸೇರಿದ ನನ್ನ ಮಕ್ಕಳೂ ಪಾಂಡವರೂ ಏನು ಮಾಡಿದರು?' ಎಂದು ಧೃತರಾಷ್ಟ್ರ ಪ್ರಶ್ನೆ ಕೇಳಿದನು. ಅದಕ್ಕೆ ಉತ್ತರವಾಗಿ ಕೆಲವು ಶ್ಲೋಕಗಳಲ್ಲಿ ಯುದ್ಧಕ್ಕೆ ಸೇರಿದ ವೀರರ ವಿವರಣೆ, ಅರ್ಜುನನ ಮೋಹ ಜಾಲ ವಿರಚಿತ ಶೋಕದ ವಿವರಣೆ, ಅದಕ್ಕೆ ಉತ್ತರವಾಗಿ ಮಿಕ್ಕ ಶ್ಲೋಕಗಳಲ್ಲಿ ಪರಮಾತ್ಮನ ನಿತ್ಯಾನಿತ್ಯ, ಕರ್ಮಾಕರ್ಮ, ಕರ್ಮಭಕ್ತಿಜ್ಞಾನದ ಸಾಧನೆಯ ಮಾರ್ಗದ, ಸಾಧನೆಯ ಗುರಿಯ, ಅಖಂಡ ಅದ್ವೈತಸಾರವನ್ನೇ ಸೂರೆಗೊಳ್ಳುವ ೬೦೦ ಶ್ಲೋಕಗಳ ಪ್ರವಾಹವನ್ನೇ ಸಂಜಯನು ಹೇಳುವುದು. ಇದರಲ್ಲಿ ಅವನ ಮಕ್ಕಳೂ, ಪಾಂಡವರೂ ಏನು ಮಾಡಿದರೆನ್ನುವುದಕ್ಕೇನಾದರೂ ಉತ್ತರ ಉಂಟೆ? ಕುರುಡು ಚಕ್ರವರ್ತಿ ಪುತ್ರರೆಲ್ಲರನ್ನೂ ಕಳೆದುಕೊಂಡಾಗ ಬೇಕಾಗಿದ್ದ ತತ್ತ್ವೋಪದೇಶವನ್ನೇ ಸಂಜಯ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಉಲ್ಲೇಖಿ ಸುದುದು. ಅವರಿದ್ದಾಗ ಅವರು ಮಾಡಿದುದು, ಮಡಿದುದಿರಲಿ, ಅವರು ಹೋದ ಮೇಲೆ ಪ್ರಸ್ತುತಃ ಇವ ತಿಳಿಯಬೇಕಾದುದು ಉದ್ಧಾರವಾಗಬೇಕಾದು ದರ ಉಪದೇಶ.

ಆಗ ಅರ್ಜುನನು 'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ (೨೧)' 'ಉಭಯ ಸೇನೆಗಳ ಮಧ್ಯೆ ರಥವನ್ನು ಸ್ಥಾಪಿಸು' ಎಂದು ಅಚ್ಯುತನನ್ನು ಕೇಳಿಕೊಳ್ಳುವನು. ಆ ಹೊತ್ತಿಗೆ ಅಲ್ಲಿ ಯುದ್ಧಕ್ಕೆ ನೆರೆದಿದ್ದವರ ವಿವರಣೆಯೆಲ್ಲ ನಡೆದಿದೆ.

ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ।
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥
ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥
ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾಯುಧಿ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥
ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।
ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥೫॥
ಯುಧಾಮನ್ಯುಶ್ಚ ವಿಕ್ರಾನ್ತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥
ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥
ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ ॥೮॥
ಅನ್ಯೇ ಚ ಬಹವಶ್ಶೂರಾಃ ಮದರ್ಥೇ ತ್ಯಕ್ತಜೀವಿತಾಃ ।
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥
ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಸ್ಸರ್ವ ಏವ ಹಿ ॥೧೧॥

ಯಾರು ಯಾರು ಅತಿರಥರು, ಮಹಾರಥರು ಎಂದು ಉಲ್ಲೇಖವಾಗಿದೆ.

ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸಶಬ್ದಸ್ತುಮುಲೋಭವತ್ ॥೧೩॥
ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥
ಪಾಂಚಜನ್ಯಂ ಹೃಷಿಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥೧೫॥
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಃಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥೧೮॥
ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥೧೯॥
ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥೨೦॥
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ॥

ಅವರವರು ಸಿಂಹನಾದವನ್ನು ಮಾಡಿದಾರೆ. ಎರಡು ಕಡೆಯೂ ಎರಡು ತಂಡಗಳು ನಿಂತಿವೆ. ಮುಂಚೆಯೇ ಯುದ್ಧನಿಶ್ಚಯವಾದ ಮೇಲೆ (ಶಾಂತಿಸಂಧಾನವೆಲ್ಲ ವ್ಯರ್ಥವಾಗಿ) ಶ್ರೀಕೃಷ್ಣನನ್ನು ಸಹಾಯ ಕೇಳಲು ಉಭಯ ಪಕ್ಷದವರೂ ರಾಯಭಾರಿಗಳನ್ನು ಕಳುಹಿದರು. ಆಗ್ಯೆ ಶ್ರೀಕೃಷ್ಣನು ಮಲಗಿರುವಾಗ ಅವರು ಕಂಡರಂತೆ. ಕೌರವನು ಶ್ರೀಕೃಷ್ಣನ ತಲೆಯ ಬದಿ ಆಸನಾರೂಢನಾದನಂತೆ. ಪಾಂಡವನು ಶ್ರೀಕೃಷ್ಣನ ಪಾದದೆಡೆ ಕುಳಿತನಂತೆ. ಚತುರೋಪಾಯ ಕುಶಲಿಯಾದ ಕೃಷ್ಣನು ಯಾರ ಕಡೆಗೂ ಅಭಿಮಾನವಿಲ್ಲದವನಂತೆ ನಟಿಸಿ, ಇಬ್ಬರೂ ತನಗೊಂದೇ ಎಂದು ಹೇಳಿ, ತಾನೊಂದು ಕಡೆ, ತನ್ನ ಪರಿವಾರವೆಲ್ಲ ಮತ್ತೊಂದು ಕಡೆ ಸಹಾಯಕ್ಕೆ ಬರುವುದಾಗಿ ತಿಳಿಸಿದನು. ಕೃಷ್ಣನ ಲೀಲೆಯನ್ನಾದರೂ ನೋಡಿ! ಏನಾದರೂ ಕೌರವನೇ ಶ್ರೀಕೃಷ್ಣನನ್ನು ವರಿಸಿದ್ದರೆ ಏನು ಮಾಡುತ್ತಿದ್ದಸ್ವಾಮಿ? ಕೃಷ್ಣನನ್ನು ಶ್ರೀಕೃಷ್ಣನೆಂದು ಅರಿತಿದ್ದರಲ್ಲವೇ ಆ ಸದ್ಬುದ್ಧಿ ಉದಯಿಸುತ್ತಿತ್ತು ಕೌರವನಲ್ಲಿ? ಕೃಷ್ಣನ ಪರಾಕ್ರಮವನ್ನು ನೋಡಿದ್ದರೂ, ಕೃಷ್ಣನ ಆಂತರ್ಯವನ್ನು ಅರಿಯನು. ಆದರೂ ಆ ಪರಾಕ್ರಮದಲ್ಲೂ ನಂಬಿಕೆಯಿಲ್ಲ. ಅವನ ಅವತಾರವನ್ನಂತೂ ಭಾವಿಸಲೇ ಆರ.

ಹಲಾಯುಧನು ಧರ್ಮವಿವೇಕದಲ್ಲಿ ಹೇಳಿರುವಂತೆ—

"ಜಯೋಽಸ್ತು ಪಾಂಡುಪುತ್ರಾಣಾಂ, ಏಷಾಂ ಪಕ್ಷೇ ಜನಾರ್ದನಃ
ಯತೋ ಕೃಷ್ಣಸ್ತತೋ ಧರ್ಮಃಯತೋ ಧರ್ಮಸ್ತತೋಜಯಃ

ಪಾಂಡುಪುತ್ರರು ಜನಾರ್ದನನನ್ನು ಅಪೇಕ್ಷಿಸಿ, ತಮ್ಮ ಪಕ್ಷದಲ್ಲಿ ಅವನು ಸೇರಿದಾಗಲೇ ಪಾಂಡುಪುತ್ರರಿಗೆ ಜಯ ಸಿದ್ಧವಾಯಿತು. ಎಲ್ಲಿ ಶ್ರೀಕೃಷ್ಣನೋ

ಅಲ್ಲೇ ಧರ್ಮ, **ಎಲ್ಲಿ ಧರ್ಮವೋ ಅಲ್ಲೇ ಜಯ.** ಶ್ರೀಕೃಷ್ಣನೇ ಸೂತ್ರ ಧಾರಿಯಾಗಿ ಮಾರ್ಗದರ್ಶಿಯಾಗಿ ನಿಂತಿರುವಾಗ ಅಧರ್ಮ ಪ್ರವರ್ತನೆಗೆ ಎಂತು ಮಾರ್ಗ ಕೊಟ್ಟಾನು? ಏನು ಸಾಧಿಸಬೇಕಾದರೂ ಧರ್ಮಮಾರ್ಗವನ್ನೇ ತೋರು ತ್ತಾನೆ. ಧರ್ಮವನ್ನೂ ಕಾಪಾಡಿಕೊಂಡು, ಜಯವನ್ನು ಸಾಧಿಸುವ ಮಾರ್ಗ ತೋರುವುದಕ್ಕಾಗಿಯೆ ಅಲ್ಲವೆ ಈ ಗೀತೋಪದೇಶ ಹುಟ್ಟಿದುದು? ಸರ್ವರಿಗೂ ಸರ್ವಕಾಲವಲ್ಲೂ ಧರ್ಮಸಂಸ್ಥಾಪನೆಯ ಪ್ರಾಮುಖ್ಯತೆ ತೋರಲೇ ಅಲ್ಲವೆ ಭಕ್ತಾಗ್ರೇಸರನಾದ ಪಾಂಡುಪುತ್ರನಿಗೆ ಶ್ರೀಕೃಷ್ಣಪರಮಾತ್ಮನೇ ಬೇಕಾಯಿತು. ಪರಮಾತ್ಮ ನಮ್ಮೊಳಗಿದ್ದರೆ ಆತ್ಮಬಲವಲ್ಲವೆ? ಅಂತೆಯೇ ಶ್ರೀಕೃಷ್ಣನು ತಾನು ಯಾರ ಪಕ್ಷವಿದ್ದರೂ ಶಸ್ತ್ರಪಾಣಿಯಾಗಿ ಯುದ್ಧ ಮಾಡುವುದಿಲ್ಲ ವೆಂದು ಸಾರಥಿಯಾಗಿ ಅರ್ಜುನನ ರಥ ನಡಸಿಕೊಂಡು ಹೊರಟನು. ರಥ ದಲ್ಲಿ ಸಾರಥಿಯಾದರೂ ಪರಮಾತ್ಮನೇ ಮುಂದು, ಅರ್ಜುನ ಹಿಂದು. ಪರ ಮಾತ್ಮ ನಡಸಿದಲ್ಲಿ ಅವ ನಡೆಯಬೇಕು. ಇದರಿಂದ ಪರಮಾತ್ಮನು ಸರ್ವ ಜೀವಾತ್ಮರ ಸಾಂಧಿಯೆಂದೇ ನಾವು ತಿಳಿಯಬೇಕು. ಅವ ನಡಸಿದಲ್ಲಿಗೆ ನಾವು ನಡೆವವರೆಂದು ಧೃಢವಾಗಿ ನಂಬಬೇಕು. ತನ್ನ ಇಚ್ಛೆ ಏನಿದ್ದರೂ ಆತನ ಇಚ್ಛೆ ಯಂತೆ ನಡಸುವಂತೆ ಪರಮಾತ್ಮನನ್ನು ಪ್ರಾರ್ಥಿಸಬೇಕು.

> On the ring, on the ring,
> The puppet can do anything, anything,
> If there is the man to pull the string, the string.

"ಸೂತ್ರವನ್ನು ಎಳೆಯಲು ಒಬ್ಬ ಪಳಗಿದ ತಿಳಿದ ಕೈ ಹಿಂದಿದ್ದರೆ, ಸೂತ್ರದ ಬೊಂಬೆಯು ರಂಗಭೂಮಿಯ ಮೇಲೆ ಏನು ವಿಚಿತ್ರವಾದರೂ ಮಾಡಬಲ್ಲುದು" ಎಂಬಂತೆ ಸಮರ್ಥಸೂತ್ರಧಾರನ ಕೈಲಿ ರಥಸೂತ್ರಗಳಿದ್ದರೆ ಒಳಗೆ ಕುಳಿತ ರಥಿಕನಿಗೆ ಏನು ಚಿಂತೆ? ಸೂತ್ರಧಾರನೇ ಎಲ್ಲಾ ಮಾಡಿಸಬಲ್ಲನು. ಇದೇ ಪಾರ್ಥಸಾರಥಿ ಪಾರ್ಥನ ರಥದಲ್ಲಿ ಸಾರಥಿಯಾಗಿ ಕುಳಿತು ಕುದುರೆಗಳ ಲಗಾ ಮನ್ನು ಕೈಗೆ ತೆಗೆದುಕೊಂಡುದರ ಮರ್ಮ. ಇದನ್ನು ನಾವು ಅರಿತು, ಅವ ನಡಸುವಲ್ಲಿಗೆ ಅಂತರ್ಯಾಮಿಯ ಇಚ್ಛೆಯಂತೆ ನಡೆದುಹೋಗಲು ನಿರ್ಧರಿಸ ಬೇಕೆಂಬುದೇ ಕಲಿಯಬೇಕಾದ ನೀತಿ; ನಾವು ಏನು ಸಾಧಿಸಿದರೂ, ಏನು ಫಲಿಸಿದರೂ ಎಲ್ಲ ಅವನದೇ ಎಂದು ತಿಳಿಯುವ ರೀತಿ.

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥೨೪॥

ರಥವು ಎರಡು ಪ್ರತಿಕಕ್ಷಿಬಲಗಳ ಮಧ್ಯೆ ಬಂದು ನಿಂತ ಮೇಲೆ ಅರ್ಜುನನು ತನ್ನ ಬಲಾಬಲಗಳನ್ನು ಪರೀಕ್ಷಿಸಿದನು. ಆದರೂ ಪ್ರೇರಿಸಿದವರಾರು? ಪ್ರಥಮಾಧ್ಯಾಯದಲ್ಲೆಲ್ಲ ಶ್ರೀಕೃಷ್ಣನು ಆಡುವುದು ಮುತ್ತಿನಂತಹ ಒಂದೇ ಮಾತು.

ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥

'ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನ್' ಎಂದರೆ ಅರ್ಜುನನು ಆಗ ಈಕ್ಷಿಸಿದನು, ಪರೀಕ್ಷಿಸಿದನು, ಯೋಚಿಸಿದನು. ಪರಮಾತ್ಮನ ಪ್ರೇರಣೆಯಷ್ಟೆ, ಇಷ್ಟೇ ಸಾಕು. ನಾವು ತೊಡಗಿದ ಕೆಲಸಗಳಲ್ಲೆಲ್ಲ ಅಂತರ್ಯಾಮಿಯಾಗಿ ಪರಮಾತ್ಮನು ಇಷ್ಟನ್ನೆ ಪ್ರೇರಿಸುವನು. ಅಂತೆ ಎಚ್ಚರಿಕೆ ಕೊಟ್ಟು ಸದ್ಬುದ್ಧಿ ಕೊಟ್ಟರೆ ಸಾಕು. ಮಾರ್ಗವನ್ನು ಈಕ್ಷಿಸಿ ಸನ್ಮಾರ್ಗದಲ್ಲಿ ಪದವಿಡುವೆವು. ಅದಕ್ಕೆ ಶ್ರೀ ಜಗದ್ಗುರುಗಳು ಒಂದು ಸಾರಿ ಆದರವಾಗಿ ಹೇಳಿದರು: "ಪರಮಾತ್ಮನು ಆಶೀರ್ವದಿಸಬೇಕಾದರೆ ಯಾವ ಧನಕನಕ ಐಶ್ವರ್ಯಾದಿಗಳಿಂದ ಇಹಲೋಕ ಸಂಪದಗಳಿಂದ ಆಶೀರ್ವದಿಸುವುದಿಲ್ಲ. ಆಶೀರ್ವದಿಸಬೇಕಾದ ಪಾತ್ರದಲ್ಲಿ ಒಂದು ಸದ್ಬುದ್ಧಿಯನ್ನಿಟ್ಟು ಎಚ್ಚರಿಸುತ್ತಿರುತ್ತಾನೆ. ಅದನ್ನು ಕಾಪಾಡಿಕೊಳ್ಳುವ ಭಾರ ಮಾತ್ರ ಪಾತ್ರನದು" ಎಂದು.

ಪಾಪ, ಕೌರವನಿಗೆ ಹಾಗೆ ಸಾರಥಿಯಾಗಿ ಮಾರ್ಗದಲ್ಲಿ ನಡಸಲು ಪರಮಾತ್ಮನಿಲ್ಲ. ಎಚ್ಚರಿಸಲಿಲ್ಲ. ಎಚ್ಚರಿಸದ ಮೇಲೆ ಕೌರವ ತಾನೆ ಎಂತು ಈಕ್ಷಿಸಿಯಾನು? ಪರೀಕ್ಷಿಸಿಯಾನು? ಆಲೋಚಿಸಿಯಾನು? ಈ ತರಹ ಬಲಾಬಲಗಳನ್ನು ಈಕ್ಷಿಸಿ ಪರೀಕ್ಷಿಸಿ ಯೋಚಿಸುವ ಚಿಂತೆ ಕೌರವನ ಮನಸ್ಸಿಗೆ ಬಂದಂತೆ ಕಾಣುವುದಿಲ್ಲ. ಕುರುಡನ ಮಗನಲ್ಲವೆ! ಕಣ್ಣು ಮುಚ್ಚಿ ಧುಡುಂ ಎಂದು ಯುದ್ಧಕ್ಕೆ ಇಳಿದೇ ಬಿಟ್ಟನು. ಅರ್ಜುನನಾದರೆ ಅಂತಲ್ಲ. ಪರ್ಯಾಲೋಚಿಸಿದನು. ಇದೊಂದು ಮುಖ್ಯವಾಗಿ ಎಲ್ಲರೂ ಗಮನಿಸಬೇಕಾದ ವಿಷಯ. ಪ್ರತಿಯೊಬ್ಬನೂ ಜೀವನದ ಪ್ರತಿಯೊಂದು ಘಟನೆಯಲ್ಲಿಯೂ ತನ್ನ ಬಲಾಬಲಗಳನ್ನೂ ಎದುರಾಳಿಯ ಬಲಾಬಲಗಳನ್ನೂ ವಿಮರ್ಶಿಸಬೇಕಾದ ಅಗತ್ಯವುಂಟು. ಗೆಲ್ಲಬೇಕಾದರೆ ಧುಡುಂ ಪ್ರವೇಶ ಒಂದೇ ಅಲ್ಲ. ಚತುರೋಪಾಯಗಳಿವೆ. ವಿಮರ್ಶೆ ಮಾಡಿದರಲ್ಲವೆ,

ಯಾವುದನ್ನು ಉಪಯೋಗಿಸಬೇಕೆಂದು ಹೊಳೆಯಲು ಆಸ್ಪದವಾಗುತ್ತದೆ? ಎದುರಿಸಬೇಕಾದ ಬಲಗಳು ಅರ್ಥವಾದರಲ್ಲವೆ, ಅವುಗಳನ್ನು ಎದುರಿಸಲು ಸಾಧ್ಯವಾಗುತ್ತದೆ, ಸರಿಯಾದ ಉಪಾಯದಿಂದ? (Proper diagnosis is half the treatment.)

ನಾವು ಹುಟ್ಟಿದುದನ್ನು ನಮ್ಮ ತಂದೆತಾಯಿಯರು ಬಲ್ಲರೇ ಹೊರತು ನಾವರಿಯೆವು. ನಾವು ಎಲ್ಲಿದ್ದೆವು, ಏನಾಗಿದ್ದೆವು, ಹೇಗೆ ಬಂದೆವು ಎಂಬುದನ್ನು ಯಾರೂ ಅರಿಯರು. ನಾವು ಮರಣ ಹೊಂದುವುದನ್ನು ಇತರರು ಎಲ್ಲರೂ ಬಲ್ಲರೇ ಹೊರತು ನಮಗೇನೂ ಗೋಚರವಾಗುವುದಿಲ್ಲ. ನಾವು ಎಲ್ಲಿ ಹೋಗುತ್ತೇವೆ, ಏನಾಗುತ್ತದೆ, ಹೇಗಾಯಿತು ಎನ್ನುವದನ್ನು ಅವರೂ ಅರಿಯರು. ನಾವಂತೂ ಅರಿಯೆವು.

> Naked came I from my mother's womb
> Naked go I away from here"—Job

ಜ್ಯೋಬನು ಹೇಳುವಂತೆ 'ತಾಯಿಯ ಗರ್ಭದಿಂದ ಬೆತ್ತಲೆ ಬಂದೆ ಇಲ್ಲಿಗೆ, ಇಲ್ಲಿಂದ ಬೆತ್ತಲೆ ಹೊರಟುಹೋಗುತ್ತೇನೆ" ಎಂದು. ನಮ್ಮ ಕರ್ಮದ ಗಂಟು ನಮಗೇ ಗೊತ್ತಿಲ್ಲ. ಇರುವಾಗಲೂ ಯಾವುದು ಹೇಗಾಗುತ್ತೆಂಬು ತಿಳಿಯುವುದಿಲ್ಲ. ನಾವು ತಿಳಿಯುವುದೊಂದು, ಅದಾಗುವದೆ ಒಂದು. ನಮ್ಮ ಪ್ರಯತ್ನವೊಂದು, ಫಲವಿನ್ನೊಂದು. ಯಾವುದೂ ನಮಗೆ ತಿಳಿವಿಲ್ಲ. ಆದುದರಿಂದ ಪ್ರತಿಕ್ಷಣದಲ್ಲಿಯೂ ಪ್ರತಿಘಟನೆಯಲ್ಲಿಯೂ ಪರಮಾತ್ಮನು ಹೇಳಿ ತೋರಿದಂತೆ ಬಲಾಬಲಗಳನ್ನು ವಿಮರ್ಶೆಮಾಡಬೇಕು. ಇದರಿಂದ ಎದುರಾಳಿಯ ಬಲವನ್ನು ಉಪೇಕ್ಷೆ ಮಾಡಿದಂತಾಗುವುದಿಲ್ಲ.

ಅಂತೆಯೇ ಅರ್ಜುನನು ಕೌರವರ ಪಕ್ಷವನ್ನು ನೋಡಿ ಮೋಹಿತನಾಗುವನು. ಅವನ ಬಾಯಿಂದಲೇ—

> ನಿಹತ್ಯ ಧಾರ್ತರಾಷ್ಟ್ರನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ
> ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ||೩೬||

ಎಂದು. "ಆತತಾಯಿನಃ"—ಆತತಾಯಿಗಳಾದ ಈ ಕೌರವರನ್ನು ಕೊಂದರೆ ಪಾಪವಾವರಿಸುವುದೆಂದು ಬರುತ್ತದೆ. ಧರ್ಮಸೂತ್ರಕಾರನಾದ ಮನುವು ಆತತಾಯಿಗಳನ್ನು—ಮನೆಗೆ ಬೆಂಕಿ ಇಟ್ಟವರು, ವಿಷ ಪ್ರಯೋಗಿಸಿದವರು, ಶಸ್ತ್ರಘಾತಕರು, ಸರ್ವಧನಾಪಹಾರಿ, ಕ್ಷೇತ್ರಾ(ಮನೆಮಠ)ಪಹಾರಿ, ಮತ್ತು

ದಾರಾಪಹಾರಿ ಎಂದು ಆರು ವಿಧವಾಗಿ ವಿಂಗಡಿಸಿ, ಇದರಲ್ಲಿ ಯಾವುದೊಂದು ಪಾಪ ಮಾಡಿದವನಾದರೂ ಅವನ ಹೇಳಿಕೆಯನ್ನು ಕೂಡ ಕೇಳದೆ ಅವರಿಗೆ ಶಿರಚ್ಛೇದನ ಶಿಕ್ಷೆ ವಿಧಿಸಬಹುದೆಂದು ಶಾಸ್ತ್ರ ಬರೆದಿದ್ದಾನೆ. ಕೌರವ ರಾದರೋ ಈ ಆರು ತಪ್ಪನ್ನೂ ಮಾಡಿದ್ದಾರೆ. ಪಾಂಡವರನ್ನು ಅರಗಿನಮನೆ ಯಲ್ಲಿರಿಸಿ ಬೆಂಕಿಹಾಕಿ ಸುಡಲು ಪ್ರಯತ್ನಿಸಲಿಲ್ಲವೆ? ಮನೆಗೆ ಬೆಂಕಿ ಇಟ್ಟವ ರಲ್ಲವೆ ಕೌರವರು? ಪಾಂಡುತನಯರಿಗೆ ವಿಷಪ್ರಯೋಗ ಮಾಡಿಸಿ ಕೊಲ್ಲಲು ಪ್ರಯತ್ನಿಸಿದ ವಿಷಪ್ರಯೋಗಿಗಳಲ್ಲವೆ? ಅಲ್ಲದೆ ಈ ಸಜ್ಜನರ ಮೇಲೆ ವಿಷ ವನ್ನು ಕಾರುತ್ತಿರುವರ ಹೃದಯವೇ ವಿಷಮಯ. ಶಸ್ತ್ರಘಾತಕಕ್ಕೆ ಹೆದರದೆ ಘಾತಕ ಮಾಡಲು ಎದುರು ಪ್ರತ್ಯಕ್ಷ ನಿಂತಿದ್ದಾರೆ. ಆ ಸಮಯದಲ್ಲಿ ಆತ್ಮ ರಕ್ಷಣೆಗಾದರೂ ಶಸ್ತ್ರಾಸ್ಪದವಿಲ್ಲವೆ? ಶಕುನಿಯ ಉಪಾಯದಿಂದ ದ್ಯೂತದಲ್ಲಿ ಸರ್ವ ಧನಾಪಹಾರವನ್ನು ಮಾಡಿಲ್ಲವೆ? ಇದು ಕುತಂತ್ರದಲ್ಲಿ ಬಲೆಗೆ ಸಿಕ್ಕಿಸಿ ಧನಾಪಹಾರ ಮಾಡಿರುವುದು, ದರೋಡೆಯಿಂದ ಸರ್ವ ಧನಾಪಹಾರ ಮಾಡಿ ದವನಿಗಿಂತಲೂ ಕೀಳಲ್ಲವೆ? ಅಲ್ಲಿಗೇ ನಿಲ್ಲದೆ ಕ್ಷೇತ್ರಾಪಹಾರವನ್ನೂ ಸಮಸ್ತ ರಾಜ್ಯವನ್ನೂ ಅದೇ ಜೂಜಿನಲ್ಲಿ ಗೆದ್ದರು. ಅದೇ ಜೂಜಿನಲ್ಲೇ ಅಲ್ಲವೆ ದಾರಾ ಪಹಾರ ಪ್ರಯತ್ನವನ್ನು ನಡಸಿ, ಪತಿವ್ರತಾರತ್ನಳಾದ ದ್ರೌಪದಿಯ ಮುಡಿ ಹಿಡಿದು ಸಭೆಗೆಳಸಿ ತರಲಿಲ್ಲವೆ? ಒಂದೊಂದೇ ತಪ್ಪು ಮಾಡಿದವನನ್ನೂ ವಧಿ ಸಲು ಅಪ್ಪಣೆಯಿದ್ದರೆ, ಇವರನ್ನು ಆರು ಸಾರಿ ವಧಿಸಿದರೂ ತಪ್ಪಿಲ್ಲ. ಇವರನ್ನು ಶಿಕ್ಷಿಸುವುದರಲ್ಲಿ, ಕೊಲ್ಲಿಸುವುದರಲ್ಲಿ ಪಾಪ ತಾನೆ ಏನು?

ಆದರೆ ಯುದ್ಧದಿಂದಾಗುವ ಅನರ್ಥ ಪರಂಪರೆಗಳನ್ನು ಅರ್ಜುನನು ಸಾಂಗ ವಾಗಿ ವಿವರಿಸುತ್ತಾನೆ. ಎಲ್ಲಕ್ಕಿಂತ ಘೋರವಾದ ಪರಿಣಾಮವೆಂದರೆ—

> ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ।
> ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥

'ಪ್ರದುಷ್ಯಂತಿ ಕುಲಸ್ತ್ರಿಯಃ, ಸ್ತ್ರೀಷು ದುಷ್ಟಾಸು' ಎಂದು ಪ್ರಲಾಪಿಸುವನು. ನಿಜ, ಇದಕ್ಕಿಂತ ನರಕವುಂಟೆ? ಧರ್ಮವನ್ನು ಕಾಪಾಡಬೇಕಾದ ಕುಲಸ್ತ್ರಿಯ ರಿಗೆ ಯುದ್ಧವು ದುಷ್ಕೃತ್ಯವೆಸಗಲು ಅವಕಾಶ ಕೊಡುತ್ತದೆ. ಅವರೇ ಅಧರ್ಮಿ ಗಳಾದ ಮೇಲೆ ಧರ್ಮವಿನ್ನೆಲ್ಲಿಯದು? ಒಂದೆರಡು ಯುದ್ಧಗಳಲ್ಲಿ ಈ ಕಾಲದಲ್ಲಿ ಜೀವಿಸಿದ ನಾವು ಯುದ್ಧವು ನಮ್ಮನ್ನು ತಟ್ಟದಿದ್ದರೂ, ನಾವು ಅದರ ಎಲ್ಲೋ

ಅಂಚಿನಲ್ಲೊಂದು ಕಡೆ ಇದ್ದರೂ ಎಂತು "ಸ್ತ್ರೀಷು ದುಷ್ಟಾಸು" ಎನ್ನುವುದನ್ನು ಕಣ್ಣಾರೆ ಕಂಡೆವು. ಅಂತೆಯೇ ಅರ್ಜುನನೂ ಭಾವಿಸಿರಬೇಕು. ಯಾವಾಗಲೂ ಯುದ್ಧದಲ್ಲಿ ಗೆದ್ದವನು ಸೋತ, ಸೋತವನು ಸತ್ತ. ಹೀಗಿರುವಲ್ಲಿ ಯಾರಿಗೆ ತಾನೆ, ಯಾವ ಪಕ್ಷದವರಿಗೆ ತಾನೆ ಏನು ಲಾಭವುಂಟು? ಯಾವುದಕ್ಕಾಗಿ, ಯಾರಿಗಾಗಿ ಯುದ್ಧ ನಡೆಯುತ್ತದೆಯೋ ಅವರೆಲ್ಲ ನಾಶವಾಗುತ್ತಾರೆ. ರಾಜ್ಯ ಹಾಳು, ಯೋಧರು ಸಾಯುವರು, ಸಂಪತ್ತು ನಷ್ಟ, ದ್ವೇಷಾಸೂಯೆಗಳು ಹೆಚ್ಚುವುವು. ಈ ಪರಿಣಾಮಗಳಲ್ಲಿ ಗೆದ್ದವನಿಗೆ ತಾನೆ ಗಾದಿ ಏರುವುದರಿಂದ ಏನು ಸುಖವುಂಟು? ಎಂಬು ಅರ್ಜುನನ ತರ್ಕ.

"ಧರ್ಮವನ್ನು ನೀನು ಕಾಪಾಡಿದರೆ, ಧರ್ಮವು ನಿನ್ನನ್ನು ಕಾಪಾಡುತ್ತದೆ." ಯುದ್ಧದಿಂದ ಅಧರ್ಮವೇ ಆಚರಿಸಿದರೆ ಇನ್ನು ಧರ್ಮವನ್ನು ಕಾಪಾಡುವವ ರಾರು? ಮತ್ತು ಧರ್ಮವು ಯಾರನ್ನು ಕಾಪಾಡಬಲ್ಲುದು?

> ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್
> ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥

ಈ ತರ್ಕಗಳಿಂದ ರಾಜ್ಯಸೌಖ್ಯ ಲಾಭಕ್ಕಾಗಿ ಸ್ವಜನರನ್ನು ಕೊಲ್ಲಲೊಲ್ಲೆನೆಂದು ಶೋಕದಿಂದ ಕಲುಷಿತವಾದ ಮನಸ್ಸುಳ್ಳವನಾಗಿ ಬಿಲ್ಲುಬಾಣಗಳನ್ನು ಬಿಸುಟು ರಥದಲ್ಲಿ ಕುಳಿತನು.

ಆದರೆ ಪ್ರಸ್ತುತಃ ಆಗ ಇದ್ದ ಪರಿಸ್ಥಿತಿಯಾದರೂ ಏನು? ಧರ್ಮವೆಲ್ಲಿದೆ? ಅಧರ್ಮ ತಾಂಡವವಾಡುತ್ತಿದೆ. ಅದಕ್ಕೆ ಕಾರಣರಾದವರೂ ಕೌರವರಲ್ಲವೆ? ಇವರು ಮಾಡದ ಅಧರ್ಮವಾವುದುಳಿದಿದೆ? ಇವರನ್ನು ಕೊಲ್ಲದೆ ಬಿಟ್ಟರೆ ಧರ್ಮಕ್ಕೆ ಇನ್ನು ಎಡೆ ಎಲ್ಲುಂಟು? ಧರ್ಮ ಉಳಿವುದು ತಾನೆ ಎಂತು? ಇಂಥ ಅಧರ್ಮಿಗಳ ನಾಶಕ್ಕೆ ನಿಲ್ಲಬೇಕಾದವನೊಬ್ಬನೇ. ನಿಲ್ಲದೆ ವಿಮುಖನಾದರೆ ಧರ್ಮವೆಂತು ನಿಲ್ಲುವುದು? ಇದೊಂದು ದೊಡ್ಡ ವ್ಯಸನ, ಅರ್ಜುನನ ವ್ಯಸನ ಶ್ರೀಕೃಷ್ಣನಿಗೆ ದೊಡ್ಡ ವ್ಯಸನವಾಗಿ ಕೂತುಕೊಂಡಿತು.

ಗೀತೆಯಲ್ಲಿ ನವರಸ ತಾಂಡವವಾಡುತ್ತದೆ. 'ಎಲೆ ಎತ್ತ್ಯೋ ಗುಂಡಾ' ಎಂದರೆ 'ಉಂಡೋರು ಎಷ್ಟು ಜನ?' ಎಂದು ಕೇಳಲು ಏನು ಹಕ್ಕು? ರಥ ನಡಸುವ ಶ್ರೀಕೃಷ್ಣನನ್ನು 'ರಥವನ್ನು ಸೈನ್ಯಗಳೆರಡರ ಮಧ್ಯೆ ನಿಲ್ಲಿಸು' ಎಂದರೆ 'ಪಶ್ಯೈ ತಾನ್ ಕುರೂನ್' ಎಂದು ಕೌರವ ಬಲಗಣನೆಗೆ ದೃಷ್ಟಿಯನ್ನೇಕೆ ಎಳೆಯುವ

ಅಧಿಕಪ್ರಸಂಗ? ಶ್ರೀಕೃಷ್ಣನು ರಥವನ್ನು ಪಥದಲ್ಲಿ ನಡಸುವ ಸಾರಥಿ ಮಾತ್ರ ವಲ್ಲ. ರಥದಲ್ಲಿರುವ ಅರ್ಜನನನ್ನೇ ಸರಿಯಾದ ಪಥದಲ್ಲಿ ನಡಸುವ ರಥಿಕ. ಬರಿಯ ಸಾರಥಿಯಾಗಿ, ಸೇವಕನಾಗಿದ್ದರೆ, ಯಜಮಾನ ಹೇಳಿದಂತೆ ಕೇಳ ಬೇಕಾಗಿತ್ತು. ಆದಾಗ್ಯೂ ಆಪ್ತ ಸೇವಕನಾದವನು ಕೂಡ ಯಜಮಾನ ಹೇಳಿ ದುದು ಸರಿಯಾಗಿಲ್ಲದೆ ಸಮ್ಮತವಾಗದಿದ್ದರೆ, ಬೇರೆ ಸಲಹೆ ಸೂಚನೆಗಳನ್ನು ವಿನಯದಿಂದಲಾದರೂ ಕೊಡುವನು. ಆದರೆ ಈ ಸಾರಥಿ, ಮಿತ್ರ, ಬಂಧು, ಕೇವಲ ಸಹಾಯಕ್ಕಾಗಿಯೇ ಸಾರಥ್ಯವನ್ನು ವಹಿಸಿರುವುದು. ಆತ ಸಾರಥಿ ಯಾಗಿ ಬಂದಿರುವುದೇ ಒಂದು ಮೆಹರ್‌ಬಾನಿ. ಯೋಧನಿಗೆ ಸಾರಥಿಯಲ್ಲಿ ಹೆಮ್ಮೆ. ಅರ್ಜುನನು ಈ ಸಂದರ್ಭದಲ್ಲಿ ಶ್ರೀಕೃಷ್ಣನನ್ನು ಕೇವಲ ಸಾರಥಿಯ ನ್ನಾಗಿ ಭಾವಿಸದೆ, ಸುಪಥದರ್ಶಿಯಾಗಿ ಒಪ್ಪಿರುವುದೇನೂ ಹೆಚ್ಚಲ್ಲ. 'ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ' ಎಂದು ಮುಂಡಕೋಪನಿಷತ್ತಿನಲ್ಲಿ ಬರುವ ದಿವ್ಯದೃಶ್ಯವು, ಈ ರಥದಲ್ಲಿ ಮಂಡಿಸಿರುವ ಶ್ರೀಕೃಷ್ಣಾರ್ಜುನರನ್ನು ಭಾವಿಸಿದರೆ ಕಣ್ಣಿಗೆ ಕಟ್ಟಿದಂತಾಗುವುದು. ಮರದ ಮೇಲಲ್ಲ, ಈ ಚಿನ್ನದ ಹಕ್ಕಿಗಳು ಸುಖವಾಗಿ ಸಮಾನವಾಗಿ ಕೂತಿರುವುದು; ರಥದ ಮೇಲೆ. "ಶರೀರಂ ರಥಮೇವ ತು" ಎಂದು ಹೇಳಿರುವಂತೆ ಶರೀರವೆಂಬ ರಥದ ಮೇಲೆ ಜೀವಾತ್ಮ ಪರಮಾತ್ಮರೆಂಬ ಈ ಎರಡು ಹಕ್ಕಿಗಳೂ ನರನಾರಾ ಯಣ ರೂಪದಲ್ಲಿ ಕುಳಿತಿರುವುದು. ಆದರೆ ಇಲ್ಲಿ ಪರಮಾತ್ಮಸ್ವರೂಪವಾದ ಹಕ್ಕಿಯು ಜೀವಾತ್ಮನಾದ ಹಕ್ಕಿಯು ಫಲವನ್ನು ತಿನ್ನುತ್ತಿರುವಾಗ ಸುಮ್ಮನೆ ನೋಡುತ್ತ ಹಾಯಾಗಿ ಕುಳಿತಿರದೆ, ಅದಕ್ಕೆ ನಿತ್ಯಾನಿತ್ಯೋಪದೇಶವನ್ನೂ, ಧರ್ಮಾಧರ್ಮಪರಿಜ್ಞಾನವನ್ನೂ, ವಿವೇಕವೈರಾಗ್ಯಪಥ ದರ್ಶನವನ್ನೂ ಸಹೃದಯದಿಂದ ವಿವರಿಸುವುದು. ಆದುದರಿಂದ ಈ ಉಪದೇಶವು ಜೀವಾತ್ಮನ ಉದ್ಧಾರಕ್ಕಾಗಿ ಪರಮಾತ್ಮನ ಸಂದೇಶವೆಂದೂ ಜೀವಾತ್ಮನನ್ನು ತನ್ನಂತೆಯೇ ಮಾಡಿಕೊಳ್ಳಲು ಪರಮಾತ್ಮನ ಸುಪ್ರಯತ್ನವೆಂದೂ ಭಾವಿಸಿ ಪಠಿಸಬೇಕು. ಆತನ ಮಾತಿನಲ್ಲಿ ಅತ್ಯಂತ ಗೌರವ. ನೋಡೆಂದು ಹೇಳಿದುದರಿಂದ ಕೌರವರ ಪಕ್ಷದಲ್ಲಿ ತಾನು ಇದುವರೆಗೂ ಗಮನಿಸದ ವಿಷಯವೇನಿದೆಯೋ ಎಂದು ನೋಡಿದನೇನೋ! ಆ ಸಂದರ್ಭದಲ್ಲಿ ಕೂಡ ವ್ಯಾಮೋಹವೇ! ಬಂಧುಗಳೆಂದು ದುಷ್ಟರಾಗಿ ದುರ್ಮಾರ್ಗಿಗಳಾದ ಮೇಲೆ ಬಂಧುಗಳಾದರೇನು? ಬಂಧುತ್ವವು

ಅವರ ತಪ್ಪನ್ನು ಕಾಣದಂತೆ ಮಾಡಬಾರದು. ನಿಷ್ಠನಾದ ನ್ಯಾಯಮೂರ್ತಿಯು ತಪ್ಪಿತಸ್ಥನನ್ನು, ಅವನು ತನ್ನ ಬಂಧುವೇ ಆದರೂ, ಮಗನೇ ಆದರೂ, ನ್ಯಾಯ ದೃಷ್ಟಿಯಿಂದ ಶಿಕ್ಷಿಸಲೇ ಬೇಕು. ಇಲ್ಲವಾದರೆ ಧರ್ಮಸ್ಥಾಪನೆಯೆಂತು? ಅದೇ ಕ್ಷತ್ರಿಯ ಧರ್ಮವಲ್ಲವೆ? ಧರ್ಮಪಾಲನಾರ್ಥವಾಗಿ ದುಷ್ಟರನ್ನು ಶಿಕ್ಷಿಸಿ, ತನ್ನವರು ಪರರು ಎಂಬ ಭೇದಭಾವವಿಲ್ಲದೆ ದುಷ್ಟನಿಗ್ರಹ ಶಿಷ್ಟಪರಿಪಾಲನೆಯನ್ನಲ್ಲವೆ ಮಾಡಬೇಕಾದುದು ರಾಜಧರ್ಮ?

ಈ ಅರ್ಜುನನಾದರೋ ತನ್ನ ಬಂಧುತ್ವದ ಮೇಲೆ ತನ್ನ ಹಕ್ಕನ್ನಾದರೂ ತ್ಯಜಿಸಿ, ತನಗೆ ಅನನುಕೂಲವಾದರೂ ಸಹಿಸಿ, ಬಾಂಧವರನ್ನು ಶಿಕ್ಷಿಸದೆ ಬಿಟ್ಟು ಬಿಡುವುದಾಗಿ ನಿರ್ಧರಿಸಿದನು. ಆದರೆ ಎದುರಾಳಿಗಳಿಗೆ ಇವನ ಧಾರಾಳ ಮನೋಭಾವ ಹೇಗೆ ಭಾಸವಾಗಬೇಕು? ಅವರು ಅದನ್ನು ಹೇಡಿತನದಿಂದ ಓಡಿಹೋದನೆಂದೇ ಭಾವಿಸುವರಲ್ಲವೆ? ಅದರಲ್ಲೂ ಅಪ್ರತಿಮ ವೀರನಾದ ಅರ್ಜುನ. ಅವನೇ ಯುದ್ಧಕಾಲದಲ್ಲಿ ಹಿಂದೇಟು ಹಾಕಿದನೆಂದರೆ ಜನ ನಗರೆ? ಉತ್ತರನಾದರೂ ಪರವಾಯಿಲ್ಲ; ಜನ ಹಾಸ್ಯದಿಂದ ನಗುವರು. ಅರ್ಜುನ ನಾದರೆ ಆಡಿಕೊಳ್ಳುವರು. ಅದನ್ನು ಆಪ್ತ, ಮಿತ್ರ, ಬಂಧು, ಕೃಷ್ಣ ಹೇಗೆ ಸೈರಿಸಬಲ್ಲ?

ಎಂಥ ಹಾಸ್ಯಾಸ್ಪದ ಸನ್ನಿವೇಶ ಒದಗಿತು! ಮದುವೆಗೆ ಎಲ್ಲ ಅಣಿಯಾಗಿ ಕಲ್ಯಾಣಮಂಟಪದಲ್ಲಿ ಎಲ್ಲರೂ ಕನ್ಯಾದಾನಕ್ಕೆ ನಿರೀಕ್ಷಿಸುತ್ತ ಕುಳಿತು, ಕನ್ಯೆ ಅಲಂಕೃತಳಾಗಿ ಕುಳಿತಿರುವಾಗ, ಗಂಡು ಮುನಿಸಿಕೊಂಡು, ಯಾವುದೋ ನೆಪದಿಂದ ಓಡಿಹೋದನಂತೆ. ಎಲ್ಲರಿಗೂ ಏನು ಹೇಳುವುದು? ಮುಹೂರ್ತ ಮಿಂಚುತ್ತಿದೆ. ವರನನ್ನು ಹಿಡಿದುತಂದು ತಾಳಿ ಕಟ್ಟಿಸಲು ಕಟ್ಟಿಹಾಕಬೇಡವೆ? ನಾಟಕಕ್ಕೆ ಎಲ್ಲ ಸಿದ್ಧವಾಗಿರುವಾಗ ಮುಖ್ಯಪಾತ್ರ ನಾಯಕನೇ ಗೈರ್ಹಾಜರಿಯಾ ದಂತೆ. ಉಂಟೆ? ಜನಸಂದಣಿ ಬಂದು ಸೇರಿರುವುದು, ಮುಖ್ಯ ನಾಯಕನ ಪಾತ್ರಾಭಿನಯವನ್ನು ನೋಡಲಲ್ಲವೆ? ಅವನೇ ಇಲ್ಲವಾದರೆ ಹೇಗೆ?

ಯುದ್ಧದಲ್ಲಿ ಅರ್ಜುನನೇ ವಿಮುಖನಾದರೆ, ಕೌರವರಿಗೆ ಮಹಾಭಾರತ ಯುದ್ಧದಲ್ಲಿ ಜಯ ಲಭಿಸಿದಂತೆಯೇ. ಐವರಲ್ಲಿ ಒಬ್ಬನಲ್ಲ, ಪಾಂಡವರ ಪೈಕಿ ಬಲಗಣನೆಯಲ್ಲಿ ಭೀಮನೆಂತೋ ಧನುರ್ವಿದ್ಯೆಯಲ್ಲಿ ಅರ್ಜುನ ಹಾಗೆ. ಅರ್ಧ ಬಲವೆಂದಾದರೂ ಒಪ್ಪಬೇಕು; ಹೆಚ್ಚಿಗೆ ಹೇಳದಿದ್ದರೆ, ಇಂಥಾ ಇಸಮನ್ನು

ಒಳ್ಳೆಯ ಸಮಯದಲ್ಲೆ, ಆಸಾಮಿಯೇ ಇಲ್ಲದಂತೆ ಮಾಡಿಕೊಂಡರೆ ಅಸಲಿಲ್ಲದೆ ವ್ಯಾಪಾರಕ್ಕೆ ಹೊರಟಂತೆ. ಶ್ರೀಕೃಷ್ಣ ಸಮ್ಮತಿಸಿಯಾನೆ?

ಇಂಥಾ ಮಹಾಶೂರನಾದ ಅರ್ಜುನನು ಒಳ್ಳೆಯ ಕಷ್ಟಸಮಯದಲ್ಲಿ ಯುದ್ಧ ಒದಗಿದಾಗ ಕರ್ತವ್ಯವಿಮುಖನಾಗಿ ವೈರಾಗ್ಯ ಶುರುಮಾಡಿದುದು 'ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡಂತೆ' ಹಾಸ್ಯಸಮಸ್ಯೆಯಾಗಿಯೇ ಪರಿಣಮಿಸಿತು. ಆದುದರಿಂದ ಶ್ರೀಕೃಷ್ಣನು ಕೊಂಚ ತಮಾಷೆಯಾಗಿಯೇ ಬುದ್ಧಿ ಹೇಳತೊಡಗಿದನು. ಏನೋ ಭಾರಿ ವಿಷಯವನ್ನು ಕಂಡುಹಿಡಿದವನಂತೆ ಅರ್ಜುನನ ಭಾವನೆ. ಆದಿಯಿಂದ ಎಲ್ಲರಿಗೂ ಕಾರ್ಯಾರಂಭದಲ್ಲಿ ಮುಚ್ಚುವ ಮುಸುಕಿಗೆ ತುತ್ತಾಗಿರುವನಷ್ಟೆ. ಈ ಭಾವನೆಗಳೇನೂ ಹೊಸವಲ್ಲ. ಈತನೇನೂ ಮೊದಲನೆಯ ಭಾವಿಯಲ್ಲ. ಕೊಲ್ಲುವವನಂತೆ ಒಬ್ಬ ಕೊಲೆಪಾತಕನನ್ನು ನೇಣುಹಾಕುವರು. ಅವನು ಕೊಲ್ಲಲ್ಪಟ್ಟನು. ಕೊಲ್ಲುವಾತನು ನೇಣುಹಾಕುವವನೆ? ಕಾರಾಗೃಹದ ಅಧಿಕಾರಿಯೇ ಹಾಕಲು ಸಲಕರಣೆಯೊದಗಿಸಿ ಕೊಟ್ಟುದದಕ್ಕೆ. ಹಾಕಲು ಅಪ್ಪಣೆಯಿತ್ತ ನ್ಯಾಯಾಧಿಕಾರಿಯೆ? ಈ ಮೂವರು ಕೊಲೆಪಾತಕನನ್ನು ನೇಣುಹಾಕಿ ಕೊಂದಾಗ, ತಾವು ಕೊಂದಂತೆ ಎಂಬ ಶಂಕೆಯಿಂದ ಕಾರ್ಯವಿಮುಖರಾಗುವರೆ? ಇತರರು ·ಇವರನ್ನಾದರೂ ಕೊಂದವರೆಂದು ದೂಷಿಸುವರೆ? ತಮ್ಮ ಕರ್ತವ್ಯವನ್ನು ತಾವು ಮಾಡಿದಾಗ ಶಂಕೆ ಎಂತು! ಕೊಂದವರು ಇವರಾರೂ ಅಲ್ಲ. ಅವನು ಮಾಡಿದ ಕೊಲೆಯೇ ಅವನನ್ನು ಕೊಂದಿತು. ಕೊಲೆ ಮಾಡಿ ತಪ್ಪಿಸಿಕೊಳ್ಳಲಾಗುವುದೆ? ಎಷ್ಟು ಮುಚ್ಚುಮರೆಯಲ್ಲಿ ಯಾರೂ ಕಾಣದಂತೆ ತಾನೊಬ್ಬನೆ ಮಾಡಿದರೂ, ನೋಡಿದವ ಸರ್ವಾಂತರ್ಯಾಮಿ ನಿತ್ಯ ನಿಜಸಾಕ್ಷಿಯೊಬ್ಬನಿಲ್ಲವೆ? ಆ ಸಾಕ್ಷಿಯ ಮುಂದೆ ಇನ್ನಾರು? ಕೊಲೆ ಹೊರಗೆ ಬಿದ್ದೇಬೀಳುವುದು. ಶಿಕ್ಷೆಯಾಗಿಯೇ ಆಗುವುದು. ಈ ತರ್ಕ ಹೊಸದಾಗಿ ತನಗೇ ಭಾಸವಾದಂತೆ ತಾನೇ ಎದುರಾಳಿಗಳನ್ನೆಲ್ಲ ಕೊಲ್ಲುವವನೆಂದು ತಿಳಿದಿದ್ದಾನೆ. ಕೌರವರ ಕ್ರೌರ್ಯವೇ ಅವರನ್ನು ಮೃತ್ಯುವಿನ ಬಾಯಿಗೆ ದಬ್ಬಿದೆ. ಮುಂದೆ ವಿಶ್ವರೂಪದರ್ಶನದಲ್ಲಿ ಸ್ವಾಮಿಯು ಆಗಲೇ ಕೌರವರೆಲ್ಲ ಹೇಗೆ ಮೃತರಾಗಿದ್ದಾರೆಂದು ಅರ್ಜುನನಿಗೆ ತೋರಿಸುತ್ತಾನೆ. ಆದರೆ ಇಲ್ಲಿ ಅರ್ಜುನನು ನಿಮಿತ್ತ ಮಾತ್ರ ನಿಂತು, ಧರ್ಮಸ್ಥಾಪನೆಗಾಗಿ ತನ್ನ ಭಾಗದ ಕಾರ್ಯವನ್ನು ನಿರ್ವಹಿಸಲೇಬೇಕು. ವ್ಯಾಮೋಹಪಾಶಕ್ಕೆ ಸಿಲುಕಿ ಕುಳಿತಿರುವವನನ್ನು

ಸುಮ್ಮನೆ ಬಿಟ್ಟಾನೆ ಸ್ವಾಮಿ? ಈ ನಾಟಕವನ್ನು ನೋಡಿ ಪರಿಹಾಸ್ಯದಲ್ಲಿಯೇ ಹೇಳಿದ ಕೃಷ್ಣ.

ಈ ಭಗವದ್ಗೀತೆಯು ಉಪನಿಷತ್ತುಗಳಿಗೆ ಸಮನಾದುದು. ಇದು ಬ್ರಹ್ಮವಿದ್ಯೆ. ಇದು ಯೋಗಶಾಸ್ತ್ರ. ಪ್ರತಿ ಅಧ್ಯಾಯವೂ ಒಂದೊಂದು ಯೋಗನಾಮಕ ಅಧ್ಯಾಯ ಪಡೆಯಬೇಕಾದ ಗೂಢತತ್ತ್ವಾರ್ಥ ಹೊಂದಿದ ಆಣಿಮುತ್ತು.

ಈ ಮೊದಲನೆಯ ಅಧ್ಯಾಯವು ಹೇಗೆ ಪ್ರತಿಯೊಬ್ಬನೂ ತನ್ನ ಕ್ಷೇತ್ರವನ್ನು ಧರ್ಮಕ್ಷೇತ್ರವೆಂದೂ, ಧರ್ಮವನ್ನು ಕಾಪಾಡಬೇಕಾದ ಸ್ಥಾನವೆಂದೂ, ಕುರು ಕ್ಷೇತ್ರವೆಂದೂ, ಧರ್ಮಾಧರ್ಮಗಳಿಗೆ ಹೊಡೆದಾಟವಾಗುವ ಸ್ಥಾನವೆಂದೂ, ಆ ಧರ್ಮಸ್ಥಾನದ ಕಾರ್ಯದ ಹೋರಾಟದಲ್ಲಿ ಹೇಗೆ ಸ್ವಾಮಿಯು ತನ್ನನ್ನು ಧರ್ಮಾಧರ್ಮಗಳ ಬಲಗಳ ಮಧ್ಯೆ ನಿಲ್ಲಿಸಿದ್ದಾನೆಂದೂ, ನಿಲ್ಲಿಸಿ ಎದುರಿಸಿರುವ ಪ್ರಬಲವಾದ ಪ್ರತಿಕಕ್ಷಿ ಅಧರ್ಮದ ಬಲಾಬಲಗಳನ್ನು ಈಕ್ಷಿಸಿ, ಪರೀಕ್ಷಿಸಿ, ಆಲೋಚಿಸಿ ದೃಢಕಾರ್ಯವ್ಯವಸ್ಥೆಗೆ ಸಿದ್ಧನಾಗಿರಬೇಕೆಂದೂ, ಆ ಸಂದರ್ಭಗಳಲ್ಲಿ ಬರುವ ಶಂಕೆ, ಸಂಶಯಗಳಿಗೆ ಎಡೆಕೊಟ್ಟು ದಿಗಿಲುಬಿದ್ದು ಕಾರ್ಯವಿಮುಖನಾಗ ಬಾರದೆಂದೂ, ಬಂದಾಗ ಆ ಶಂಕೆ ಸಂಶಯ ನಿವೃತ್ತಿಗೆ ಅಂತರ್ಯಾಮಿಯಾದ ಪರಮಾತ್ಮನನ್ನು ಮರೆಹೊಕ್ಕು ಸರಿಯಾದ ದಾರಿಗೆ ಬೆಳಕು ತೋರಲು ಶರಣು ಹೋಗಬೇಕೆಂದೂ, ತನ್ನ ಸ್ವಕರ್ಮಕ್ಕೆ ತಲೆಬಾಗಿ, ಜನಾಪವಾದಗಳಿಗೆ ಹೆದರಿ ಮಾಡಬೇಕಾದ ಕಾರ್ಯಕ್ಕೆ ಸಂದೇಹಪಡದೆ ಧೈರ್ಯದಿಂದ ಹೆಜ್ಜೆಯಿಡಲು ಭಗವ ದಾಶೀರ್ವಾದ ಕೋರಬೇಕೆಂದೂ ಘಂಟಾಘೋಷವಾಗಿ ಸಾರುತ್ತದೆ.

ಉಪನಿಷತ್ತು, ಬ್ರಹ್ಮವಿದ್ಯಾ, ಯೋಗಶಾಸ್ತ್ರಗಳನ್ನು ಒಳಕೊಂಡ
ಶ್ರೀ ಕೃಷ್ಣಾರ್ಜುನಸಂವಾದದಲ್ಲಿ
ಅರ್ಜುನವಿಷಾದಯೋಗವೆಂಬ ಮೊದಲನೆಯ ಅಧ್ಯಾಯ ಸಂಪೂರ್ಣ.

# ಅಧ್ಯಾಯ ೨: ಸಾಂಖ್ಯಯೋಗ

## ಜ್ಞಾನ, ಅದರ ಸಾಧನೆಗಾಗಿ ಕರ್ಮ; ಕರ್ಮಫಲ ತತ್ತ್ವಶುದ್ಧಿ; ಅದರ ಫಲವಾಗಿ ತತ್ತ್ವಜ್ಞಾನ. ಅಂತಹ ಜ್ಞಾನಿ.

ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥೧॥
ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥೩॥

ಎರಡನೆಯ ಅಧ್ಯಾಯದ ಮೊದಲಿನಲ್ಲಿಯೇ ಶ್ರೀಕೃಷ್ಣನ ಕರುಣೆಯ ಪ್ರಸ್ತಾಪ. 'ತಂ ತಥಾ ಕೃಪಯಾವಿಷ್ಟಂ' ಆದರೂ ಕಠಿಣೋಕ್ತಿಯಂತೆ ಕಾಣುವ 'ಕ್ಷುದ್ರಂ ಹೃದಯದೌರ್ಬಲ್ಯಂ' ಎಂಬ ಮಾತುಗಳನ್ನೇ ಉಪಯೋಗಿಸಿ, ಪಾಲಿಸಲೇ ಬೇಕೆಂದು ನಿಷ್ಠುರವಾಗಿ ಹೇಳುವಂತೆ 'ಉತ್ತಿಷ್ಠ' ಎಂದು ಅಪ್ಪಣೆ ಮಾಡುತ್ತಾನೆ. 'ಉತ್ತಿಷ್ಠ' ಎಂಬ ಶಬ್ದವು ಕಠೋಪನಿಷತ್ತಿನ ಸುಪ್ರಸಿದ್ಧ 'ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ' ಎಂಬ ವಾಕ್ಯವನ್ನು ಮನಸ್ಸಿಗೆ ತರುತ್ತದೆ. ಸರಿಯಾದ ಗುರುವನ್ನು ಹೊಂದಿ, ಸರಿಯಾದ ಮಾರ್ಗದಲ್ಲಿ ಬೋಧಿತನಾಗೆಂದು ಎಚ್ಚರಿಸಿ ಎಬ್ಬಿಸುವ ವಾಕ್ಯ. ಆ ದೃಷ್ಟಿಯಿಂದಲೇ ಪರಮಾತ್ಮನು ಸರಿಯಾದ ಉಪದೇಶವನ್ನು ಪಡೆಯಲೆಂದೂ, ಸರಿಯಾದ ಗುರುವನ್ನು ಅವಲೋಕಿಸಲೆಂದೂ, 'ಉತ್ತಿಷ್ಠ' ಎಂದು ಸಂಬೋಧಿಸುವುದಾದರೂ ಯಾರನ್ನು? 'ಪರಂತಪ' ಶತ್ರುಗಳನ್ನು ಹೇಗೆ ತಪಿಸಬಲ್ಲನೋ ಅಂತೆಯೇ ಸಂಶಯಗಳನ್ನು ಗೆಲ್ಲಬಲ್ಲ ವೀರ 'ಪರಂತಪ.' 'ಕ್ಷುದ್ರಂ ಹೃದಯದೌರ್ಬಲ್ಯಂ' ಎನ್ನುವ ನಿಷ್ಠುರೋಕ್ತಿಗಳು ಈ ಶಹಬಾಷ್‌ಗಿರಿ 'ಪರಂತಪ'ದಲ್ಲಿ ತೇಲಿಹೋದವು. ಅವನ ಹೃದಯದೌರ್ಬಲ್ಯವನ್ನು ತೋರಲು ಸಂಬೋಧಿಸಿದ ಅನ್ವರ್ಥನಾಮವೇ ಅವನ ಹೃದಯಬಲವನ್ನೂ ಸೂಚಿಸುತ್ತದೆ. ಬಲಾಬಲಗಳನ್ನು ನೋಡೆಂದಲ್ಲವೆ ಹೇಳಿದುದು ಸ್ವಾಮಿ? ದೌರ್ಬಲ್ಯವಾದರೂ ಆವರಿಸಿರುವ ಹೃದಯ ಎಂತಹ ಬಲವಾದ ಹೃದಯ? 'ಪರಂತಪ'—ಶತ್ರುಗಳು ತಪಿಸಬೇಕಾದ ವಜ್ರಹೃದಯ. ಗುರುವಿಗೆ ತಕ್ಕ ಶಿಷ್ಯ. ಅವನು 'ಶತ್ರುತಾಪಕನೇ' ಎಂದು ಸಂಬೋಧಿಸಿದರೆ ಇವನು 'ಶತ್ರುನಾಶಕನೇ ಮಧುಸೂದನ' ಎಂದು ಸಂಬೋಧಿಸಿ, ಹೃದಯ

ದೌರ್ಬಲ್ಯದ ಕಾರಣವನ್ನು ಹೇಳಿಕೊಳ್ಳುವ ತತ್‌ಕ್ಷಣದಲ್ಲೇ ಎಂತಹ ಶರಣು ವಾಕ್ಯವನ್ನು ಪಠಿಸಿದ್ದಾನೆ!

ಕಾರ್ಪಣ್ಯದೋಷೋಪಹತಸ್ವಭಾವಃ।
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ॥
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ।
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥

ಆದುದರಿಂದಲೇ ಏನೋ ಶ್ರೀಶಂಕರರು 'ಕಾರ್ಪಣ್ಯದೋಷೋಪಹತ ಸ್ವಭಾವಃ . . . ಮಾಂ ತ್ವಾಂ ಪ್ರಪನ್ನಮ್' ಎನ್ನುವ ಶ್ಲೋಕದಿಂದ ಗೀತೆ ಪ್ರಾರಂಭವಾಗುತ್ತದೆಂದು ಅಭಿಪ್ರಾಯಪಟ್ಟಿದ್ದಾರೆ. ಶ್ಲೋಕವು ಎಂತಹ ಗಂಭೀರವಾದ ಶರಣುಶ್ಲೋಕದಲ್ಲಿ ಪರಿಣಮಿಸಿತು! ಈ ಶ್ಲೋಕವು, ಪ್ರೀತಿಯಿಂದ ನಲಿಯುತ್ತಿದ್ದ ಹಕ್ಕಿಗಳಲ್ಲೊಂದನ್ನು ಹತಮಾಡಿದ ಬೇಡನನ್ನು ನೋಡಿ ವಾಲ್ಮೀಕಿ ಮಹರ್ಷಿಯು ಅವನಿಗೆ ಶೋಕದಿಂದ ಶಾಪಕೊಟ್ಟ 'ಮಾ ನಿಷಾದ ಪತಿಷ್ಠಾಂ ತ್ವಂ ಅಗಮಃ ಶಾಶ್ವತೀಸ್ಸಮಾಃ ಯತ್‌ಕ್ರೌಂಚಮಿಥುನಾದೇಕಂ ಅವಧೀಃ ಕಾಮಮೋಹಿತಂ' ಎಂದು ಹಾಡಿದ ಶೋಕಶಾಪವು ಶ್ರೀಮದ್ರಾಮಾಯಣದ ಪುಣ್ಯಶ್ಲೋಕವಾಗಿ ಪ್ರಾರಂಭಿಸಿದಂತೆ, ಅರ್ಜುನನ ಶೋಕಪ್ರಲಾಪವು ಶ್ರೀ ಭಗವಂತನ ಪ್ರಾರ್ಥನೆಯ ಈ ಪುಣ್ಯಶ್ಲೋಕದಿಂದ ಗೀತೆಯು ಪ್ರಾರಂಭವಾಗಿದೆಯೆಂದು ಆದಿಶಂಕರರು ಹೇಳಿದುದು ಸರಿಯೆ! ಅರ್ಜುನನ ಈ ಮುತ್ತಿನಂತಹ ಪ್ರಾರ್ಥನೆಯು, ಶೋಕ, ಮೋಹ, ದೋಷಗಳಿಂದ ಹತಸ್ವಭಾವರಾದಂಥ ನಮ್ಮಗಳೆಲ್ಲರಿಗೂ, ಆರ್ತಧ್ವನಿಯಿಂದ ಭಗವಂತನನ್ನು ಬೇಡಲು ಸೊಗಸಾಗಿಲ್ಲವೆ! ಎಷ್ಟಾವರ್ತಿ ಈ ಪ್ರಾರ್ಥನೆಯನ್ನು ಪಠಿಸಿದರೂ ಶರಣರಸ ಹೆಚ್ಚುವುದು. ಭಕ್ತಿಯಿಂದ ಭಗವಂತನನ್ನು ಮರೆಹೊಕ್ಕು, ನನ್ನ ಶ್ರೇಯಸ್ಸೇ ನನಗೆ ತಿಳಿಯದ ಧರ್ಮಸಮ್ಮೂಢಚೇತನಿಗೆ ಯಾವುದು ನಿಜವಾಗಿಯೂ ಶ್ರೇಯಸ್ಕರವೋ ಅದನ್ನೇ ಶಾಸನಮಾಡೆಂದು ಅರ್ಜುನನಂತಹ ವೀರನೇ ಶರಣುಹೋಗುತ್ತಿರುವಾಗ ಅಲ್ಪಜ್ಞರೂ, ಅಲ್ಪಮತಿಗಳೂ, ಅರ್ಜುನನ ಅಳತೆಯಿಂದ ನೋಡಿದರೆ ಹೇಡಿಗಳೂ ಆದ ನಾವು ಏಕೆ ದೈನ್ಯದಿಂದ ಈ ಭಗವತ್ ಪ್ರಾರ್ಥನೆಯನ್ನು ಸದಾ ಮಾಡಬಾರದು? ಇದು ವಾದಿರಾಜರು ಕೃಷ್ಣಸ್ತುತಿಯಲ್ಲಿ ಹಾಡಿರುವ 'ಹಿತಂ ನ ಜಾನಾಮ್ಯಹಿತಂ ನ ಜಾನೇ, ನಾಕರ್ತುಮೀಶೋ, ನ ಚ ಕರ್ತು

ವಿನಾಶಃ, ಯಥಾ ನಟನ್ನಾಟಕದಾರುಯನ್ತ್ರಂ, ತಥಾ ಹರೇ ಪ್ರೇರಣಯೈವ ವರ್ತೇ' ಎನ್ನುವ ದಿವ್ಯ ಪ್ರಾರ್ಥನೆಯನ್ನು ಮನಸ್ಸಿಗೆ ತರುತ್ತದೆ. ಇಷ್ಟು ಪ್ರಲಾಪಿಸಿದ ಅರ್ಜುನ 'ಮಹಾನುಭಾವಾನ್ ಗುರೂನ್' ಆದ ಆಚಾರ್ಯರನ್ನು ವಧಿಸಲಾರೆನೆಂದ ಮಹಾನುಭಾವ. 'ಧರ್ಮಸಮ್ಮೂಢಚೇತಾಃ' ಆಗಿರುವೆನೆಂದು ಜ್ಞಾನೋದಯವಾಗಿ, ನನಗೆ ಹಿತವಾವುದೋ ಅಹಿತವಾವುದೋ ಎನ್ನುವದನ್ನು ನಾನೇ ಅರಿಯೆ, ನನಗೆ ಶ್ರೇಯಸ್ಸು ಯಾವುದೆಂದು ನಿಜವಾಗಿ ನಿಶ್ಚಯಿಸಿ ಅದನ್ನು ನೀನೇ ನನಗೆ ಸಾಧಿಸಲು ಅಪ್ಪಣೆ ಮಾಡೆಂದು ಮರೆಹೊಕ್ಕ ಭಾವವು ಎಂತಹ ಗಾಢ ಪ್ರಪತ್ತಿಯದು! ಅರಿಯದ ಮೂಢನಿಗೆ ತನಗೇನೂ ಅರಿಯದೆಂಬುದೇ ಭಾಸವಾಗುವುದಿಲ್ಲ. ಮೂಢನಾದಷ್ಟು ತಾನೇ ಎಲ್ಲಾ ತಿಳಿದವನೆಂಬ ತಪ್ಪು ತಿಳುವಳಿಕೆ ಮಾತ್ರ ತುಂಬಿರುತ್ತೆ. ನಾನೇನೂ ಅರಿಯೆನೆನ್ನುವ ಮಹತ್‌ತಿಳಿವಳಿಕೆ ಯಾವಾಗ ಅವನಲ್ಲಿ ಉದಯಿಸಿತೋ ಆಗ್ಯೆ ಅವನಿಗೆ ಜ್ಞಾನೋದಯವಾದಂತೆ.

"A strong man is he who knows his own weakness. A weak man is one who does not know his own weakness. An intelligent man is one who can cover his own weakness after knowing it. A fool is one who does not cover his own weakness as he is not aware of it and does not know how to cover it up, but reveals it for the gaze of the world."

ತನ್ನ ನಿಶ್ಶಕ್ತಿಯನ್ನರಿತವನೇ ಶಕ್ತ; ತನ್ನ ನಿಶ್ಶಕ್ತಿಯನ್ನರಿಯದವನೇ ನಿಶ್ಶಕ್ತ; ತನ್ನ ನಿಶ್ಶಕ್ತಿಯನ್ನರಿತು ಅದನ್ನು ತೋರ್ಪಡಿಸದೆ ಮುಚ್ಚಬಲ್ಲವನೇ ಬುದ್ಧಿಶಾಲಿ; ತನ್ನ ನಿಶ್ಶಕ್ತಿ ಗೋಚರವಾಗದೆ ಮುಚ್ಚಲು ಉಪಾಯ ತಿಳಿಯದೆ ಅದನ್ನು ಲೋಕದೃಷ್ಟಿಗೆ ಬಹಿರಂಗಪಡಿಸುವವನೆ ಮೂರ್ಖ.

ಅರ್ಜುನನಿಗೆ 'ಧರ್ಮಸಮ್ಮೂಢಚೇತಾಃ' ಎಂಬ ತಿಳಿವಳಿಕೆ ಉದಯವಾಗುತ್ತಲೇ ತನ್ನ ಅಜ್ಞಾನದ ಅರಿವೂ ದೌರ್ಬಲ್ಯದ ತಿಳಿವೂ ಭಾಸವಾಗುತ್ತದೆ. ಅವನಿಗೆ ಜ್ಞಾನೋದಯಶಕ್ತಿ ಬಂದಂತೆ 'ಉತ್ತಿಷ್ಠ'ನಾದ, 'ಪರಂತಪ' ಜಾಗ್ರತನಾದ, ಪರಮಗುರುವನ್ನು ಹುಡುಕಿ ಮರೆಹೊಕ್ಕ. ಈ ಶ್ಲೋಕವು ಭಕ್ತರ ಶಿಖಾಮಣಿಯಾದ ಶ್ರೀ ರಾಮಾನುಜರ ಮನಸ್ಸನ್ನು ಹಿಂಗ್ಗಿಸಿರಬೇಕು. ಈ ಶ್ಲೋಕಾರ್ಥವನ್ನೇ ವಾದಿರಾಜರು ಭಕ್ತಿಯ ಆವೇಶದಲ್ಲಿ 'ಹಿತಂ ನ ಜಾನೆ' ಇತ್ಯಾದಿಯಾಗಿ ಹಾಡಿರಬೇಕು. ಈ ಶ್ಲೋಕಪ್ರಾರ್ಥನೆಯನ್ನು ಶೋಕಾವಧಿ

ಯಲ್ಲಿ ಹೇಳಬೇಕಾದರೆ ಅರ್ಜುನನಾದರೂ ಎಂತಹ ಭಗವದ್ಭಕ್ತನಿರಬೇಕು! ಎಷ್ಟರ ಮಟ್ಟಿಗೆ ಪರಮಾತ್ಮನನ್ನು ನಂಬಿರಬೇಕು! ತನ್ನ ನಿಶ್ಚಯಕ್ಕಿಂತ ಪರಮಾತ್ಮನ ನಿಶ್ಚಯವನ್ನು ನಿಜವಾಗಿ ಶಾಸನ ಮಾಡೆಂದು ಬೇಡಿದನಲ್ಲವೆ?

ತಾನು ತನ್ನದು ಎನ್ನುವದನ್ನು ತೊರೆದ ಹೊರತು ಇಂತಹ ಪ್ರಾರ್ಥನೆಯು ಉದ್ಭವಿಸಲಾರದು. ಇವನಿಗೆ ಆವರಿಸಿದ್ದ ಮೋಹವಾದರೂ ಅದೇ ತಾನೆ. ತಾನು, ತನ್ನ ಗುರುಗಳು, ತನ್ನ ದಾಯಾದಿಗಳು, ತನಗೆ ಎಲ್ಲಿಯ ಸುಖ ಎಂದಲ್ಲವೆ! ಆ ಪ್ರಾರ್ಥನಾಭಾವನೆಯಲ್ಲಿ 'ಮಾಂ ತ್ವಾಂ ಪ್ರಪನ್ನಂ' ಎಂದು ಎಂತು ತಾನು ತನ್ನದು ಎನ್ನುವುದು ಹಾರಿ ಮಾಯವಾಯಿತು! ಈ ಪ್ರಾರ್ಥನೆಯೇ ಶ್ರೀಕೃಷ್ಣಪರಮಾತ್ಮನ ಬಾಯಲ್ಲಿ ವೇದಾಂತ ಗುಹ್ಯ ವಿಚಾರ ತರಂಗವನ್ನು ಹಾಡಿಸತೊಡಗಿತು.

ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥೧೦॥

ಪುನಃ ಸಂಜಯನು 'ಸೇನಯೋರುಭಯೋರ್ಮಧ್ಯೇ' ಎನ್ನುವದನ್ನು ಉಲ್ಲೇಖಿಸಿದ್ದಾನೆ. ಇದು ಎಷ್ಟು ಸ್ವಾರಸ್ಯವಾಗಿದೆ! ಈ ಪುನರುಕ್ತಿ ಗಮನಿಸುವಿರಾ? ಮೊದಲು ಅರ್ಜುನನು 'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ' ಎನ್ನುವ ಪ್ರಾರ್ಥನೆ; ಎರಡನೆಯದಾಗಿ 'ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್' ಎಂದು ಶ್ರೀಕೃಷ್ಣಪರಮಾತ್ಮನ ರಥ ಸ್ಥಾಪನೆ; ಈಗ ಮೂರನೇ ಸಾರಿ 'ಸೇನೆಯೋರುಭಯೋರ್ಮಧ್ಯೇ' ಈ ವಚನ ವಿವರಿಸಿದನು ಎಂದು ಅಮೋಘವಾಗಿ ತತ್ತ್ವ ವಿಚಾರವನ್ನು ಆರಂಭ ಮಾಡಿದನು. ಈ ಸೇನಯೋರುಭಯೋರ್ಮಧ್ಯೇ, ಈ ದ್ವಂದ್ವಗಳ ನಡುವೆ, ಈ ಎದುರಾಳಿಗಳ ಮಧ್ಯೆ ಈ ವಿಷಯಗಳ ಸಮಸ್ಯೆಯಲ್ಲಿ ಎಲ್ಲಕ್ಕೂ ಅನ್ವಯವಾದ ಗೂಢ ತತ್ತ್ವಗಳು.

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥೧೧॥
ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥
ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥೧೬॥

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥೧೭॥

ಅಂತವಂತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥೧೮॥

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯॥

ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥೨೧॥

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥೨೩॥

ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥೨೪॥

ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೆ ।
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥೨೫॥

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।
ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥೨೬॥

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥

ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ-
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥೨೯॥

ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥೩೧॥

ಎಂಬುದಾಗಿ ಎರಡನೆಯ ಅಧ್ಯಾಯದ ಹನ್ನೊಂದನೆಯ ಶ್ಲೋಕದಿಂದ ಒಂದೇ ಸಮನಾಗಿ ೨೦ ಶ್ಲೋಕಗಳಲ್ಲಿ ಕೊನೆಯ ವರೆಗೆ ಗಾಢತತ್ವಗಳನ್ನು ಪಟಪಟನೆ ಸಾರಿಬಿಟ್ಟನು. ಯುದ್ಧಭೂಮಿಯಲ್ಲಿ ಎರಡು ಸೇನೆಗಳ ಮಧ್ಯೆ ನಿಂತ ಪರಮಾತ್ಮನು, ಕರ್ಮಭೂಮಿಯಲ್ಲಿ ಧರ್ಮಾಧರ್ಮಗಳ ಮಧ್ಯೆ ಸಿಲುಕಿರುವ ಜೀವಾತ್ಮನಿಗೆ, ಕರ್ತವ್ಯಕ್ಷೇತ್ರದಲ್ಲಿ ಏನು ಮಾಡಬೇಕು, ಏನು ಬಿಡಬೇಕು ಎಂಬ ಸಂಶಯದಿಂದ ಹತನಾದ ಅರ್ಜುನನನ್ನು ನಿಮಿತ್ತವಾಗಿಟ್ಟುಕೊಂಡು ಸಾರಿ ಹೇಳಿದನು. ಎಲ್ಲಿಂದ ಎಲ್ಲಿಗೆ? ಇರುವುದಾದರೂ ಯುದ್ಧ ಭೂಮಿಯಲ್ಲಿ, ಮೃತ್ಯುವಿನ ಕೋರೆದವಡೆಯಲ್ಲಿ ಸಿಲುಕಿರುವವನಂತೆ. ಹೇಳುವದಾದರೂ 'ಮೃತೋಽಮೃತಂ ಭವತಿ' ಎನ್ನುವಂತೆ ಮರ್ತ್ಯರನ್ನು ಅಮರರನ್ನಾಗಿ ಮಾಡುವ ಅಮೃತಧಾರೆ. ಆ ಶ್ಲೋಕಗಳಲ್ಲಿ ಧರ್ಮಶಾಸ್ತ್ರ, ಕರ್ಮಶಾಸ್ತ್ರ, ಜ್ಞಾನಶಾಸ್ತ್ರಗಳನ್ನು ಅಡಕಮಾಡಿಬಿಟ್ಟಿದ್ದಾನೆ ಪರಮಾತ್ಮ. ಉಪನಿಷತ್ತುಗಳಲ್ಲಿನ ಶ್ಲೋಕಗಳು ಹಾಗೆಹಾಗೆಯೇ ಬಂದು ನಿಂತುಬಿಟ್ಟಿವೆ, ಶಬ್ದತಃ 'ಯ ಏನಂ ವೇತ್ತಿ ಹಂತಾರಂ. . . ನ ಜಾಯತೇ ಮ್ರಿಯತೆ . . .'

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯॥

ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।

ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥

ಎರಡು ಶ್ಲೋಕಗಳೂ ಕಠೋಪನಿಷತ್ತಿನಿಂದ ಬಂದಿವೆ. ಅರ್ಥತಃ ಇನ್ನೂ ಅನೇಕವುಗಳು ಉಪನಿಷತ್ತುಗಳ ಭಾವಗಳು. ತತ್ತ್ವದರ್ಶನಗಳಲ್ಲಿ ಚರ್ಚಿಸಿರುವ ಮುಖ್ಯ ವಿಷಯಗಳಾದ ಜೀವ, ಆತ್ಮ, ದೇಹ, ಮೃತ್ಯುಗಳನ್ನು ಕುರಿತು ಮುಂದೆ ಬರಬಹುದಾದ ವಿಷಯಗಳು ಸಂಗ್ರಹವಾಗಿ ಈ ಶ್ಲೋಕಗಳಲ್ಲಿ ಅಡಕವಾಗಿವೆ. ಈಗ ಉಂಟಾಗಿರುವ ಅರ್ಜುನನ ಶೋಚನೆಗೆ ಕಾರಣವೇ ಇಲ್ಲವೆಂದು

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಂಡಿತಾಃ ॥೧೧॥

'ಪ್ರಜ್ಞಾವಾದಾಂಶ್ಚ ಭಾಷಸೇ' ಎಂದು ಮುಗುಳುನಗೆಯಿಂದಲೇ ಪರಮಾತ್ಮನು ಷುರುಮಾಡಿದನು. ತಿಳಿದವನೆಂದು ತಿಳಿದಿರುವನಿಗೆ ಏನೂ ತಿಳಿದಿಲ್ಲ; ಏನೂ ಅರಿಯೆನೆಂದು ಅರಿತಿರುವನೇ ಅರಿತಿರುವವನು. ಏನೂ ಅರಿಯೆನೆಂಬ ಅರಿವು ಅರಿಯಬೇಕಾದರೆ ಎಷ್ಟು ಅರಿವನ್ನು ಕಷ್ಟಪಟ್ಟು ಅರಿಯಲೇಬೇಕೆಂಬುದು ಆಶ್ಚರ್ಯವನ್ನುಂಟುಮಾಡುತ್ತದೆ. ಧರ್ಮಸೂಕ್ಷ್ಮವನ್ನು ತಿಳಿದಿರುವೆನೆಂದು ಭಾವಿಸಿ, ಶೋಕಿಸಲು ಅನರ್ಹರಾದವರ ವಿಷಯದಲ್ಲಿ ಶೋಕಿಸುತ್ತಿರುವನು ಮೋಹದಿಂದ ಮಾತ್ರ. ಈ ಮೋಹಜಾಲವು ಎಲ್ಲರನ್ನೂ ಯಾವಾಗ್ಯೂ ವ್ಯಾಪಿಸಿರುವಂತೆ ಅರ್ಜುನನನ್ನು ಆಚ್ಛಾದಿಸಿದೆ. ಪ್ರಾಜ್ಞರನ್ನು ಕೂಡ ಈ ಮಾಯಾಜಾಲವು ಎಷ್ಟೋ ವೇಳೆ ಅವಿವೇಕಿಗಳನ್ನಾಗಿ ಮಾಡುತ್ತದೆ. ಇದೇನು ಅರ್ಜುನನಿಗೆ ಮಾತ್ರ ಹೊಸದಲ್ಲ. ಆದರೆ ಮಾತು ಮಾತ್ರ ಪಂಡಿತನಂತೆ. ಕತ್ತಲಲ್ಲಿ ಕೊರಗುತ್ತಿರುವ ಪ್ರಾಣಿಗೆ ಬೆಳಕಾಗಿ ಕತ್ತಲು ಹರಿದು ಸಂತೋಷವಾಗುವಾಗ ಆ ಬೆಳಗು ಆ ಪ್ರಾಣಿಗೆ ಹೊಸದಾದರೂ ಪ್ರತಿದಿನವೂ ಇಂತೇ ಬೆಳಕು ಬೆಳಗಿ ಎಷ್ಟೋ ಅಂಧರಿಗೆ ಅಂಧಕಾರ ನಿವೃತ್ತಿಯಾಗುತ್ತಿದೆ. ಅಂತೆಯೇ ದೇವಮಾಯೆ ಆ ಮುಸುಕಿನಲ್ಲಿರುವವನಿಗೆ ಮೋಹಗೊಳಿಸಿರುವುದು ಈ ಅರ್ಜುನನಿಗೆ.

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥

ಈ ವರ್ತಮಾನ ದೇಹವೇ ಮೊದಲು ಕೊನೆಯಲ್ಲವೆಂದೂ, ಪ್ರತಿಯೊಬ್ಬ ದೇಹಿಯೂ ಪೂರ್ವದಲ್ಲಿ ಎಷ್ಟೋ ದೇಹಗಳನ್ನು ಧರಿಸುವವನೆಂದೂ ತನ್ನ ಸ್ವಂತ

ಉಪಮಾನದಿಂದಲೇ ಉದಾಹರಿಸಿ, ಆತನು ಕಾಲಾತೀತನೆಂದೂ ಹೇಳುವನು ಸ್ವಾಮಿ.

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥

ದೇಹಿಯು ಹೇಗೆ ಬಾಲ್ಯಯೌವನ ಮುಪ್ಪುಗಳ ಅವಸ್ಥೆಗಳನ್ನು ತಾಳುತ್ತಾನೋ ಅಂತೆಯೇ ದೇಹಾಂತರಗಳು ಪ್ರಾಪ್ತಿಯಾದಾಗ್ಯೂ ಶೋಕಿಸುವುದಿಲ್ಲ.

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥

ಈ ಉತ್ಪತ್ತಿ ವಿನಾಶಗಳಿಂದ ಸ್ಪರ್ಶಸಂಬಂಧವಾದ ಶೀತೋಷ್ಣ ಸುಖದುಃಖಾದಿ ಗಳು ಅನಿತ್ಯವಾದುದರಿಂದ ಸಹಿಸಬೇಕು.

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥

ಯಾರು ಈ ಸುಖದುಃಖ ಸ್ಪರ್ಶಗಳಿಂದ ವ್ಯಥೆಹೊಂದುವುದಿಲ್ಲವೋ ಅವರೇ ಮೋಕ್ಷಹೊಂದಲು ಅರ್ಹರಾದ ಧೀರರು. ಮೋಕ್ಷವೆಂದರೆ ಇಲ್ಲಿಯ ಜೀವನ ವೊಂದರಿಂದಲೆ ಅಲ್ಲ ಬಿಡುಗಡೆ, ಮರಣದಿಂದಲೂ ಬಿಡುಗಡೆ, ಜನನ ಜೀವನ ಮರಣಗಳೆಲ್ಲದರಿಂದಲೂ ಬಿಡುಗಡೆಯೇ ಸರ್ವಸ್ವಾತಂತ್ರ್ಯ—ಸರ್ವ ಬಂಧನ ಬಿಡುಗಡೆ—ಮೋಕ್ಷ.

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥೧೬॥

ಏಕೆಂದರೆ ಎಲ್ಲೆಲ್ಲಿಯೂ, ಎಲ್ಲರಲ್ಲಿಯೂ, ಯಾವಾಗಲೂ ಇರುವ ಈ ಸದ್ವಸ್ತು ವಿಗೆ ಅಭಾವ ಸಂಭವಿಸುವುದಿಲ್ಲ. ಅದನ್ನು ಯಾವನೂ ತನ್ನ ಆಚಾರವ್ಯವ ಹಾರಗಳಿಂದ ಹಾಳುಮಾಡಲಾರನು. ಅಸದ್ವಸ್ತುವಾದ ಈ ದೇಹಕ್ಕೆ ಸತ್ತೆ (ನಿತ್ಯತ್ವವು) ಸಂಭವಿಸುವುದಿಲ್ಲ. (ಅಧ್ಯಾಯ ೨, ಶ್ಲೋಕ ೧೭.)

ಆತ್ಮಜ್ಞಾನಕ್ಕೆ ಆಗುವ ಸಾಧನ ಚತುಷ್ಟಯಗಳಲ್ಲಿ—

ಸದಸದ್ವಸ್ತು ವಿವೇಕವೇ ಪ್ರಥಮ ಆದುದರಿಂದ ಭಗವಂತನು ಪ್ರಥಮ ದಲ್ಲಿಯೇ ಈ "ಸತ್" "ಅಸತ್" ವಿಷಯವಾದ ವಿವೇಕವನ್ನು ೧೬, ೧೭, ೧೮ನೇ ಶ್ಲೋಕಗಳಲ್ಲಿ ವಿವರಿಸಿರುವನು. ಜ್ಞಾನಸಾಧನಕ್ಕೆ, ಆತ್ಮನನ್ನು ತಿಳಿದು

ಕೊಳ್ಳಬೇಕಾದರೆ ಮುಂಚೆ 'ಆತ್ಮ' ಯಾವುದು ಎನ್ನುವ ಅರಿವು ಬರಬೇಕು. ಸಮಸ್ತವಾದ 'ದೃಷ್ಟ್ಯಾತ್ಮ ಅತಸ್ತ್ವನಯಂ' ನಮ್ಮ ಬಹಿರ್ ಅಂತರ್‌ಗೋಚರ ವಾಗುವ ವಿಷಯಗಳಲ್ಲೆಲ್ಲ 'ಅನಾತ್ಮ'ನನ್ನು ಅರಿತು ಆತ್ಮನನ್ನು ಬೇರ್ಪಡಿಸ ಬೇಕು. ಅನಾತ್ಮವಸ್ತುಗಳೆಲ್ಲ ಅನಿತ್ಯವಾದವುಗಳು, ನಿತ್ಯವಾದುದೇ ಆತ್ಮ ಎಂದು ನಿತ್ಯಾನಿತ್ಯವಿವೇಕದಿಂದ ಸದಸದ್‌ವಸ್ತುವಿನ ತಿಳಿವಳಿಕೆ ಕೊಟ್ಟು, ಅನಾತ್ಮದಿಂದ ಆತ್ಮನನ್ನು ಬೇರ್ಪಡಿಸಿ, ಆತ್ಮದರ್ಶನಕ್ಕೆ ತತ್ತ್ವೋಪದೇಶ ಮಾಡಿದನು ಸ್ವಾಮಿ. ನಿತ್ಯನಾಗಿಯೂ ನಾಶರಹಿತನಾಗಿಯೂ ಅಪ್ರಮೇಯ ನಾಗಿಯೂ ಇರುವ ಸ್ವತಃಸಿದ್ಧ ಆತ್ಮನ ಎಲ್ಲ ದೇಹಗಳೂ ಅನಾತ್ಮ, ಅಸತ್, ಅನಿತ್ಯಗಳೆಂದು ಸಿದ್ಧಾಂತಮಾಡಿ, ಅವುಗಳ ಹುಟ್ಟುಸಾವುಗಳು, ಅವುಗಳ ಕರ್ತರಿ, ಕರ್ಮಣಿ, ಹೇತು (ಪ್ರೇರಕ ಕಾರಣ) ಮೂರು ಧರ್ಮಗಳು ಆತ್ಮಕ್ಕೆ ಅನ್ವಯಿಸುವುದಿಲ್ಲವೆಂದು ಮುಂದೆ ಮೂರು ಶ್ಲೋಕಗಳಲ್ಲಿ ವಿವರಿಸಿದ್ದಾನೆ. ಆ ಸದ್ವಸ್ತುವನ್ನೇ 'ಏಕಂ ಸದ್ವಿಪ್ರಾಃ ಬಹುಧಾ ವದಂತಿ' ಎಂದು ತಿಳಿದವರು ಅನೇಕವಾಗಿ ವಿವರಿಸಿದ್ದಾರೆ. ಅದು ಒಂದೇ 'ಏಕಂ'. ಈ ನಾಶವಾದ ಅನೇಕ ವಾದ ವಸ್ತುಗಳನ್ನು ಅದರಿಂದ ಬೇರ್ಪಡಿಸಿ ಭ್ರಮೆಯನ್ನು ಹೋಗಲಾಡಿಸಿ ಕೊಳ್ಳಬೇಕು.

ಅದೇ ಸಾಧನಚತುಷ್ಟಯದಲ್ಲಿ ಎರಡನೆಯದು 'ಫಲಭೋಗವಿರಾಗ', ಈ ಅನಿತ್ಯ ಅಸತ್ಯ ವಸ್ತುಗಳ ಭೋಗಫಲಾಕಾಂಕ್ಷೆಗಳ ಮೇಲೆ ಅಸಹ್ಯಹುಟ್ಟುವಿಕೆ. ಅದರ ಮರ್ಮ ತಿಳಿದ ಮೇಲಲ್ಲವೆ ಈ ಅಸಹ್ಯವಾದರೂ ಹುಟ್ಟುವುದು? 'Relative valuc of things' ಮುಖ್ಯಾಮುಖ್ಯ ವಿಷಯಗಳ ಮನಬಂದರೆ, ಅಮುಖ್ಯವಾದ ಫಲಭೋಗಗಳನ್ನು ತ್ಯಜಿಸಿ, ಮುಖ್ಯವಾದ 'ಶಮಾದಿಷಟ್ ಸಂಪತ್ತಿ' ಆತ್ಮ ತಿಳಿವಳಿಕೆಗೆ ಸಾಧನವಾದ ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಾನ ಸಂಪತ್ತನ್ನು ಅಭ್ಯಸಿಸಲು ತಿಳಿವು ಬರುತ್ತದೆ, ನಾಲ್ಕನೆಯ ಸಾಧನವಾದ "ಮುಮುಕ್ಷುತ್ವ" ಮೋಕ್ಷೇಚ್ಛೆ ಉದ್ಭವವಾಗುತ್ತದೆ. ಈ 'ಅಸತ್' ನಿಂದ ಪಾರಾಗಿ ಬಿಡುಗಡೆ ಹೊಂದಿ ಸದ್ವಸ್ತುವಿನಲ್ಲಿ ಸೇರಿಹೋಗಿ ಒಂದಾಗಿಬಿಡ ಬೇಕೆಂಬ ತೀವ್ರ ಮೋಕ್ಷೇಚ್ಛೆ ಬಂದರೆ ಆತ್ಮಜ್ಞಾನವಾಯಿತು. ಅಸದ್ವಸ್ತು ಎಂದಾದರೂ ಒಂದು ದಿನ ಬೀಳಲೇಬೇಕು, ಇಲ್ಲವಾಗಬೇಕು. (ಅಧ್ಯಾಯ ೨, ಶ್ಲೋಕ ೧೭) ಎಂದಿದ್ದರೂ ಉತ್ಪತ್ತಿಯಾದುದು ವಿನಾಶವಾಗಲೇಬೇಕು,

ಉತ್ಪತ್ತಿ ಅಂಕುರವಾದಾಗಲೇ ಸಾವಿನ ಅಂಕುರವೂ ಜೊತೆಗೇ ಹುಟ್ಟುತ್ತದೆ. ಕಾರಿಕಾದಲ್ಲಿ ಗೌಡಪಾದರು ಹೇಳಿರುವಂತೆ 'ಆದಾವಂತೇ ಚ ಯನ್ನಾಸ್ತಿ, ವರ್ತಮಾನೇ ಪಿ ತತ್ ತಥಾ' ಎನ್ನುವದರ ಭಾವದಂತೆ ಆದಿಗಿಂತ ಮುಂಚೆ ಅಂತ್ಯದಿಂದ ಆಚೆಗೆ ಯಾವುದಕ್ಕೆ ಇರುವಿಕೆ ಇಲ್ಲವೋ ಅದು ಈಗಲೂ ವರ್ತಮಾನದಲ್ಲಿ ಹಾಗೆಯೇ ಇರುವಿಕೆ ಇಲ್ಲದವು, ಈ ದೇಹಗಳು. (ಅಧ್ಯಾಯ ೨, ಶ್ಲೋಕ ೧೮) ಆದುದರಿಂದ ನಿತ್ಯವಾಗಿಯೂ, ನಾಶರಹಿತವಾಗಿಯೂ, ಸಮಸ್ತ ಜಗತ್ತನ್ನು ವ್ಯಾಪಿಸಿಯೂ, ಅಪ್ರಮೇಯವಾಗಿಯೂ ಇರುವ ಆತ್ಮವಸ್ತುವಿಗೆ ನಾಶವಿಲ್ಲವಾದರೂ, ಆ ಆತ್ಮನ ಎಲ್ಲಾ ಶರೀರಗಳೂ ಮುಂಚೆ ಇಲ್ಲದೆ ಆಮೇಲೆ ಇಲ್ಲವಾಗುವದರಿಂದ ಸ್ವಧರ್ಮರೂಪವಾದ ಯುದ್ಧ ಮಾಡು, ಆ ಸದ್ವಸ್ತುವನ್ನು ನಾಶಮಾಡಲು ಯಾವನೂ ಸಮರ್ಥನಲ್ಲ. 'ಅಂತವಂತ ಇಮೇ ದೇಹಾಃ, ನಿತ್ಯಸ್ಯೋಕ್ತಾಶ್ಶರೀರಿಣಃ.' ಈ ನಿತ್ಯನಾದ ಶರೀರಿಯು, ಕೊನೆಹೊಂದುವ ದೇಹಗಳು, ಎಂಬಲ್ಲಿ ಆತ್ಮನಿಗೆ ಏಕವಚನಪ್ರಯೋಗವನ್ನೂ ದೇಹಗಳು ಎನ್ನುವಲ್ಲಿ ಬಹುವಚನ ಪ್ರಯೋಗವನ್ನೂ ಲಕ್ಷಿಸಬೇಕು. ತೋರುವ ಲೆಕ್ಕವಿಲ್ಲದಷ್ಟು ಗತಿಸುವ ದೇಹಗಳಿಗೆಲ್ಲ ಒಬ್ಬನೇ ಆತ್ಮನು. ಆತ್ಮಶಬ್ದಕ್ಕೆ ಬಹುವಚನವೇ ಇಲ್ಲ. ಎಲ್ಲ ಆತ್ಮಗಳೂ ಒಂದೇ ಆತ್ಮದ ಬಿಂಬಗಳು, "ಏಕಮಾತ್ಮಾ" 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಷ್ಟು ಸೊಗಸಾದ ಪ್ರಯೋಗ.

ಆದರೂ ಈ ಹೊರಗಿನ ಕುರುಕ್ಷೇತ್ರದ ಯುದ್ಧ ಷುರುವಾಗಲು ಮೊದಲೇ ಅರ್ಜುನನ ಮನಸ್ಸಿನ ಕ್ಷೇತ್ರದಲ್ಲಿ ಒಂದು ಯುದ್ಧ ಷುರುವಾಗಿದೆ. ಮಾಡಬೇಕಾದ ಕರ್ತವ್ಯಜ್ಞಾನಕ್ಕೂ, ವ್ಯಾಮೋಹದಿಂದೊದಗಿ ಕರ್ತವ್ಯವನ್ನು ಬಿಟ್ಟುಬಿಡಬೇಕೆಂಬ ಸಂಶಯಬುದ್ಧಿಗೂ ಹೊಡೆದಾಟಹತ್ತಿ, ಅರ್ಜುನ "ಸಂಶಯಾತ್ಮಾ ವಿನಶ್ಯತಿ" ಎನ್ನುವಂತೆ ಸಂಶಯಹತನಾಗಿ ಅದರ ಪಕ್ಷ ವಹಿಸಿ ಕರ್ತವ್ಯಜ್ಞಾನವನ್ನು ತ್ಯಜಿಸಿ, ಆ ಒಳಯುದ್ಧ ಸಮಾಪ್ತಿಯಾಗಲು ಮೊದಲೇ ಈ ಯುದ್ಧಕ್ಕೆ ತೊಡಗದೆ ಧನುರ್ಬಾಣಗಳನ್ನು ಕೆಳಗಿಟ್ಟು ಶ್ರೀಕೃಷ್ಣನನ್ನು ಸಂಶಯಪರಿಹಾರಕ್ಕೆ ಉಪದೇಶ ಕೇಳಿದ್ದಾನೆ. ಕೊಲ್ಲುವುದಿಲ್ಲವೆಂದು ತಾನೆ ಅರ್ಜುನನ ನಿಶ್ಚಯ. (ಅಧ್ಯಾಯ ೨, ಶ್ಲೋಕ ೧೯)

ಈ ದೇಹ ಆತ್ಮಗಳ ತಿಳಿವಳಿಕೆಯ ವಿಷಯದಲ್ಲಿ, ಶ್ರೀ ವಿವೇಕಾನಂದರು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ. ಜನಸಾಮಾನ್ಯದವರೂ, ಇತರ ಮತಾವ

ಲಂಬಿಗಳೂ 'ನಾನು ದೇಹ, ನನಗೊಂದು ಆತ್ಮವಿದೆ' ಎಂದು ನಂಬಿದ್ದಾರೆ. ಆದರೆ ನಮ್ಮ ಆರ್ಯರು ಸನಾತನ ಧರ್ಮವೆನ್ನುವ ನಮ್ಮ ಭರತವರ್ಷದ ಮತದಲ್ಲಿ "ನಾನು ಆತ್ಮ, ನನಗೊಂದು ದೇಹವಿದೆ" ಎಂದು ಒತ್ತಿ ಪಾಠ ಹೇಳಿದ್ದಾರೆ. ಇದರಲ್ಲಿ ಮೊದಲಿನ ಸ್ಥಾನ, ಪ್ರಾಮುಖ್ಯತೆ ಯಾವುದಕ್ಕೆ ಕೊಡುತ್ತೇವೆನ್ನುವದಕ್ಕೆ ಗಮನಕೊಡಬೇಕು. ನಾನು ದೇಹವೆಂದು ನಂಬಿದವನು, ಈ ದೇಹಕ್ಕೆ ಮೊದಲನೆಯ ಸ್ಥಾನವನ್ನು ಕೊಟ್ಟು, ಅದರ ಆತ್ಮಕ್ಕೆ ಅನಂತರ ಚಿಂತೆಮಾಡುತ್ತಾನೆ. ವಾರದಲ್ಲಿ ಆರು ದಿನ ದೇಹಕ್ಕಾಗಿ ದುಡಿದು, ಉಳಿದೊಂದು ದಿನ ಆತ್ಮಚಿಂತನಕ್ಕೆಂದು ಹೋಗಿ "ಓ ದೇವರೇ, ರೊಟ್ಟಿ ಕೊಡು, ಕಾಫಿ ಕೊಡು—O God, give us our daily bread" ಎಂದು ಆತ್ಮಧ್ಯಾನದಲ್ಲಿ ಕೂಡ ದೇಹಪೋಷಣೆಗೆ ಹವಣಿಸುವ ಪ್ರಾರ್ಥನೆ ಮಾಡುತ್ತಾನೆ. ಆದರೆ 'ನಾನು ಆತ್ಮ, ನನಗೊಂದು ದೇಹವಿದೆ' ಎಂದು ನಂಬಿದಾತನು ಗಾಡಿಯನ್ನು ಮುಂದೆ ಮಾಡಿ, ಕುದುರೆ ಹಿಂದೆ ಮಾಡುವುದಿಲ್ಲ. ಕುದುರೆ ಚೈತನ್ಯವಸ್ತುವೇ ಮುಂದೆ ಪ್ರಧಾನವಾಗುತ್ತದೆ. ಅನಂತರ ನಿರ್ಜೀವ ವಸ್ತು ಗಾಡಿ. ಆಗ ಗಾಡಿ ಮುಂದಾಗಿ ಹಿಂದಿನ ಕುದುರೆಯು ಹಿನ್ನಡೆಯಲ್ಲಿ ಪ್ರಯಾಸಪಟ್ಟು ಗಾಡಿಯ ಪಥ ಸಾಗಿಸುವ ಶ್ರಮವಿಲ್ಲ. ಮುಂದಿನದು ಮುಂದಾಗಿಯೇ ಇರುತ್ತೆ. ಆತ್ಮನೆ ಮುಂದು, ಮುಖ್ಯ. ಹಾಗೆ ನಂಬಿದವನು ಆತ್ಮದ ಚಿಂತನೆಯನ್ನೇ ಮಾಡುತ್ತ ಆತ್ಮ ಸಂರಕ್ಷಣೋಪಾಯವನ್ನೇ ಮುಖ್ಯವಾಗಿಟ್ಟುಕೊಳ್ಳುತ್ತಾನೆ. ಬೆಳಗಾದರೆ ಧ್ಯಾನ, ಆರಾಧನೆ, ಆತ್ಮೋನ್ನತಿಯ ಕಾಲಕ್ಷೇಪ, ಸ್ನಾನ ಜಪತಾಪಾದಿಗಳು; ಸಾಯಂಕಾಲವಾದರೆ ಪುನಃ ಅದೇ; ಹೀಗೆ ಕಾಲವನ್ನೆಲ್ಲ ಆತ್ಮನ ಯೋಗ ಕ್ಷೇಮಕ್ಕಾಗಿಯೇ ಉಪಯೋಗಿಸುತ್ತ, ಉಳಿದ ಕಾಲದಲ್ಲಿ ದೇಹಧಾರಣೋಪಾಯದ ಪ್ರಯತ್ನಕ್ಕೆ ಕೈಹಾಕುತ್ತಾನೆ. ಈ ಎರಡು ಭಾವನೆಗಳಿಗೆ ಎಷ್ಟು ಅಂತರವಿದೆ? ಈ ಎರಡು ಭಾವನೆಗಳು ನಂಬಿದವನ ಕಾರ್ಯಾಲಂಬನೆಗಳಿಗೆ ಎಷ್ಟು ತಾರತಮ್ಯ ತರುತ್ತೆ? ಒಂದು ಅಂಗಿಗೆ ಸರಿಯಾಗಿ ಮೈಮಾಡಿಕೊಳ್ಳುವ ಭಾವನೆ—ದೇಹ ನಾನು, ನನಗೆ ಒಂದು ಆತ್ಮವಿದೆ; ಸಿದ್ಧಾಂತಿಯದು. ಆತ್ಮದ ಪವಿತ್ರತೆಗಾಗಿ ದೇಹ ಸವೆಸಿ ದುಡಿಸಿಯಾನು ಸನಾತನ ಧರ್ಮಿ.

ಹೊಟ್ಟೆ ಬಟ್ಟೆ ಮೊದಲು ಬೇಕೆಂಬ ಚಿಂತನೆಯನ್ನು ಬಿಟ್ಟು, ಶರೀರದ ಸುಖ ತುಷ್ಟಿ ಪುಷ್ಟಿಗಳಿಗೆ ಬೇಕಾದ ತಿಳಿವಳಿಕೆ ಬಿಟ್ಟು, ಆತ್ಮೋನ್ನತಿಗೆ ಏನು ತಿಳಿ

ವಳಿಕೆ ಬೇಕೆಂಬ ಚಿಂತನೆ ಹತ್ತುವದು—ಆತ್ಮ ನಾನೆಂದು ನಿರ್ಧರಿಸಿದವನಿಗೆ. ದೇಹ ಬಿದ್ದುಹೋದೊಡನೆಯೆ ನನ್ನ ಆತ್ಮ ನಾಶವಾಯಿತೆಂದು ತಿಳಿದು ಕೊಂಡಿರುವನು. ನಾನು ದೇಹವೆಂದು ನಿರ್ಧರಿಸಿರುವ "ನ ಮ್ರಿಯತೆ" ಎನ್ನುವದಕ್ಕೆ ಛಾಂದೋಗ್ಯದಲ್ಲಿ ಶ್ವೇತಕೇತುವಿಗೆ ತಂದೆಯು ಒಂಬತ್ತು ಸಾರಿ "ತತ್ತ್ವಮಸಿ" ಉಪದೇಶಮಾಡುವಾಗ, ವಿವಿಧ ಉಪಮಾನಗಳನ್ನು ಕೊಟ್ಟು 'ಅದೇ ನೀನು' ಎಂದು ವಿವರಿಸುವಾಗ ಅದರ ಒಂದು ಉಪಮಾನದಲ್ಲಿ "ಮಹಾ ವೃಕ್ಷ" ಒಂದನ್ನು ಬುಡದಲ್ಲಾಗಲಿ ಮಧ್ಯದಲ್ಲಾಗಲಿ ಕೊನೆಯಲ್ಲಾಗಲಿ ಕತ್ತರಿಸಿದರೆ ಅದು ರಸಸ್ರಾವಮಾಡಿದರೂ, ಜೀವಿಸಿಯೇ ಮೋದದಿಂದ ಇರು ವುದು; ಒಂದು ಕೊಂಬೆಯನ್ನು ಜೀವವು ಬಿಟ್ಟರೆ ಆ ಕೊಂಬೆ ಒಣಗುವುದು. ಅಂತೆಯೇ ಪ್ರಾಣ ದೇಹವನ್ನು ತ್ಯಜಿಸಿದರೆ ದೇಹ ಸಾಯುವುದು. 'ನ ಜೀವೋ ಮ್ರಿಯತೆ' ಪ್ರಾಣವು ಸಾಯುವದಿಲ್ಲ. ಈ ಪ್ರಾಣದ ಅಮೃತತ್ತ್ವವಾದ ಈ ಸರ್ವದರ ಸತ್ಯಸತ್ಯವಾದ ಆ ಪರಮತತ್ತ್ವವೇ ನೀನು. ನಿನ್ನಲ್ಲಿರುವ ಸತ್ಯ ಸತ್ಯ ತತ್ವವು ಎಂದು ಸೊಗಸಾಗಿ ಉಪದೇಶಿಸಿರುವನು. ಅದಕ್ಕೆ ವ್ಯಾವಹಾರಿಕ ವಾಗಿ ಕೂಡ 'ಪ್ರಾಣ ಹೋಯಿತು; ಪ್ರಾಣ ಹಾರಿತು; ಆತ್ಮ ಹೊರಟುಹೋದ' ಎಂಬುದಾಗಿ ಹೇಳುವರೇ ಹೊರತು; 'ಪ್ರಾಣ ಸತ್ತಿತು' ಎಂದು ಹೇಳುವದಿಲ್ಲ. ಸತ್ತುದು ದೇಹ; ಪ್ರಾಣವಲ್ಲ. ಆತ್ಮತಂತುವಾದ ಈ ಪ್ರಾಣವು, ಈ ಸದ್ವಸ್ತುವು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಆ ಪ್ರಾಣವು ಬಿಟ್ಟ ಜೀವಿಸಿದ ವಸ್ತುವು ನಿರ್ಜೀವವಾಗಿ ಅದು ಸಾಯುವುದು. ಪ್ರಾಣವಿರುವವರೆಗೇ ಅದೊಂದು ಜೀವಿ; ಬಿಟ್ಟನಂತರ ನಿರ್ಜೀವಿ, ಯಾರೂ ಮೂಸರು. ಅದಕ್ಕೆ ಉತ್ತರವಾಗಿ ಈ ಆತ್ಮನನ್ನು ಕೊಲ್ಲುವವನೂ ಇಲ್ಲ, ಈ ಆತ್ಮನು ಕೊಲ್ಲುವವನೂ ಅಲ್ಲ. ಯಾವನು ಆತ್ಮವನ್ನು ಕೊಲ್ಲುವವನು, ಮತ್ತು ಕೊಲ್ಲಲ್ಪಡತಕ್ಕವನು ಎಂಬು ದಾಗಿ ತಿಳಿದಿರುವನೋ ಆತನು ಯಥಾರ್ಥಸ್ವರೂಪವನ್ನು ತಿಳಿದವನಲ್ಲ. ಏಕೆಂದರೆ ಹುಟ್ಟಿ ಸಾಯುವ ಆತ್ಮವಾದರೆ ಕೊಲ್ಲಲ್ಪಡಬಹುದು, ಕೊಲ್ಲಬಹುದು. (ಅಧ್ಯಾಯ ೨, ಶ್ಲೋಕ ೨೦) ಈ ಆತ್ಮವು ಹಿಂದೆ ಯಾವಾಗಲೂ ಇಲ್ಲದೆ ಹೋಗಲಿಲ್ಲ, ಹೊಸದಾಗಿ ಉತ್ಪತ್ತಿ ಪಡೆದಿಲ್ಲ. ಯಾವ ಕಾರಣದಿಂದ ಅಜ ನಾಗಿಯೂ, ನಿತ್ಯನಾಗಿಯೂ, ಶಾಶ್ವತನಾಗಿಯೂ ಅನಾದಿ ಅನಂತನಾಗಿ ಇರು ವನೋ ಅದೇ ಕಾರಣದಿಂದ ಈ ಶರೀರವು ಕೊಲ್ಲಲ್ಪಟ್ಟಾಗ್ಯೂ ಆತ್ಮನು ನಾಶ

ವಾಗುವುದಿಲ್ಲ. ಈ ಶ್ಲೋಕಗಳು ನಚಿಕೇತನ ಬಲೋದ್ಭಂಥ ಪ್ರಶ್ನೆಗಳಿಗೆ ಯಮ ಧರ್ಮರಾಯನು ಉತ್ತರವಾಗಿ ಪ್ರಥಮದಲ್ಲೇ 'ಶ್ರೇಯಸ್ಸೆಂದರೇನು? ಪ್ರೇಯಸ್ಸೆಂದರೇನು?" ಇಹಸುಖವಾದ ಪ್ರೇಯಸ್ಸಿಗಿಂತಲೂ ಪರಸುಖವಾದ ಶ್ರೇಯಸ್ಸನ್ನೇ ಬಯಸಿ ಬಂದಿರುವ ನಚಿಕೇತ ಬಾಲನನ್ನು ಮೆಚ್ಚಿ, ಅವಿದ್ಯೆಯಿಂದ ಕುರುಡರು ಕುರುಡರನ್ನು ಹಿಂಬಾಲಿಸಿ ಅಂಧಕೂಪದಲ್ಲಿ ಬಿದ್ದು ಪರದಾಡದಂತೆ, ಸರಿಯಾಗಿ ಎಲ್ಲವನ್ನೂ ಅರಿತ ಬ್ರಹ್ಮದೃಷ್ಟಿವಂತನಾದ ತಾನೆ, ಎಲ್ಲಾ ವೇದಗಳು ಯಾವುದನ್ನು ಸಾರುತ್ತವೋ, ಯಾವುದನ್ನು ಇಚ್ಛಿಸಿ ಬ್ರಹ್ಮಚರ್ಯವನ್ನಾಚರಿಸುತ್ತಾರೋ ಆ "ಓಂ ಇತ್ಯೇತ್" ಎಂಬ ಪರವಾಗಿಯೂ, ಬ್ರಹ್ಮವಾಗಿಯೂ ಇರುವ ಪದವನ್ನು, ಅಕ್ಷರವಾದ ಪದವನ್ನು, ಯಾವುದನ್ನು ಅವಲಂಬಿಸಿ ತಿಳಿದು ಬ್ರಹ್ಮಸಾಕ್ಷಾತ್ಕಾರ ಪಡೆಯುತ್ತಾರೋ ಅಂತಹ ಆತ್ಮವಸ್ತು ಸ್ವರೂಪವನ್ನು ವರ್ಣಿಸುತ್ತ ಮೊದಲು "ನ ಜಾಯತೆ" (ಕ. ಅ ೧, ವಲ್ಲಿ ೨, ೧೮) ಶ್ಲೋಕವನ್ನು ಉಪದೇಶಮಾಡುತ್ತಾನೆ. ಅನಂತರ "ಹಂತಾ ಚೆ ನ ಹನ್ಯತೆ" ಎಂಬ ಶ್ಲೋಕ ೧೯ ನೇ ಶ್ಲೋಕವಾಗಿ ಉಪದೇಶವಾಗಿದೆ. ಈ ಎರಡೇ ಶ್ಲೋಕಗಳು ಗೀತೆಯಲ್ಲಿ ಉಲ್ಲೇಖವಾಗಿದ್ದರೂ ಮುಂದಿನ 'ಅಣೋರಣೀಯಾನ್ ಮಹತೋ ಮಹೀಯಾನ್ ಮಹಿಮಾನಮಾತ್ಮನಃ ಅಸಿತೋ ದೂರ ಪ್ರಜತಿ ಜ್ಞಾತುಮರ್ಹತಿ' ಮತ್ತು 'ನಾಯಮಾತ್ಮಾ ಪ್ರವಚನೇನ ಲಭ್ಯೋ ಆತ್ಮವಿವೃಣತೇತನೂಗ್ಂ ಸ್ವಾಮ್' ಎಂಬ ೨೧, ೨೨, ಮತ್ತು ೨೩ ನೇ ಶ್ಲೋಕಗಳು ಆ ಆತ್ಮವಸ್ತುವನ್ನು ವಿಸ್ತರಿಸಿ ತಿಳಿಸುವುದನ್ನು ಇಲ್ಲಿ ಗೀತೆಯಲ್ಲಿ ಬಿಟ್ಟಿದ್ದರೂ ಈ ಅರ್ಥಗರ್ಭಿತ ಉಪದೇಶಗಳು ಮುಂದೆ ಅನೇಕ ಕಡೆಗಳಲ್ಲಿ ಆತ್ಮಸ್ವರೂಪವರ್ಣನೆಯಲ್ಲಿ ಬಂದಿವೆ.

ಇವೆಲ್ಲವನ್ನೂ ಉಲ್ಲೇಖಿಸಲು ವಿಶಾಲಗ್ರಂಥ ಬೇಕಾಗುತ್ತದೆ. ಆದರೂ ಇದರ ಗೂಢಾರ್ಥವು ಬಹು ಸ್ವಾರಸ್ಯವಾಗಿದೆ. ಇದೇ ಶ್ಲೋಕಗಳು ನಚಿಕೇತನು ಯಮನನ್ನು ಅರಸಿಕೊಂಡು ಹೋಗಿ 'ನಿನ್ನನ್ನು ಮೃತ್ಯುವಿಗೆ ದಾನ ಮಾಡಿದ್ದೇನೆ' ಎಂದು ತಂದೆ ಬೇಜಾರಿನಿಂದ ಹೇಳಿದ ಉತ್ತರದ ಫಲವಾಗಿ, ಮೃತ್ಯುಸ್ವರೂಪದ ಬಾಯಿಂದಲೇ ಮೃತ್ಯುವಿಗೆ ಅತೀತವಾದ ಆತ್ಮವಸ್ತುವನ್ನು ಅಪೇಕ್ಷಿಸಿ, ಆ ಜ್ಞಾನವನ್ನು ತಿಳಿಯಲು ಕಾಂಕ್ಷಿಸಿದಾಗ ವಾಗ್ಮನಗಳಿಗೆ ಸಿಲುಕದ ಆ ಆತ್ಮವಸ್ತುವನ್ನು ಎಷ್ಟರ ಮಟ್ಟಿಗೆ ವಿವರಿಸಬಹುದೋ ಅಷ್ಟರ ಮಟ್ಟಿಗೆ

ವಿವರಿಸಿ—ಕೊನೆಯಲ್ಲಿ 'ನಾಯಮಾತ್ಮಾ ಪ್ರವಚನೇನ ಲಭ್ಯೋ' ಎಂದೂ ಹೇಳಿ, ಆತ್ಮನು ತಾನೇ ತಾನಾಗಿ ಸ್ವಂತ ಅಂತಃಕರಣದಿಂದ ಯಾರಿಗೆ ಲಭಿಸುತ್ತಾನೋ ಅವನಿಗೇ ಲಭ್ಯ" ಎಂದು ಮುಗಿಸಿಬಿಡುವನು. ಅಂತಹ ಆ ಸುಪ್ರಸಿದ್ಧ ಸನ್ನಿವೇಶದಲ್ಲಿ ಮೃತ್ಯುದೇವನಿಂದ ಉಪದೇಶವಾದ ಆ ಮಂತ್ರಗಳಲ್ಲಿ ಎರಡನ್ನು ಇಲ್ಲಿ ತೆಗೆದುಕೊಂಡು ಅರ್ಜುನನಿಗೆ ಹಿಂದಿನದು ಮುಂದೆ ಮುಂದಿನದು ಹಿಂದುಮಾಡಿ (19-19 ತ್ತಾಗಿಯೂ 18-20ತ್ತಾಗಿಯೂ ಬಂದಿವೆ) (ಅಧ್ಯಾಯ ೨ ಶ್ಲೋಕ ೨೦) ಆತ್ಮವಸ್ತುವು ನಾಶರಹಿತನಾಗಿಯೂ ನಿತ್ಯನಾಗಿಯೂ ಜನ್ಮರಹಿತನಾಗಿಯೂ ಕ್ಷಯರಹಿತನಾಗಿಯೂ ಇರುವುದಾಗಿ ಯಾವ ಪುರುಷನು ತಿಳಿದಿರುವನೋ ಅವನು ಯಾವ ಸಾಧನದಿಂದ ಯಾರನ್ನು ಯಾರಿಗೆ ಪ್ರೇರಿಸಿ ಕೊಲ್ಲುವುದು? ಯಾವನು ಕೊಲ್ಲುವುದೂ ಇಲ್ಲ, ಮತ್ತು ಕೊಲ್ಲಿಸುವುದೂ ಇಲ್ಲ ಎಂದು ೨೧ ಶ್ಲೋಕದಲ್ಲಿ ಪುನಃ ಅಜ ನಿತ್ಯ ಶಾಶ್ವತಗಳೆಂದು ಪುನರುಕ್ತಿಯಲ್ಲಿ ಸ್ವರೂಪವನ್ನು ವಿವರಿಸಿದನು. ಈ ಆತ್ಮಸ್ವರೂಪವು ಪ್ರಥಮತಃ ಸರಿಯಾಗಿ ತಕ್ಕಮಟ್ಟಿಗೆ ಮನದಟ್ಟಲು ವಿಧವಿಧದಲ್ಲಿ ವರ್ಣಿಸಬೇಕಾಗಿದೆ. ಏಕೆಂದರೆ ಇದು ವಾಕ್ಕಿಗೆ ಸಿಲುಕದು, ಮನಸ್ಸಿಗೆ ಸಿಲುಕದು, ನಾಲಿಗೆಗೆ ಸಿಲುಕಿದರೆ ಎಂಜಲಾಗುವುದೆಂದೂ, ಉಚ್ಛಿಷ್ಟವಾಗಲಾರದ ಆ ವಸ್ತುವು ವರ್ಣನಾತೀತವು. ಈ ವರ್ಣನೆಗಳೆಲ್ಲ ಆದನ್ನು ವಿವರಿಸಿಲಾರವು, ತೋರಿಸಲಾರವು. ಆದ್ದರಿಂದ 'ನೇತಿ ನೇತಿ' ಎಂದು 'ಇದಲ್ಲ, ಅದಲ್ಲ' ಎಂದೇ ಅದನ್ನು ವಿವರಿಸಿದ್ದಾರೆ. ಬೃಹದಾರಣ್ಯಕದಲ್ಲಿ ಮೂರಾವರ್ತಿ (೩, ೨, ೧೧)ರಲ್ಲಿ ನೇತಿ, ನೇತಿ, ಹೇಳಿ ಇವಕ್ಕಿಂತ ಹೆಚ್ಚಿನದಿಲ್ಲ (ಮಿಂಚಿನ ಹೊಳಪಿಗೆ ಹೋಲಿಸಿದ ಮೇಲೆ) ಅಂತಿರುವವನು ಎಂದೂ (೨, ೯, ೨೬)ರಲ್ಲಿ ನೇತಿ ನೇತಿ ಎಂದು ಹೇಳಿ ಗ್ರಾಹ್ಯವಲ್ಲವೆಂದೂ, ನಾಶರಹಿತವೆಂದೂ, ಸಂಗವಿಲ್ಲದ್ದೆಂದೂ (೩, ೪, ೨೨)ರಲ್ಲಿ ಪುನಃ ಅದೇ ಹೇಳಿರುವರು. ಯಾಜ್ಞವಲ್ಕ್ಯರು 'ಅದಲ್ಲ ಇದಲ್ಲ' ಎಂದು ವಿವರಿಸಬಲ್ಲ ಶಬ್ದಗಳೇ ಈ ಆತ್ಮವಸ್ತುವನ್ನು ವಿಂಗಡಿಸಬಲ್ಲವೇ ಹೊರತು ನಿಷೇಧವಲ್ಲದ ನಿಶ್ಚಯಿಸಬಲ್ಲ ಶಬ್ದಗಳನ್ನು ಉಪಯೋಗಿಸುವಂತೆಯೇ ಇಲ್ಲ. ಯಾವ ವಸ್ತುವನ್ನು ನಿಶ್ಚಯಿಸಬೇಕಾದರೂ ಅದನ್ನು ವಿವರಿಸುವಾಗ, ಗುಣವಿಶೇಷಣಗಳನ್ನು ಹೇಳುವಾಗ, ಅದು ಆಗಿರದ ನಿಷೇಧಗಳನ್ನು ವಿವರಿಸಬೇಕಾಗಿದೆ. ಸ್ಪಿನೋಜ಼ ಎಂಬ ಪಾಶ್ಚಾತ್ಯ ತತ್ತ್ವಜ್ಞನು ಹೇಳಿರುವಂತೆ—

'Ominis determinatio nagatio est = All determining (describing or qualifying) is a negating.'
ಅದು ಇಂತಹುದಲ್ಲ, ಅಂತಹುದಲ್ಲ ಎಂದು ನಿಷೇಧಿಸಿದರೆ ವಿವರಿಸಲಾರದ ವಸ್ತುವಿನ ಒಂದು ಊಹೆಯಾದರೂ ಬರುವುದು.

ಒಂದು ಅನ್ವೃತಶಿಲೆಯ ತುಂಡಿನಲ್ಲಿ ಯಾವ ಆಕಾರವನ್ನಾದರೂ ಕೆತ್ತ ಬಹುದು, ಯಾವ ಪ್ರತಿಮೆಯನ್ನಾದರೂ ಶಿಲ್ಪಿಸಬಹುದು. ಅದರಲ್ಲಿ ಎಲ್ಲ ಅಡಗಿದೆ. ಆದರೆ ಶಿಲ್ಪಿಯು ಅದರಲ್ಲಿ ಒಂದು ಬಸವಣ್ಣನನ್ನು ಕೆತ್ತಬೇಕಾದರೆ, ಅದರಲ್ಲಿ ಬಸವನ ಆಕಾರವನ್ನು ಮಾತ್ರ ಗ್ರಹಿಸಿ, ಬಸವನ ಆಕಾರಕ್ಕೆ ಹೊರಗಿನ ದೆಲ್ಲ ಹೆಚ್ಚಿನದೆಲ್ಲ ತನ್ನ ಮನಸ್ಸಿನಿಂದ ಆ ತುಂಡಿನಲ್ಲಿ ಅಲ್ಲಗಳೆದು ನೋಡು ತ್ತಾನೆ. ಶಿಲ್ಪಿಸುವಾಗ ಕೂಡ, ತಾನು ಗ್ರಹಿಸಿರುವ ಹೆಚ್ಚಿನ ಹೊರಗಿನ ವಸ್ತು ವನ್ನೇ ತೆಗೆದು ಹಾಕುತ್ತಾನೆ. ಅಲ್ಲದೆ ಹೆಚ್ಚಿನ ವಸ್ತುಗಳನ್ನು ತೆಗೆದುಹಾಕಿ ನಿಷೇಧಿಸಿದರಲ್ಲವೆ ಅದರಲ್ಲಿ ಬಸವನ ಆಕಾರ ಬಂದೀತೇ ಹೊರತು ಆಕಾರವನ್ನು ಅದರಲ್ಲಿ ಹೊಸತಾಗಿ ಮೂಡಿಸಲಿಲ್ಲ, ಹೆಚ್ಚಿನ ಅಥವಾ ಹೊಸದಾದ ವಸ್ತು ವನ್ನು ಸೇರಿಸಲಿಲ್ಲ. ಇದ್ದ ವಸ್ತುವಿನಲ್ಲೇ ಅಲ್ಲದ ವಸ್ತುಗಳನ್ನು ಕೂಡ ತೆಗೆದು ಹಾಕಿದುದು. ಕೆತ್ತಲು ಮೊದಲೇ ಅದರಲ್ಲಿ ಕೆತ್ತಬಹುದಾದ ಇತರ ನೂರೆಂಟು ಆಕಾರಗಳನ್ನು (ಅಶ್ವ, ಗಜ, ಗರುಡ ಇತ್ಯಾದಿ) ಆತ ಆ ಶಿಲಾತುಂಡಿನಿಂದ ನಿಷೇಧಿಸಿಕೊಂಡಿರಬೇಕು. ಆದುದರಿಂದ ನಮಗೆ ಹೊಸ ವಸ್ತುವನ್ನು ಮೂಡಿಸ ಬೇಕಾದ ಅಗತ್ಯವೇನೂ ಇಲ್ಲ. ಇರುವ ವಸ್ತುವಿನಲ್ಲೇ ನಿಷೇಧವನ್ನೆಲ್ಲ ತೆಗೆದು ಹಾಕಿದರೆ ಬೇಕಾದ ನಿಜವಸ್ತುವು ಉಳಿಯುವುದು. ಇದೇ "ನೇತಿ ನೇತಿ" ಉಪದೇಶದ ಮರ್ಮ, ತತ್ತ್ವ ತಿಳಿಸಲು ಹೂಡಿದ ಉಪಾಯ.

ಮೂಕನ ಸಿಹಿತಿಂಡಿಯ ಅನುಭವದಂತೆ, ತಾನೇ ಅನುಭವಿಸಿ ಆನಂದಿಸ ಬಲ್ಲನೇ ಹೊರತು, ವಿವರಿಸಲಾರ. ಅಂತೆಯೇ ಆ ಆತ್ಮವಸ್ತುವನ್ನು ಅನು ಭವಿಸಲು, ಸೂಚನೆ ಮಾತ್ರ ಕೊಡಬಲ್ಲವು. ಆದೇ ಕರುಣಿಸಿ ಅಂತಃಪ್ರಕಾಶ ವಾದಾಗ ಅರಿತು ಆತ್ಮಾನಂದಪಡಬೇಕೇ ಹೊರತು ಅದನ್ನು ಗುರು ಕೂಡ ವಿವರಿಸಲಾರ, ತೋರಿಸಲಾರ. ಆ ನಚಿಕೇತ ಯಮರ ಸಂಭಾಷಣೆಯು ಎಷ್ಟು ಗೂಢವಾಗಿದೆಯೋ, ಶ್ರೀಕೃಷ್ಣಾರ್ಜುನರ ಸಂಭಾಷಣೆಯಾದರೂ ಅಂತೇ ಅಲ್ಲವೆ! ಸನ್ನಿವೇಶವಾದರೂ ಎಂತಹ ಗಾಢವಾದುದು! ಪಾತ್ರಗಳಾದರೂ ಎಂತಹ

ಪವಿತ್ರವಾದವು! ಉಲ್ಲೇಖಿತ ವಸ್ತುವಾದರೂ ಎಂತಹ ಪಾವನವಾದುದು! ತಿಳಿವಳಿಕೆ ಕೊಟ್ಟು ಕಾಪಾಡಬಲ್ಲುದು. ಇಂತಹ ಪ್ರಥಮ ಪಾಠ "ಆತ್ಮವಸ್ತು ವಿವೇಕ" "ಆತ್ಮವಸ್ತುದರ್ಶನ"ವನ್ನು ಸ್ವಾಮಿ ಮುಂತೆ ಅರ್ಜುನನಿಗೆ, ನಮಗೆಲ್ಲರಿಗೂ ತನ್ಮೂಲಕ ಮಾಡಿಸುವಾಗ ಆ ಮಹದುಪನಿಷತ್ತಿನಿಂದಲೇ ಅಕ್ಷರಶಃ ಆ ಎರಡು ಮಂತ್ರಗಳನ್ನೂ ಇಲ್ಲಿ ಇಳಿಸಿರುವದರಲ್ಲಿ ಆಶ್ಚರ್ಯವೇನು?

ರೋಗವೊಂದು ಕಂಡುಹಿಡಿದ ಮೇಲೆ ಚಿಕಿತ್ಸೆ ಸುಲಭವೇ. ಭವರೋಗ ವೈದ್ಯ ಶ್ರೀಮನ್ನಾರಾಯಣನ ಅವತಾರವಾದ ಶ್ರೀಕೃಷ್ಣನು ಅರ್ಜುನನ ಆತ್ಮಾನಾತ್ಮವಸ್ತುವಿವೇಕದಲ್ಲಿ ಭಾವವನ್ನು ತಿಳಿದುಕೊಂಡು, ಮೊದಲನೆಯ ಚಿಕಿತ್ಸಾಕ್ರಮದ ದಿವ್ಯೌಷಧದ ಆತ್ಮವಸ್ತುದರ್ಶನವನ್ನು ಕೊಟ್ಟು, ತತ್ಪರಿಣಾಮವಾಗಿ ಒಳಗಿನ ಆತ್ಮಕ್ಕೆ ಕಣ್ಣು ತಿರುಗಿಸಿದನು. (ಅಧ್ಯಾಯ ೨, ಶ್ಲೋಕ ೨೨) ಹೊರಗೆ ಕಾಣುವುದು ಇದು ಧರಿಸಿದ ವಸ್ತ್ರದಂತೆ. ಆಚ್ಛಾದಿಸಿರುವುದು ಒಳವಸ್ತ್ರ ಚರ್ಮ ಮಾಂಸಾದಿಗಳ ದೇಹ. ಈ ಆಚ್ಛಾದಿತ ಉಪಾಧಿಯನ್ನು ಯಾವಾಗ ಎಂದರೆ ಆಗ ಕಳಚಿ ದೇಹಿಯು ಜೀರ್ಣ ಶರೀರಗಳನ್ನು ಬಿಟ್ಟು ನೂತನ ದೇಹಗಳನ್ನು ಸ್ವತಃ ತೆಗೆದುಕೊಂಡು ಧರಿಸುವನು. ವಸ್ತ್ರಧಾರಣೆಯೆಂದರೆ ಈ ಕಥೆ ಜ್ಞಾಪಕ ಬರುತ್ತೆ: ಒಬ್ಬ ರಾಜ ಯಾವಾಗಲೂ ಅಸುಖಿಯಾಗಿದ್ದನಂತೆ; ತಾನು ಯಾವಾಗಲೂ ಸುಖವಾಗಿ ಸಂತೋಷವಾಗಿ ಇರಲು ಉಪಾಯವೇನೆಂದು ಒಬ್ಬ ಮಹಾತ್ಮರನ್ನು ಕೇಳಿದನಂತೆ. ಅದಕ್ಕೆ ಮಹಾತ್ಮರು 'ಅತಿ ಸಂತೋಷ ಸುಖದಿಂದಿರುವ ಮನುಷ್ಯನ ಕವಚವನ್ನು ನೀನು ತೊಟ್ಟರೆ ನೀನು ಯಾವಾಗಲೂ ಸುಖವಾಗಿರುವೆ, ಸಂತೋಷವಾಗಿರುವೆ;' (ಸಂತೋಷದ ಸೋಗು ಹಾಕಿಕೊಂಡರೆ ಎಂಬ ಭಾವದಿಂದ) ಎಂದರಂತೆ. ಆಗ ರಾಜನು ಅದರ ಅಂತರಾರ್ಥ ತಿಳಿಯದೆ ಎಲ್ಲ ದಿಕ್ಕಿಗೂ ಸಂತೋಷಸಾಗರದಲ್ಲಿ ಮಗ್ನನಾದ ಸುಖಿಯನ್ನು ಹುಡುಕಿ ಆ ವ್ಯಕ್ತಿಯ ಕವಚವನ್ನು ತರಬೇಕೆಂದು ಆಜ್ಞಾಪಿಸಿದನು. ಆಗ ರಾಜಭಟರು ಹುಡುಕಿ ಹುಡುಕಿ ಸಂತೋಷಸಂತುಷ್ಟನಾದ ಮನುಷ್ಯನನ್ನು ಕಂಡುಹಿಡಿದರು. ಆದರೆ ಆ ವ್ಯಕ್ತಿಗೆ ಕವಚವೇ ಇರಲಿಲ್ಲವಂತೆ, ನಗ್ನನಾಗಿ ದೇವರು ಸೃಷ್ಟಿಸಿದಂತೆಯೇ ಬೆತ್ತಲೆ ಇದ್ದನಂತೆ. ಸಂತೋಷಸಂತುಷ್ಟನಾಗಬೇಕಾದರೆ ಅಂತೇ ಈ ಆತ್ಮಕ್ಕೆ ಕೂಡ ಈ ಆಚ್ಛಾದಿತ ವಸ್ತ್ರಕವಚವಾದ ದೇಹರೂಪ ಹೋಗಬೇಕಾಗುತ್ತೆ. ಆ ಬೆತ್ತಲೆಯ ಅವಸ್ಥೆ ಬರುವತನಕ ಹಳೇ

ಜೀರ್ಣಕವಚ ತೆಗೆದು ನೂತನ ಕವಚ ಹೊಂದಿ, ಆ ನಗ್ನನಿರ್ವಾಣಾವಸ್ಥೆಗೆ ಮಾರ್ಗಮಾಡಿಕೊಳ್ಳುತ್ತಾ ಇದಾನೆ ಅಂತರಾತ್ಮ. ಶ್ರೀರಮಣಮಹರ್ಷಿಗಳಿಗೆ ಒಂದಾವರ್ತಿ ಶೀತವಾಗಿ ನೆಗಡಿ ಕಾಣಿಸಿಕೊಂಡಾಗ ಅವರ ಶಿಷ್ಯವೃಂದ ಅವರನ್ನು ಒಂದು ಬೆಚ್ಚನೆ ಕವಚವನ್ನೂ ಅಂಗಿಯನ್ನೂ ಹಾಕಿ ಸಂರಕ್ಷಿಸಿಕೊಳ್ಳಬೇಕೆಂದು ಪ್ರಾರ್ಥಿಸಿದಾಗ, ಕೌಪೀನಧಾರಣ ವಿನಾ ಸರ್ವಥಾ ದಿಗಂಬರರಾದ ಶ್ರೀರಮಣರು ನಸುನಗುತ್ತ 'ಈ ಬಡ ಆತ್ಮನಿಗೆ ಈಗಿರುವ ಪಂಚಕೋಶಗಳೆಂಬ ಐದು ಕವಚ ಗಳಲ್ಲೇ ಉಸಿರು ಸಿಕ್ಕಿದಂತಾಗಿರುವಾಗ, ಅದಕ್ಕೆ ಇನ್ನೆರಡು ಮೇಲಂಗಿಗಳನ್ನು ತೊಡಿಸಿ ಹಿಂಸಿಸಲು ನಿನಗೆ ಮನ ಬರುತ್ತದೆಯೆ?' ಎಂದರಂತೆ. ಈ ಸ್ಥೂಲ ಶರೀರವೊಂದೇ ಅಲ್ಲ, ಮಿಕ್ಕ ಸೂಕ್ಷ್ಮಶರೀರಗಳನ್ನೂ ಕೂಡ, ಕೋಶಗಳಾಗಿ ಕವಚಗಳಾಗಿ ಆತ್ಮನನ್ನಾಚ್ಛಾದಿಸಿ ಬಂಧಿಸುವದಾಗಿ ಶ್ರೀರಮಣರು ಸೂಕ್ಷ್ಮ ನಾಗಿ ತಿಳಿಸಿದರು. ಧರಿಸಿರುವ ಕವಚವನ್ನೇ, ಬೇಕಾದಾಗ, ಬೇಡವೆಂದಾಗ ಕಿತ್ತೊಗೆಯಲು ಸಿದ್ಧನಿರುವಂತೆ ಈ ಆತ್ಮವನ್ನು ಆಚ್ಛಾದಿಸಿರುವ ದೇಹವನ್ನು ಕೂಡ ಬಿಸುಟು ಹೋಗಲು ಸದಾ ಸಿದ್ಧನಿರಬೇಕು. (ಅಧ್ಯಾಯ ೨, ಶ್ಲೋಕ ೨೩ ಮತ್ತು ೨೪.)

ಎಷ್ಟು ಸುಲಭವಾಗಿಹೋಯಿತು! ಏನಾದರೂ ಈ ಆಚ್ಛಾದನೆ ಹೊರಗಣ ವಸ್ತುವಿಗೇ. ನಿತ್ಯನೂ, ಸರ್ವವ್ಯಾಪಕನೂ, ಸ್ಥಿರನೂ ಅಚಲನೂ ಸನಾತನನೂ ಆದ ಆತ್ಮನನ್ನು ಖಡ್ಗಾದಿಗಳಿಂದಾಗಲಿ, ಅಗ್ನಿಯಿಂದಾಗಲಿ, ನೀರುವಾಯು ಗಳಿಂದಾಗಲಿ, ಅವುಗಳ ಪ್ರಯೋಗದಿಂದ ಮಾರ್ಪಾಟು ನಾಶಗಳಾಗಲು ಸಾಧ್ಯ ವಾಗಲಾರದು. ಯೋಗವಾಸಿಷ್ಠದಲ್ಲಿ ಈ ಭಾವ "ನ ತಂ ಛಿಂದಂತಿ ಶಸ್ತ್ರಾಣಿ ನ ದಹಂತಿ ಹುತಾಶನಾಃ ನ ಕ್ಲೇದಯಂತಿ ವಾರಿಣಾ ಶೋಷಯಂತಿ ನ ಮಾರುತಾಃ" ಎಂದಿದೆ. (ಅಧ್ಯಾಯ ೨, ಶ್ಲೋಕ ೨೫) ಅವುಗಳ ಬಲಪ್ರಯೋಗ ಅನಾತ್ಮವಸ್ತುಗಳ ಮೇಲೆಯೇ. ಸೂಕ್ಷ್ಮನೂ ಅವಿಷಯನೂ ವಿಕಾರರಹಿತನೂ ಆದ ಆತ್ಮನ ಮೇಲೆಂತು ಪರಿಣಾಮವಾದೀತು? ಅಂಥವನ ವಿಷಯದಲ್ಲಿ ನಾಶ ವಾದಾನೆಂದು ಶೋಕಿಸುವುದು ಯುಕ್ತವಲ್ಲ. (ಅಧ್ಯಾಯ ೨, ಶ್ಲೋಕ ೨೬, ಮತ್ತು ೨೭) ಜನಿಸಿದವನಿಗೆ ಮರಣವೂ ಮೃತನಿಗೆ ಜನನವೂ ನಿಶ್ಚಯವಾಗಿ ತಪ್ಪಿಲ್ಲವಾಗುದರಿಂದ ಈ ಆತನು ಶರೀರದೊಂದಿಗೇ ಹುಟ್ಟಿ, ಶರೀರದೊಂದಿಗೇ ನಾಶಹೊಂದುವನೆಂದು ವೃಥಾ ತಿಳಿದು ಏಕೆ ಶೋಕಿಸಬೇಕು? ಈಗ ಹಾಗೆ

ಸತ್ತರೆ ಪುನಃ ಹುಟ್ಟುತ್ತಾನೆ. ಇರುವಿಕೆಗೆ ಅಭಾವವಿಲ್ಲವೊ? (ಅಧ್ಯಾಯ ೨, ಶ್ಲೋಕ ೨೮) ಏಕೆಂದರೆ ಇರುವಿಕೆಯ, ಕಂಡುಬರುವ ಭೂತಗಳೆಲ್ಲವೂ ಅವ್ಯಕ್ತ ದೆಸೆಯಲ್ಲಿದ್ದು ಮಧ್ಯೆ ಮಾತ್ರ ವ್ಯಕ್ತದೆಸೆಗೆ ಬಂದು, ಅಂತ್ಯದಲ್ಲಿ ಅವ್ಯಕ್ತವಾಗುವುವು. ಕಾಣುವುದು ಕ್ಷಣಕಾಲ ಮಾತ್ರ. ಕಂಡು ಪುನಃ ಮಾಯವಾದರೆ ಏಕೆ ಶೋಕಿಸಬೇಕು? (ಅಧ್ಯಾಯ ೨, ಶ್ಲೋಕ ೨೯) ಅಖಂಡ ಪರಿಪೂರ್ಣದ ಈ ಆತ್ಮನನ್ನು ನೋಡಿದವರು, ಹೇಳಿದವರು, ಕೇಳಿದವರು, ತಿಳಿಯಲಾರದೆ ಆಶ್ಚರ್ಯಗೊಳ್ಳುವರು. (ಅಧ್ಯಾಯ ೨, ಶ್ಲೋಕ ೩೦) ದೇಹಗಳು ನಶಿಸುತ್ತಿದ್ದರೂ, ನಾಶ ಹೊಂದದೆ ದೇಹಿಯು ನಿತ್ಯನಾಗಿರುವಾಗ ವ್ಯಸನವೇಕೆ? 'ಶೋಚಿತುಮರ್ಹಸಿ" ಎಂದು ಎಂತು ಪುನರೋಕ್ತಿಯಿಂದ ೨೫, ೨೬, ೨೭, ೩೦ ಶ್ಲೋಕ ಸಮಾಪ್ತಿ ಮಾಡಿ ವ್ಯಸನದಿಂದ ಪಾರಾಗಲು ಅರ್ಜುನನನ್ನು ತಯಾರಿಸುತ್ತಾನೆ ಸ್ವಾಮಿ. ಆತ್ಮಾನಾತ್ಮವಸ್ತು ಚರ್ಚೆಯಾದ ಮೇಲೆ ಧರ್ಮದೃಷ್ಟಿಯಿಂದ ತನ್ನ ಕರ್ತವ್ಯವೇನೆಂದು ವಿವೇಚನೆ ಹೇಳುತ್ತಾನೆ:

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥೩೧॥
ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥೩೨॥

ಕ್ಷತ್ರಿಯನಿಗೆ ಶ್ರೇಯಸ್ಸಾಧನೆಯಾದುದು, ತಾನಾಗಿಯೇ ಪ್ರಾಪ್ತವಾಗಿ ಸ್ವರ್ಗದ್ವಾರ ತೆರೆದು ನಿಂತಿರುವುದು. ಅದರಿಂದಾಟದ ಕೀರ್ತಿದಾಯಕ

ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥
ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೆ ॥೩೪॥

ತ್ಯಾಗದಿಂದುಂಟಾದ ಅಪಕೀರ್ತಿ ಇಂಥಾ ಯುದ್ಧ ಸನ್ನಿಹಿತವಾದಾಗ ನಿನ್ನದು ಕ್ಷಾತ್ರಸ್ವಧರ್ಮವೇನು? ನಿನ್ನಂಥ ಸಂಭಾವಿತನಿಗೆ ಅಪಕೀರ್ತಿ ಮರಣಕ್ಕಿಂತ ದೊಡ್ಡದಲ್ಲವೆ?

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।
ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥೩೫॥

ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥೩೬॥

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥

ಕ್ಷಾತ್ರವೀರ, ಭಯದಿಂದ ಯುದ್ಧವಿಮುಖನಾದನೆಂದು ನಿನ್ನ ಶತ್ರುಗಳಲ್ಲಿ ಸಮಾನರು ಲಘುತ್ವದಿಂದ ನಿನ್ನ ಸಾಮರ್ಥ್ಯವನ್ನು ನಿಂದಿಸಿದರೆ ಎಂತಹ ದುಃಖ! ಯಾವ ವಿಷಯ ಮುಖ್ಯ ಆಳಕುತ್ತೊ ಆ ಕ್ಷತ್ರಿಯ ಸ್ವಸಾಮರ್ಥ್ಯ ಗೌರವವನ್ನು ಎಂತು ಸ್ವಾಮಿ ಉಪಯೋಗಿಸಿಕೊಂಡು, ಎಲ್ಲಿ ಚುಚ್ಚಿದರೆ ಎಚ್ಚರ ವಾಗುತ್ತದೆಯೋ, ಹೆಚ್ಚು ತಗಲುತ್ತೆಯೋ, ಸರಿಯಾದ ಪರಿಣಾಮಕಾರಿಯಾಗು ತ್ತೆಯೋ ಅಲ್ಲೆ ಚುಚ್ಚಿ, ಪುನಃ "ಉತ್ತಿಷ್ಠ ಕೌಂತೇಯ" ಎಂದು ದೃಢ ಮನಸ್ಸಿ ನಿಂದ ಯುದ್ಧವನ್ನು ನಿಶ್ಚಯಿಸಿ, 'ಸತ್ತರೆ ಸ್ವರ್ಗ, ಗೆದ್ದರೆ ಗಾದಿ' ಎಂದು ವೀರ ರಸದಿಂದ ಎಬ್ಬಿಸಿದನು.

ಇದರ ಪರಿಣಾಮವೆಂತಾಯಿತೋ ತಿಳಿಯೆವು. ಸ್ವಾಮಿಯೇನೋ ಶ್ರುತಿ ಬದಲಾಯಿಸಿದ. ಬಿಟ್ಟಿದ್ದ ತತ್ತ್ವದರ್ಶನಮಾರ್ಗಕ್ಕೆ ಪುನಃ ಬಂದ, ಯುದ್ಧ ದಲ್ಲಿ ಪಾಪಕಾರ್ಯವೆಸಗುವೆನೆಂದು ಸಂಶಯಾಚ್ಛಾದಿತನಾದ ಅರ್ಜುನನಿಗೆ ಸಮಾ ಧಾನ ಹೇಳುವ ನಿಧಾನ ಮಾತುಗಳನ್ನು ಹೇಳಲೆಸಗಿದನು.

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥

ಸುಖದುಃಖ ಲಾಭಾಲಾಭ ಜಯಾಜಯ ದ್ವಂದ್ವಗಳಲ್ಲಿ ಸಮತೂಕದಿಂದ ವರ್ತಿಸಿದಲ್ಲಿ ಪಾಪವಿಲ್ಲ.

ಏಷಾ ತೇಽಭಿಹಿತಾಸ್ಸಾಂಖ್ಯೆ ಬುದ್ಧಿರ್ಯೋಗೇ ತ್ವಿಮಾಂ ಶೃಣು ।
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥೩೯॥

ಇದುವರೆಗೂ ಆತ್ಮಸ್ವರೂಪವಾದ ಸಾಂಖ್ಯ, ಬುದ್ಧಿಯೋಗ ಹೇಳಿದೆ. ಕರ್ಮ ಪ್ರತಿಬಂಧಕವನ್ನು, ನಿಷ್ಕಾಮಕರ್ಮಯೋಗವನ್ನು ಹೇಳುವೆನು ಕೇಳು:

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥

ನಿಷ್ಕಾಮಾಚರಣೆಗೆ ಆರಂಭಿಸಿದುದರಿಂದ ವಿಘ್ನನಾಶವಾಗಲಿ, ಆರಂಭಿಸದೆ ಇರು

ವುದರಿಂದ ದೋಷವಾಗಲಿ ಇಲ್ಲ. ಮಾಡಿದ ಧರ್ಮವು ಸ್ವಲ್ಪವಾದರೂ ಮಹತ್ತಾದ ಭಯದಿಂದ ಕಾಪಾಡುತ್ತದೆ. ಈ "ಸ್ವಲ್ಪಮಪ್ಯಸ್ಯ ಧರ್ಮಸ್ಯ" ಎಂತು ನಿಶ್ಶಕ್ತರಿಗೂ, ಅಲ್ಪಶಕ್ತರಿಗೂ ಕೈಲಾದಷ್ಟು, ಕಿಂಚಿತ್ ಧರ್ಮವನ್ನೆಸಗಲು ಉತ್ತೇಜನ ಕೊಡುತ್ತದೆ! ಮಹತ್ತಾದ ಭಯವನ್ನೇ ಎದುರಿಸಿ ನಿಲ್ಲಿಸುತ್ತದೆ. ತುಳಸೀದಳದಿಂದ ಶ್ರೀಕೃಷ್ಣನನ್ನು ತುಲನಮಾಡಿದರಂತೆ. ಸಮವಾಯಿತು ತ್ರಾಸು. ಆ ಧರ್ಮ ಸ್ವಲ್ಪವಾದರೇನು? 'ಅಲ್ಪ'ವೆಂದು ಹೇಳಿಲ್ಲ. 'ಅಲ್ಪ'ವೆಂದಿದ್ದರೆ ಅದರ ತುಚ್ಛತೆ ತೋರುತ್ತಿತ್ತು. 'ಅಲ್ಪನಿಗೆ ಐಶ್ವರ್ಯ ಬಂದರೆ' ಎಂಬ ಗಾದೆಯಲ್ಲಿನ ಅರ್ಥದಂತೆ. 'ಸ್ವಲ್ಪ'ವೆಂದರೆ ಪ್ರಮಾಣದಲ್ಲಿ ಕೊಂಚವೇ ಹೊರತು ಯೋಗ್ಯತೆಯಲ್ಲಿ ಕೊಂಚವಲ್ಲ. ಧರ್ಮವೆಂದಿಗೂ ಸ್ವಲ್ಪವಾದರೂ ಅಲ್ಪವಾಗಲಾರದು. ಸ್ವಲ್ಪಮಪಿ ಆದರೂ ಘನವೇ. ಗುಣ ಮುಖ್ಯವೇ ಹೊರತು ಪರಿಮಿತಿ ಮುಖ್ಯವಲ್ಲ (Quality not quantity). ಒಂದು ಅಗುಳನ್ನಲ್ಲವೆ ಹಿಸುಕಿ ಅನ್ನವಾಯಿತೆಂದು ಅರಿಯುವುದು? ಸ್ವಲ್ಪಮಪ್ಯಸ್ಯ ಧರ್ಮವನ್ನು ಕಂಡೇ ಧರ್ಮಾತ್ಮನ ಲಕ್ಷಣ ಗ್ರಹಿಸಿ, ಎಂಥ ಭಯವನ್ನಾದರೂ ಕಾಪಾಡಬಲ್ಲದು. ಕೊಂಚ ನೋಡುತ್ತಾನೆ, ನಾವು 'ಯಾಕೋ ಈ ಆಸಾಮಿ ತಂಟೆ ನಮಗೆ ಬೇಡಾಪ್ಪ' ಅಂತ ದೂರ ಸರಿಯುವಂತೆ, ಸ್ವಲ್ಪಮಪ್ಯಸ್ಯ ಧರ್ಮವನ್ನು ಕಂಡೊಡನೆ 'ಮಹತೋಭಯಾತ್' ದೂರ ಸರಿವುವು. ಎಂತಹ ಅಭಯವಿದು ಧರ್ಮಾಚರಣೆಗೆ! ಹೆಚ್ಚೇ ಮಾಡಬೇಕೆಂದು ನಿರ್ಬಂಧಿಸಿಲ್ಲ, ಸ್ವಾಮಿ. ಯಾರ ಕೈಲಿ ಎಷ್ಟೆಷ್ಟಾಗುತ್ತೆಯೋ ಎಲ್ಲರಿಗೂ ಅವಕಾಶವಿದೆಯೆಂದು ಆದಷ್ಟು ಆಚರಿಸಲಿ, ಧರ್ಮ ಪರಿಣಾಮ ಮಹತ್ತುಂಟು. ಸ್ವಲ್ಪ ಧರ್ಮ, ಅಲ್ಪವಲ್ಲ. ಎಷ್ಟು ಬೇಕರಿ ಧರ್ಮ? ಮುಳುಗುತ್ತಿದ್ದವನಿಗೆ ಕೊಂಚ ಆಸರೆ, ದುಃಖದಿಂದ ಅಳುತ್ತಿದ್ದವರಿಗೆ ಒಂದು ಅಕ್ಕರೆ ಮಾತು. ಹೆದರಿ ಕಂಪಿಸುತ್ತಿದ್ದವನಿಗೊಂದು ಕನಿಕರದ ನೋಟ, ದರಿದ್ರ ದಲಿತರಿಗೊಂದು ಸಹಾನುಭೂತಿ, ಆರ್ತರಿಗೊಂದು ಮನದಲ್ಲಿ ಪ್ರಾರ್ಥನೆ, ಕಂಪಿತ ಹೃದಯಕ್ಕೆ ಸಹಾಯಕ. ನಮ್ಮ ಹೃದಯದ ಅನುಕಂಪವಿದ್ದರೆ ಸಾಕರಿ; ಅದರ ಫಲ, ಪರಿಣಾಮ ಎಷ್ಟು ಹೆಚ್ಚಿನದು. ಇದು ಕಾಸಿನಷ್ಟೆ ಕಜ್ಜಾಯವೆಂದು ಸಂತೇವ್ಯಾಪಾರವಲ್ಲರಿ. ಒಂದು ತೊಟ್ಟು ನೀರು ಹಾಕಿ, ಉಕ್ಕಿ ಸುರಿದುಹೋಗುವ ಹಾಲನ್ನು ಶಮನ ಮಾಡುವಂತೆ ಸ್ವಲ್ಪಮಪಿ ಧರ್ಮ. ಉಕ್ಕಿಬರುತ್ತಿರುವ ಆಸೆಗಳನ್ನೂ ಫಲಭೋಗ

ಪ್ರೇಚ್ಛೆಗಳನ್ನೂ ಈ ಸ್ವಲ್ಪಧರ್ಮವು ಶಮನ ಮಾಡುವುದು. ಉಕ್ಕಿ ವೃಥಾ ಚೆಲ್ಲಿ ಹರಿದುಹೋಗಬಹುದಾದ ಇಂದ್ರಿಯದ್ವಾರಾ ಆತ್ಮಶಕ್ತಿಯನ್ನು "ಸ್ವಲ್ಪ ಧರ್ಮ" ಬುದ್ಧಿ ದಮನ ಮಾಡುವದು. ಧರ್ಮದ ಮರ್ಮವೇ ಇದು. ಅದರ ಪರಿಣಾಮ ಅಂತರಾತ್ಮದ ಮೇಲೆಷ್ಟೋ ಬಹಿಃಪ್ರಪಂಚದ ಮೇಲೂ, ಧರ್ಮ ದಲ್ಲೆಸಗಲು ಪ್ರಯತ್ನಿಸಿದರೆ ಸಾಕು. ಅದು ಪರಿಶುದ್ಧವಾಗುತ್ತೆ, ಬಹಿರ್ ಪ್ರಕಾಶವಾಗುತ್ತೆ.

ಇದು ಪುಣ್ಯವು ಪಾಪವನ್ನು ಎದುರಿಸುವ ಪ್ರಸಂಗವಲ್ಲ, ಧರ್ಮವು ಭಯ ವನ್ನುಎದುರಿಸುವುದು. ಪಾಪಕ್ಕಿಂತ ಪಾಪಿಭಯವು ಹೆಚ್ಚಿನದು. ಅಧರ್ಮವನ್ನೆ ಸಗಿದಾಗ ಇರುವ ಧೈರ್ಯ ಹೋಗಿ ಅನಂತರ ಭೀತಿಯು, ಅದರ ಫಲವೆಂತು ಕಾಡು ವುದೋ ಎನ್ನುವ ಭಯವು ಉದಯಿಸುತ್ತದೆ. ಒಂದು ಕೆಟ್ಟ ಕೆಲಸವನ್ನು ಮಾಡುವಾಗ ಅದರ ವಿಷಯದಲ್ಲಿ ನಾವು ಹೆಚ್ಚು ನಾಚುವೆವು, ಅದರ ಫಲ ಕ್ಕಾಗಿ ಅನಂತರ ಹೆಚ್ಚು ಭಯಪಡುವೆವು. ಈ ಧರ್ಮವಾದರೋ ಸ್ವಲ್ಪ ವಾದರೂ ಅಣುಶಕ್ತಿಯಂತೆ. ಶಕ್ತಿ ರೂಪತಾಳಿದಾಗ ಮಹತ್ತಾಗಿ ಎಂಥ ಭಯ ವನ್ನೂ ಎದುರಿಸುವುದು. ಆತ್ಮಬೋಧೋಪನಿಷತ್ತಿನಲ್ಲಿ ಹೇಳಿರುವಂತೆ—

> ಸ್ವಲ್ಪಾಪಿ ದೀಪಕಣಿಕಾ, ಬಹುಳಂ ನಾಶಯೇತ್ತಮಃ ।
> ಸ್ವಲ್ಪಾಪಿ ಬೋಧೋ ಪ್ಯಜ್ಞಾನಂ ಬಹುಳಂ ನಾಶಯೇತ್ತಥಾ ॥

ಎನ್ನುವಂತೆಯೇ ಈ "ಸ್ವಲ್ಪಮಪಿ ಧರ್ಮಸ್ಯ" ಅದರ ಶಕ್ತಿ ಅದರ ಪರಿಮಿತಿಯ ಲ್ಲಲ್ಲ, ಅದರ ಗುಣದಲ್ಲಿ. ಧರ್ಮವು ಸ್ವಲ್ಪವಾಗಿ ಎಸಗಲು ಪ್ರಯತ್ನಿಸಬೇಕಾ ದರೂ, ಮನೋವೃತ್ತಿಯೇ ಆ ಧರ್ಮದಿಂದ ಬದಲಾಗಬೇಕು. ಆ ಧರ್ಮದ ಹಿಂದಿನ ಮನೋವೃತ್ತಿಯ ಬದಲಾವಣೆಯೇ ಈ ಮಹತ್‌ಪರಿಣಾಮಗಳಿಗೆ ಎಡೆ ಕೊಡುವುದು. ಧರ್ಮಕಾರ್ಯ ಸ್ವಲ್ಪವಾದರೂ ಮನಸ್ಸಿನ ಮೇಲೆ ಸತ್ ಪರಿಣಾಮ ಅಧಿಕ. ವೃದ್ಧಿಯ ಕಡೆ ಅವಕಾಶವೂ ಆಯ್ತು. ಈ ಧರ್ಮ ಬುದ್ಧಿಯು ಈಶ್ವರಾರ್ಪಣವಾಗಿ ಒಂದೇ ಆಗಿ ಮುಂದಿನ ವ್ಯವಸಾಯಕ್ಕೆ ಅನು ವಾಗುವುದು.

> ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।
> ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥

ಅವ್ಯವಸಾಯಿಯ ಧರ್ಮಬುದ್ಧಿಗೆ ಮನವೆಳೆಯುವ ಏಕಾಗ್ರತೆ ಇಲ್ಲದವನ

ಬುದ್ಧಿಯು ಅನೇಕ ಶಾಖೆಗಳಾಗಿ ಕೊನೆಯಿಲ್ಲದೆ ಪರಿಣಮಿಸುವುದು. ಇದು ಕೃಷಿ ಇಲ್ಲದೆ ಬಹುಶಾಖೆಯಾಗಿ ಬೆಳೆಯುವ ವೃಕ್ಷದಂತೆ. ಧರ್ಮೈಕಬುದ್ಧಿ ಯಾದರೂ ವ್ಯವಸಾಯಾತ್ಮಿಕನಾಗಬೇಕು. ಕೃಷಿ ಬೇಕು, ಪೋಷಿಸಬೇಕು, ಯೋಚಿಸಬೇಕು, ನಿರ್ಧರಿಸಬೇಕು.

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥
ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥

ಇಲ್ಲವಾದರೆ ಕಾಮಾತ್ಮರು ಭೋಗೈಶ್ವರ್ಯ ಪ್ರಾಪ್ತಿಯೇ ಕರ್ಮಫಲವಾಗಿ ಸ್ವರ್ಗ ಫಲವನ್ನೇ ಪುರುಷಾರ್ಥವೆಂದು ಭಾವಿಸಿ, ಆ ಕರ್ಮಫಲವುಳ್ಳ ಕರ್ಮವಿಶೇಷ ವನ್ನೇ ಬಹಳವಾಗಿ ಪ್ರಶಂಸಿಸಿ, ಆಕಾಶಕುಸುಮದಂತೆ ಅಸ್ತಿತ್ವವೇ ಇಲ್ಲದ ರಮಣೀಯವಾದ ವೇದರತವಾದ ವಾಕ್ಯವನ್ನೇ ಹೇಳುವರು. ತಮ್ಮ ಮಾಗಿನ ನೇರಕ್ಕೇ ಮಾತು, ತಾವು ಮಾಡುವ ಕಾರ್ಯಕ್ಕೇ ಸಿದ್ಧಾಂತ, ತಾವು ಹೇಳುವು ದಕ್ಕೇ ಶಾಸ್ತ್ರಬಲ.

ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥

ಅಂಥ ಭೋಗೈಶ್ವರ್ಯದಲ್ಲಿ ಪ್ರಸಕ್ತಿಯಲ್ಲಿಯೇ ಅಂತಃಕರಣವುಳ್ಳವರ ಹೃದಯ ದಲ್ಲಿ, ಕೃಷಿಕರ್ತವಿನ ಬುದ್ಧಿ, ಈಶ್ವರಾಧೀನ ಈಶ್ವರಾರ್ಪಣ ಬುದ್ಧಿ ಹುಟ್ಟುವು ದಿಲ್ಲ.

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥

ಈ ತ್ರೈಗುಣ್ಯವಿಷಯಗಳನ್ನು ತಿಳಿದು ನಿಸ್ತ್ರೈಗುಣ್ಯನಾಗು. ಅದೆಂತೆಂದರೆ ದ್ವಂದ್ವಗಳನ್ನು ಬಿಡು, ನಿತ್ಯಸತ್ವಗಳಲ್ಲಿ ಸ್ಥಾಪಿತನಾಗು, ಸ್ವಯಂ ಆತ್ಮನ ಯೋಗಕ್ಷೇಮವನ್ನು ಬಿಟ್ಟು ಸರ್ವಾತ್ಮಾರ್ಪಣ ಮಾಡು. ಸರ್ವಾತ್ಮನೇ ದ್ವಂದ್ವಾತೀತನು, ನಿತ್ಯಸತ್ವದಲ್ಲಿ ಸ್ಥಿರವಾಗಿ ನಿಂತವನು.

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೪೬॥

ಸಣ್ಣ ಪುಟ್ಟ ನೀರಿನ ಸ್ಥಾನಗಳಲ್ಲಾಗುವ ಪ್ರಯೋಜನಗಳೆಲ್ಲವೂ ಮಹಾ ಮಡುವಿನಲ್ಲಿ ಅಡಗಿರುವಂತೆ ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಅಲ್ಪಸ್ವಲ್ಪ ಕರ್ಮಫಲಗಳೆಲ್ಲವೂ ಬ್ರಹ್ಮಜ್ಞಾನಿಯಲ್ಲಿ (ಬ್ರಾಹ್ಮಣನಲ್ಲಿ) ಅಡಗಿರುವುವು.

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥೪೭॥

ಫಲಾಪೇಕ್ಷೆಯೇ ಇಲ್ಲದಿರಬೇಕಾಗಿರುವುದರಿಂದ ಇನ್ನು ಕರ್ಮದಲ್ಲಿ ಆಸಕ್ತಿಯೇಕೆ? ನಿನಗೆ ಕರ್ಮದಲ್ಲಿ ಅಧಿಕಾರವೇ ಹೊರತು, ಕರ್ಮಫಲದಲ್ಲಲ್ಲ. ಫಲವು ಕೇವಲ ಮನುಷ್ಯನ ಕೈಲಿಲ್ಲ. ಅನೇಕ ಬಾಹ್ಯ ಪರಿಸ್ಥಿತಿಗಳನ್ನು ಅವಲಂಬಿಸಿದೆ, ಕರ್ಮದ ವಿಷಯದಲ್ಲಿದ್ದ ಅಧಿಕಾರ ಫಲದ ವಿಷಯದಲ್ಲಿದ್ದರೂ ಪೂರ್ಣವಿರಲಿಕ್ಕಿಲ್ಲ. "ಮಾ ಫಲೇಷು" ಎಂದಿದೆ, "ನ ಫಲೇಷು" ಎಂದಲ್ಲ. ನಿನಗೆ ಕರ್ಮದಲ್ಲಿ ಅಧಿಕಾರವಿದ್ದಂತೆ ಫಲದಲ್ಲಿದ್ದರೂ ಕರ್ಮಾಧಿಕಾರವನ್ನು ಮಾತ್ರ ಇಟ್ಟುಕೊ. ಫಲದ ಅಧಿಕಾರವನ್ನು ಬಿಟ್ಟುಬಿಡು. ಹೇಗೆ? ನಾನು ಅಕರ್ತೃವೆಂದು ತತ್ತ್ವಜ್ಞಾನದಿಂದ ತಿಳಿದು, ಅನುಭವಿಸಬೇಕಾದ ಫಲವನ್ನು ನಿರಾಕರಿಸು. ನಿನ್ನ ಭೂತಾಯಿಯ ಮೇಲ್ಪಂಗ್ತಿಯನ್ನು ಅನುಸರಿಸು. ಅನೇಕ ಫಲಗಳು ಪ್ರಕೃತಿಕರ್ಮದಿಂದ ಭೂಮಿಯಲ್ಲಿ ಬಿಡುವುವು. ಆದರೆ ಆ ಭೂತಾಯಿಯು ಅವನ್ನು ತಿನ್ನುವಳೊ? ಫಲಾಪೇಕ್ಷೆಯೇ ಇಲ್ಲ. ಎಲ್ಲಾ ಜೀವಿಗಳಿಗಾಗಿ, ಹಕ್ಕಿ, ಪಕ್ಷಿ, ಮೃಗ, ಮನುಷ್ಯಾದಿಗಳಿಗಾಗಿ ಫಲ. ಫಲಾಸಕ್ತಿ ಇಲ್ಲವೆಂದು ಕರ್ಮಾಸಕ್ತಿ ಇರದಿರಕೂಡದು. ಫಲವನ್ನು ಮಾತ್ರ ವಿಶ್ವಾತ್ಮನಿಗೆ ಒಪ್ಪಿಸಿಬಿಟ್ಟರೆ ಕರ್ಮದ ಜವಾಬ್ದಾರಿ ಮುಗಿಯಿತು, ಮನದಲ್ಲಿ ಫಲದ ವಿಷಯದ ಚಿಂತೆ, ಎಂತು ನನ್ನ ಕರ್ಮ ಫಲಿಸುತ್ತೆ ಎಂಬ ನಿರೀಕ್ಷಣೆ ತಪ್ಪಿತು. ಮನಸ್ಸು, ಕರ್ಮವೆಸಗಿದೆ, ಶಾಂತಿಯಾಯ್ತು, ಮಾಡಿದುದು ಸರಿಯೆ ತಪ್ಪೆ ಎನ್ನುವ ಯೋಚನೆ ಕೂಡ ಬಾರದು.

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥

ಆತ್ಮಸಂಗ ವಿಧಿಸಿ ಕಾರ್ಯದ ಅವಶ್ಯಕತೆಯ ನಾಟಕ ಕೂಡ ಮುಗಿಯಿತು. ಕರ್ಮಸಂಗ ತಪ್ಪಿತು. ಸಿದ್ಧಿಯುಂಟಾದರೂ, ಆಗದೆ ಹೋದರೂ ಸಮಭಾವನೆಯಿಂದ ಕರ್ತವ್ಯ ಮಾಡಿದುದಾಯಿತು. ಈ ಸಮತ್ವವೇ ಯೋಗ

ವೆಂದು ಹೇಳಲ್ಪಡುತ್ತದೆ. ಈ ಸಮತ್ವವು ಬೌದ್ಧಧರ್ಮದಲ್ಲಿ ಬಹಳ ಪ್ರಾಶಸ್ತ್ಯ ಹೊಂದಿದೆ. ಅತಿ ಇಲ್ಲ, ಮಿತಿಯಿಲ್ಲ. ಇದಕ್ಕೆ ಮಧ್ಯಮ ಮಾರ್ಗವೆನ್ನುತ್ತಾರೆ. ಸರ್ವ ಕರ್ಮಗಳಲ್ಲೂ ಈ ಸಮತ್ವವನ್ನು ಸಾಧಿಸಬೇಕು. ಈ ಸಮತ್ವದಿಂದಲೇ "ತೈಲಧಾರೆಯಂತೆ ಮನಸ್ಸು ಇಡು ಹರಿಯಲ್ಲಿ"ಗೆ ಅವಕಾಶವಾಗುತ್ತೆ. ಸಿದ್ಧಿಯಾದಾಗ ಸ್ಫೂರ್ತಿ ಜಾಸ್ತಿಯಾಗಬಾರದು; ಅಸಿದ್ಧಿಯಾದಾಗ ಮನ ಬಿಡಬಾರದು, ತಕ್ಕಡಿಯ ತ್ರಾಸುಗಳು ಸಮತೂಕವಾಗಿರುವಂತೆ ಇರಬೇಕು.

ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥೪೯॥

ನಿಷ್ಕಾಮಕರ್ಮಕ್ಕಿಂತ ಕಾಮ್ಯಕರ್ಮವು ನಿಕೃಷ್ಟವಾದುದು. ಆದುದರಿಂದಲೇ ನಿಷ್ಕಾಮಕರ್ಮದಲ್ಲಿ ಆಸಕ್ತನಾಗು. ದೊಡ್ಡ ಕೆಲಸಗಳನ್ನು ಮಾಡುವುದು ಚಿಕ್ಕ ಕೆಲಸ ಮಾಡುವುದಕ್ಕಿಂತ ಸುಲಭ. ಕರ್ಮವು ನಿಷ್ಕಾಮವಾದೊಡನೆ ಮಹತ್ತಾಗುತ್ತದೆ, ಕಾಮ್ಯಕರ್ಮ ಅಲ್ಪವಾಗುತ್ತದೆ. ಪ್ರಯೋಜನವನ್ನು ಅಪೇಕ್ಷಿಸಿ ಕೆಲಸಮಾಡುವವರು ನಿಕೃಷ್ಟ (ಕೃಪಣ)ರು.

"ಯಸ್ತ ಆಶಿಷ ಆಶಾಸ್ತೆ, ನ ಸಭೃತ್ಯಃ ಸವೈವಾಣಿಕ್"

ಎಂದು ಭಾಗವತದಲ್ಲಿ ಹೇಳಿರುವಂತೆ, ಒಂದು ಫಲಾಪೇಕ್ಷೆಯಿಂದ, ಒಂದು ವರ ಪಡೆಯುವದಕ್ಕಾಗಿ ಯಾವನು ಭಗವಂತನನ್ನು ಧ್ಯಾನಿಸುತ್ತಾನೋ ಅವನು ಭಕ್ತಸೇವಕನಲ್ಲ. ಅವನು ಕೋಮಟಿ, ವ್ಯಾಪಾರಕ್ಕಾಗಿ ಭಕ್ತಿ ಮಾಡುವವನು. ಕರ್ಮದಲ್ಲೂ ಆ ಭಾವನೆ ಬರಬೇಕು. ಬರಿಯ ಫಲಕ್ಕೆ ಕೆಲಸ ಮಾಡುವ ಕಾಮಿಕರ್ಮಿಯು ಕೃಪಣ. ಅವನು 'ಇಷ್ಟು ಮಾಡಿದರೆ ಎಷ್ಟು ಲಾಭ ಬರುತ್ತೆ? ಏನು ಫಲ?' ಎಂದು ಲೆಕ್ಕಾಚಾರ ಹಾಕಿಕೊಂಡು ಮಾಡುವನು. ಫಲವನ್ನೇ ಕಾರಣವಾಗಿ ಇಟ್ಟುಕೊಂಡು ಮಾಡುವವನು ಸರಿಯಾಗಿ ಕೆಲಸವನ್ನು ಮಾಡಲಾರ. ವರವನ್ನೆ ಉದ್ದೇಶಿಸಿರುವವನು ಸರಿಯಾಗಿ ಭಕ್ತಿಯನ್ನಾಗಲಿ, ತಪವನ್ನಾಗಲಿ ಆಚರಿಸಲಾರ. ಅವನ ದೃಷ್ಟಿಯು ಫಲದ ಮೇಲಿರುತ್ತೆ, ತಪದ ಮೇಲಲ್ಲ. ವಿಚಾರಿಸಿ ನೋಡಿದರೆ ನಿಷ್ಕಾಮಕರ್ಮವೇ ಒಂದು ಮಹಾಫಲ. "ಮರಕ್ಕೆ ಹಣ್ಣುಂಟು. ಹಣ್ಣಿಗೆ ಏನು ಫಲ?" ಎಂದು ಕೇಳಿದ್ದಾರೆ ಜ್ಞಾನದೇವರು. ದೇಹವೃಕ್ಷಕ್ಕೆ ನಿಷ್ಕಾಮಕರ್ಮವೇ ಫಲ. ಹುಡುಗರು ಆನಂದಕ್ಕಾಗಿ ಆಟವಾಡುವಂತೆ ವ್ಯಾಯಾಮವೇನೋ ಆಟದ ಸಹಜ ಫಲವಾಗಿ ದೊರಕುತ್ತೆ;

ಆದರೆ ಅವರಿಗೆ ಫಲದ ಮೇಲೆ ಗಮನವಿಲ್ಲ. ಆನಂದವೆಲ್ಲಾ ಆಟದಲ್ಲೇ, ಆ ವ್ಯಾಯಾಮ ಫಲದಲ್ಲಲ್ಲ.

ಗಂಗಾಜಲದಲ್ಲಿ ಅಣ್ಣತಮ್ಮಂದಿರಿಬ್ಬರು ಸ್ನಾನಮಾಡಿದರು. ಅಣ್ಣ ಓದಿದ ವಿಜ್ಞಾನಿ. ಜಲವು ಆಮ್ಲಜನಕ, ಜಲಜನಕಗಳ ಸಂಯೋಗರಾಶಿ ಎಂಬ ಭಾವನೆಯಿಂದ ಸ್ನಾನಮಾಡಿದ, ಎಮ್ಮೆ ಮೈ ತೊಳೆದಂತೆ. ಮೈ ಶುದ್ಧಿಯ ಫಲ ವೇನೋ ಲಭಿಸಿತು. ತಮ್ಮ ಏನೂ ತಿಳಿಯದವ, ಪವಿತ್ರ ಗಂಗಾಮಾತೆ ಯೆಂದು ಭಾವಿಸಿ ಭಕ್ತಿಶ್ರದ್ಧೆಗಳಿಂದ ಮಂತ್ರಪೂರ್ವಕ ಸ್ನಾನಮಾಡಿದ. ಅವ ನಿಗೆ ಮೈ ಶುದ್ಧಿಯ ಚಿಲ್ಲರೆ ಫಲದೊಂದಿಗೆ ಚಿತ್ತಶುದ್ಧಿಯ ಅಮೂಲ್ಯಫಲವೂ ದೊರಕಿತು. ಹೈಡ್ರೋಜನ್‌ವಾಲಸಿಗೆ ಎಲ್ಲಿ ಬಂತು ಈ ಪರಮ ಅಂತಃಶುದ್ಧಿ? ಉಪಾಸನೆಗಾಗಿ ಸೂರ್ಯನಮಸ್ಕಾರ ಹಾಕಿದವನಿಗೆ ಆರೋಗ್ಯದ ಜೊತೆಗೆ, ಪ್ರತಿಭೆಯೂ, ಸ್ಫೂರ್ತಿಯೂ ಸೂರ್ಯ ದೇವನೆಂಬ ಭಾವನೆಯಿಂದಲೇ ದೊರಕಿತು. ಬರೀ ವ್ಯಾಯಾಮವಾದಿಗೆ ಮಾಂಸಖಂಡದ ಬೆಳವಣಿಗೆಯ ಮೇಲೆ ಜ್ಞಾನ. ಬೈಸೆಪ್ಸ್ ನೋಡಿಕೊಳ್ಳುತ್ತಿರುತ್ತಾನೆ. ಇದು ಕರ್ಮದ ಕೌಶಲವಲ್ಲ. ನಿಷ್ಕಾಮ ಕರ್ಮ ಮಾಡುವವನು ಅದರಿಂದ ಉಂಟಾದ ಸುಕೃತ ದುಷ್ಕೃತಗಳನ್ನು ಅನಾ ಯಾಸವಾಗಿ ತ್ಯಜಿಸಬಹುದು. ಆದುದರಿಂದ ಆ ಯೋಗವನ್ನು ಮಾಡು. ಕರ್ಮದ ಕೌಶಲವೇ ಯೋಗ. ಜೀವನವು ಇಸ್ಪೀಟಾಟದಂತೆ. ನಾವು ಆಟ ವನ್ನು ಕಲ್ಪಿಸಲಿಲ್ಲ, ಇಸ್ಪೀಟೆಲೆಗಳನ್ನು ಸೃಷ್ಟಿಸಲಿಲ್ಲ. ಆಟದ ನಿಯಮಗಳನ್ನು ಮಾಡಲು ಸ್ವತಂತ್ರವಿಲ್ಲ. ಕಲಸಿ ಎಲೆ ಹಾಕಿದಾಗ, ನಮಗೆ ಬರಬೇಕಾದ ಎಲೆ ಹಾಕಿದಾಗ, ನಮಗೆ ಬರಬೇಕಾದ ಎಲೆಗಳನ್ನು ಹಾಕಿಕೊಳ್ಳಲಾಗದು. ಒಳ್ಳೆ ಯವೋ ಕೆಟ್ಟವೋ ಎಲೆಗಳು ನಮ್ಮ ಭಾಗಕ್ಕೆ ಬಂದುಬಿದ್ದಿವೆ. ಆದರೆ ಆ ಎಲೆಗಳಲ್ಲೆ, ಆ ನಿಯಮಗಳಲ್ಲೆ, ಆಟವನ್ನು ಚೆನ್ನಾಗಿ ಆಡಲು ಬಲ್ಲೆವು. ಇಲ್ಲ ವಾದರೆ ಕೆಟ್ಟದಾಗಿ ಆಡುವೆವು. ಚದುರನಾದ ಆಟಗಾರನಾದರೆ ಸಾಧಾರಣ ಎಲೆಗಳನ್ನೆ ಚಮತ್ಕಾರವಾಗಿ ಆಡಿ ಗೆಲ್ಲಬಲ್ಲನು. ಆಟ ಬರದ ದಡ್ಡನಾದರೆ ಒಳ್ಳೆಯ ಎಲೆಗಳು ಬಿದ್ದಿದ್ದರೂ ಕುಲಗೆಡಿಸಿಕೊಂಡು ಸೋಲಬಹುದು. ಇತರರ ಆಟವನ್ನು ದೂರಬಹುದು. ಇರುವ ಸೌಕರ್ಯಗಳಲ್ಲಿ, ಈಗಿನ ಸನ್ನಿವೇಶದಲ್ಲಿ ಚಮತ್ಕಾರವನ್ನು ಉಪಯೋಗಿಸಿ, ಕೌಶಲದಿಂದ ಕೆಲಸಮಾಡಬಲ್ಲ ಚತು ರತೆಯೇ ಯೋಗ. ಜೀವನವಾದರೋ ನಮ್ಮ ಅಧೀನದಲ್ಲಿಲ್ಲ. ನಮ್ಮ ಮೂಗಿನ

ನೇರಕ್ಕೆ ಎಲ್ಲಾ ನಡೆಯಬೇಕು, ನಮಗೆ ಬೇಕಾದುದೇ ಒದಗಬೇಕು ಎಂದರೆ ಸಾಧ್ಯವಿಲ್ಲ. ಅದಕ್ಕೆ ಇರುವದನ್ನೇ ಸರಿಯಾಗಿ ಉಪಯೋಗಿಸಿಕೊಳ್ಳುವ ಕುಶಲತೆ ಬೇಕು. ಸರಿಯಾಗಿ ಕೆಲಸ ಮಾಡಬೇಕು. ಮೋಸ ಮಾಡಬಾರದು. ಸತ್ಯಮಾರ್ಗದಲ್ಲಿ ಬುದ್ಧಿ ಉಪಯೋಗಿಸಿ ಕರ್ಮ ನಡಸುವುದೇ ಕುಶಲತೆ. ದೌರ್ಜನ್ಯದಲ್ಲಿ, ಮೋಸದಲ್ಲಿ ಕುಶಲತೆ ಇಲ್ಲ.

ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥೫೦॥

ಯೋಗವೇ ಕರ್ಮದಲ್ಲಿ ಕೌಶಲ. ಕೆಲಸದಲ್ಲಿ ನಮ್ಮ ಶಕ್ತಿಯನ್ನು ವೃಥಾ ವ್ಯಯಮಾಡಿಕೊಳ್ಳಬಾರದು. ಬುದ್ಧಿವಂತಿಕೆಯಿಂದ, ಹೆಚ್ಚು ಶಕ್ತಿ ವ್ಯರ್ಥವಾಗ ದಂತೆ, ಶಾಸ್ತ್ರೋಕ್ತವಾಗಿ ಕೆಲಸ ಮಾಡುವುದೇ ಕೌಶಲ. ಹೇಗೆ ಮಾಡಬೇ ಕೆಂದು ತಿಳಿದರೆ ಸ್ವಲ್ಪ ಶಕ್ತಿಯನ್ನು ಉಪಯೋಗಿಸಿಯೇ ಹೆಚ್ಚು ಫಲಗಳನ್ನೂ ಪರಿಣಾಮವನ್ನೂ ಪಡೆಯಬಹುದು. ಮಾಡುವುದು ಕಷ್ಟವಲ್ಲ. ಹೇಗೆ ಮಾಡು ವುದು ಎಂದು ತಿಳಿಯುವುದು ಕುಶಲತೆ. ಒಂದು ದೊಡ್ಡ ಯಂತ್ರ ಹಟಾತ್ತನೆ ನಿಂತುಹೋಯಿತು. ಕೆಲಸಗಾರರೆಲ್ಲ ಸರಿಮಾಡಲು ಒದ್ದಾಡಿದರು. ನಡಸಲು ಸಾಧ್ಯವಾಗದಿರಲು, ಒಬ್ಬ ಪ್ರವೀಣನಿಗೆ, ಆ ಕೆಲಸದಲ್ಲಿ ಕೌಶಲ ಪಡೆದವನಿಗೆ ಹೇಳಿಕಳುಹಿಸಿದರು. ಆತ ಬಂದ, ಸರಿಯಾಗಿ ಎಲ್ಲ ಪರೀಕ್ಷೆಮಾಡಿ ನೋಡಿ, ಒಂದು ಸುತ್ತಿಗೆಯನ್ನು ತೆಗೆದುಕೊಂಡು, ಅಚ್ಚಿಗೆ ಮಧ್ಯದಲ್ಲಿ ಒಂದು ಕಡೆ ಒಂದು ಏಟು ಹಾಕಿದ. ಸಮ ಬಂತು. ಯಂತ್ರ ಓಡಿತು. ಕೆಲಸಕ್ಕೆ ೧೦೦೦ ರೂಪಾಯಿ ಮಜೂರಿ ಕೇಳಿದ. "ಏನು? ಸುತ್ತಿಗೆಯಿಂದ ಒಂದೇಟು ಹಾಕಿ ದುದಕ್ಕೆ ೧೦೦೦ ರೂಪಾಯೇ?" ಎಂದರು. "ಇಲ್ಲ, ಸುತ್ತಿಗೆ ಏಟು ಹಾಕಿದು ದಕ್ಕೆ ಒಂದಾಣೆ. ಎಲ್ಲಿ ಏಟು ಹಾಕಬೇಕೆಂದು ತಿಳಿದ ಕೌಶಲಕ್ಕೆ ೯೯೯ ರೂ. ೧೫ ಆಣೆ." ಎಂದು ಮಾರ್ಪಡಿಸಿ ಹೇಳಿದ. ಅಂತೇ ಯಾವ ಕೆಲಸ ಹೇಗೆ ನಾಜೋಕಾಗಿ ಚುರುಕಿನಿಂದ ಮಾಡಬೇಕೆಂಬ ಜ್ಞಾನವೇ ಕೌಶಲ. ಕರ್ಮ ಮಾಡುವುದರಲ್ಲಿ ಪರಮೋಪಾಯ ಯಾವುದೆಂದರೆ ನಿಷ್ಕಾಮಯೋಗವೇ. ಉಪಾಯವೆಂದರೆ ಕೃತ್ರಿಮವಲ್ಲ, ಯುಕ್ತಿ ಮಾರ್ಗ. ಕರ್ಮದೆಸೆಯಿಂದ ತಪ್ಪಿಸಿ ಕೊಂಡು ನಿರ್ಲಿಪ್ತವಾಗಲು ಮುಕ್ತಿಯೇ ಯೋಗ.

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥
ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥

ಈ ನಿಷ್ಕಾಮಯುಕ್ತರಾದ ಬುದ್ಧಿಶಾಲಿಗಳು ಕರ್ಮದಿಂದುಂಟಾಗುವ ಫಲಾಫಲ ಗಳನ್ನು ದಾಟಿ, ಬ್ರಹ್ಮಸಾಕ್ಷಾತ್ಕಾರ ಪಡೆದು, ಜನ್ಮಬಂಧನದಿಂದ ಬಿಡುಗಡೆ ಹೊಂದಿ, ದುಃಖರಹಿತವಾದ ಪರಮಪದವನ್ನು ಪಡೆವರು. ಆ ಅಜ್ಞಾನವೆಂಬ ಕಲ್ಮಷದಿಂದ ಕಲುಷಿತವಾದ ಬುದ್ಧಿಯು ಈ ರೀತಿ ಉತ್ತೀರ್ಣವಾದರೆ ಹಿಂದೆ ಕೇಳಿರುವ, ಮುಂದೆ ಕೇಳುವ ವಿಷಯಗಳಲ್ಲಿ ವೈರಾಗ್ಯ ಹೊಂದುತ್ತದೆ.

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಃ ತದಾ ಯೋಗಮವಾಪ್ಸ್ಯಸಿ ॥೫೩॥

ಶ್ರುತಿಯ ನಾನಾಫಲಶ್ರವಣದಿಂದ ಸಂಶಯಹೊಂದಿದ ಬುದ್ಧಿಯು ಸ್ವಾಭಾವಿಕ ಚಾಂಚಲ್ಯವನ್ನು ಬಿಟ್ಟು ಏಕಾಗ್ರವಾಗಿ ಯಾವಾಗ ಪರಬ್ರಹ್ಮನಲ್ಲಿ ನಿಲ್ಲು ವುದೋ ಆಗ ಬ್ರಹ್ಮೈಕ್ಯಯೋಗವನ್ನು ಪಡೆಯುವೆ ಎಂದು ಅರ್ಜುನನಿಗೆ 'ನಿಶ್ಚಲಾ ಸಮಾಧಾವಚಲಾ ಸ್ಥಾಸ್ಯತಿ' ಎಂಬ ಸ್ಥಿತಿಯನ್ನು ಮನಸ್ಸಿನ ಮುಂದೆ ಚಿತ್ರಿಸಿದುದರಿಂದ ಅರ್ಜುನನಿಗೆ ಆ ಸ್ಥಿತಿಯಲ್ಲಿರುವ 'ಸ್ಥಿತಧೀಃ'ಎಂಥ ವನು ಎಂಬ ವಿಷಯದಲ್ಲಿ ಹೆಚ್ಚು ತಿಳಿಯಬೇಕೆಂಬ ಕುತೂಹಲ ಹುಟ್ಟಿತು.

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥೫೪॥

ಆ ಸ್ಥಿತಪ್ರಜ್ಞಾವಸ್ಥೆಯಲ್ಲಿರುವವನ ಲಕ್ಷಣವೇನು? ಯಾವ ರೀತಿ ಮಾತನಾಡು ವನು? ಯಾವ ರೀತಿ ವ್ಯವಹರಿಸುವನು? ಎಂದು ತಿಳಿಯಬೇಕೆಂಬ ಆಸೆಯು ಪರಮಾತ್ಮನ ಬೋಧೆಯಿಂದ ಈ ಚಂಚಲವನ್ನು ಬಗೆಹರಿಸಿ ಯುಕ್ತವಾಗಿ ಕರ್ತವ್ಯವನ್ನು ಸ್ಥಿತಪ್ರಜ್ಞನು ತನ್ನ ಸ್ಥಾನದಲ್ಲಿದ್ದರೆ ಹೇಗೆ ಮಾಡುತ್ತಿದ್ದನೆಂಬು ದನ್ನು ತಿಳಿದು ತಾನೂ ಆ "ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ" "ಸಮಾ ಧಾವಚಲಾ"ನಾಗಿ "ಜನ್ಮಬಂಧವಿನಿರ್ಮುಕ್ತಪದಂ" ಪಡೆಯಲಾಸಕ್ತನಾಗಿ ಪ್ರಶ್ನಿಸುವನು.

ಶ್ರೀಕೃಷ್ಣನು ಹೇಳಿದ ವೈರಾಗ್ಯದಲ್ಲಿ ಅಭಿರುಚಿ ಹುಟ್ಟಿ, ಇದೆಲ್ಲ ಬರಿಯ

ಪುರಾಣವಾಗಬಾರದೆಂದು ಕಾರ್ಯತಃ ನಡೆಯಲು, ಮೇಲ್ಪಂಕ್ತಿಯಾಗಲು ಆ ಆದರ್ಶ ಮನುಷ್ಯನ ವಿವರಣೆಯನ್ನು ಅರ್ಜುನ ಕೇಳಿದನು. ತೈತ್ತಿರೀಯ ಶಿಕ್ಷಾವಲ್ಲಿಯ ಕೊನೆಯಲ್ಲಿ ಹೇಗೆ ನಡೆಯಬೇಕೆಂದು ಅನುಶಾಸನ ಮಾಡಿರುವುದು: ವಿದ್ಯಾಭ್ಯಾಸ ಮುಗಿದನಂತರ ಶಿಷ್ಯನನ್ನು ಲೋಕಜೀವನಕ್ಕೆ ಹಿತ ಚಿಂತನೆಯಿಂದ ಅನುಗ್ರಹಿಸಿ ಆಶೀರ್ವದಿಸಿ ಆಡಿರುವ ಮಾತುಗಳು, ಈಗಿನ ಕಾನ್ವೋಕೇಶನ್‌ನಲ್ಲಿ ಮಾಡುವ ಮುಖ್ಯ ಭಾಷಣಗಳಂತೆ. ಸುಮ್ಮನೆ ಅದು ಇದು ಒದರದೆ ಗುರುವು ಶಿಷ್ಯನಿಗೆ ನಿತ್ಯಜೀವನದಲ್ಲಿ ಸರ್ವದಾ ಮುಂದೆ ಧರ್ಮ ಕಾಪಾಡಿಕೊಂಡು ಯಾವ ರೀತಿ ನಡೆದು ಕರ್ಮದಿಂದ ಇಹಪರಗಳನ್ನು ಸಾಧಿಸಲು ಮುಖ್ಯವಾಗಿ ಅನುವಾಗುವ ಅಗತ್ಯವಾದ ಬುದ್ಧಿವಾದಗಳನ್ನು ಹೇಳಿದೆ. ಏನಾದರೂ ಬಿಟ್ಟಿರಬಹುದೆಂದು ದಿವ್ಯವಾಗಿ "ಮಾತೃದೇವೋ ಭವ, ಸತ್ಯಾನ್ನ ಪ್ರಮದಿತವ್ಯಂ, ಶ್ರದ್ಧಯಾ ದೇಯಂ" ಎಲ್ಲ ಮುಖ್ಯಾಂಶಗಳ ಸಾರಾಂಶವನ್ನೂ ಶ್ರೇಯಸ್ಸಿನ ಸಾಧನೆಗೆ ಉಪದೇಶಮಾಡಿದ ಮೇಲೆ ಕೊನೆಯದಾಗಿ ಏನಾದರೂ ಯಾವಾಗಲಾದರೂ ಅನುಮಾನ ಬಂದರೆ "ಬ್ರಾಹ್ಮಣಾಃ ಸಮದರ್ಶಿನಃ ಯುಕ್ತಾಅಯುಕ್ತಾಃ . . . ಯಥಾ ತೇ ತತ್ರ ವರ್ತೇರನ್ ತಥಾ ತತ್ರ ವರ್ತೇಥಾಃ" ಎಂದು "ಏಷ ಆದೇಶಃ, ಏಷ ಉಪದೇಶಃ, ಏಷ ವೇದೋಪನಿಷತ್, ಏಷ ಅನುಶಾಸನಂ, ಏವಮುಪಾಸಿತವ್ಯಂ" ಎಂದು ಒತ್ತಿ ಒತ್ತಿ ನಿರ್ದೇಶಿಸಿದ್ದಾರೆ. ಸಮದರ್ಶಿಗಳಾದ, ಕರ್ಮದಲ್ಲಿ ಯುಕ್ತರಾದ, ಕರ್ಮಫಲದಲ್ಲಿ ಅಯುಕ್ತರಾದ, ಯಾರ ಕಾಮವು ಧರ್ಮದಲ್ಲೇ ಸ್ಥಾಪಿತವಾಗಿದೆಯೋ ಅಂತಹ ಬ್ರಾಹ್ಮಣಾಃ ಅಂದರೆ "ಬ್ರಹ್ಮಾನ್ವೇಷಿಗಳು" ಅಂತಹ ಸಂದರ್ಭದಲ್ಲಿ ಹೇಗೆ ನಡೆಯುತ್ತಾರೆಯೋ ಆ ರೀತಿ ನೀನೂ ಅಂತಹ ಸಂದೇಹ ಬಂದ ಸಂದರ್ಭದಲ್ಲಿ ನಡೆಯಬೇಕೆಂದು 'ಇದೇ ಆದೇಶ, ಇದೇ ಉಪದೇಶ, ಇದೇ ವೇದೋಪನಿಷತ್‌ಸಾರ, ಇದೇ ಆಜ್ಞೆ, ಇಂತೇ ಆಚರಿಸಿಕೊಂಡು ಬರಬೇಕು' ಎಂದು ಕಟ್ಟಿಮಾಡಿದ್ದಾರೆ. ಇದರಲ್ಲಿ ಭಗವಂತನಿಗೂ ಅನುಮಾನ ಇಲ್ಲ. ಅಂಥ ಮಹಾತ್ಮರು ಎಂದೂ ತಪ್ಪಿ ನಡೆಯುವುದಿಲ್ಲ. ಅವರ ಆದರ್ಶ ಸಾಮಾನ್ಯಜನಕ್ಕೆ ಅತ್ಯಗತ್ಯ. "ಲೌಕಿಕಾನಾಂ ಹಿ ಸಾಧೂನಾಂ ಅರ್ಥಂ ವಾಗನುವರ್ತತೆ; ಋಷೀಣಾಂ ಪುನರಾಧ್ಯಾನಾಂ ವಾಚಂ ಅರ್ಥೋ ಅನುಧಾವತಿ" ಎಂಬಂತೆ ಲೌಕಿಕರು ಧರ್ಮವನ್ನು ಅನುಸರಿಸಿ ವಾಕ್ಕರ್ಮ ಮಾಡಬೇಕು. ಋಷಿಗಳೂ, ತಿಳಿದ ಸಮದರ್ಶಿ

ಬ್ರಾಹ್ಮಣರೂ ಆಡಿದ ವಾಕ್ ಮಾಡಿದ ಕರ್ಮವನ್ನೂ ಧರ್ಮವನ್ನೂ ಅನುಸರಿಸುತ್ತದೆ. ಆಗದಿದ್ದರೆ ಅವರು ಆವಾಕ್ಕನ್ನು ಆಡಲೆ ಆರರು; ಅಧರ್ಮವನ್ನು, ಅಕಾರ್ಯವನ್ನು ಮಾಡಲೇ ಆರರು. ಅವರದೇ ಮೇಲ್ಪಂಕ್ತಿಯಾಗಿ ನಡೆದವನು ಆವಾಕ್ಕನ್ನಾಡಲು, ಅಧರ್ಮವನ್ನೂ ಅಕಾರ್ಯವನ್ನೂ ಎಸಗಲು ಆಸ್ಪದವೇ ಆಗಲಾರದು. ಅದರಂತೆ ಅರ್ಜುನನು ಉತ್ಸಾಹದಿಂದ ತನಗೆ ಆದರ್ಶವಾಗಿ ನಡೆಯಲು ಮುಂಚೆ ತಿಳಿದುಕೊಳ್ಳಲು 'ಸ್ಥಿತಪ್ರಜ್ಞ'ನ ವಿಶದವರ್ಣನೆಯನ್ನು ಕೇಳುತ್ತಾನೆ. ಅವನ ಲಕ್ಷಣವೇನು? ನುಡಿಯೇನು? ನಡೆಯೇನು? ಕೇಳಿದ ಮೇಲೆ ಆತನ ಮನೋವಾಕ್ಕಾಯ ಕರ್ಮಗಳನ್ನೂ ಅವನ ಅಂತರಂಗ ಬಹಿರಂಗಗಳನ್ನೂ ಕೇಳಿದಂತೆಯೇ ಆಯಿತು. ಬರೀ ಅವನು ಮಾಡಿದಂತೆ ಮಾಡಿದರೆ ತಪ್ಪಾದೀತು. ಅದರ ಹಿಂದಿನ ನಡೆ, ನಡೆಯ ಹಿಂದಿನ ನುಡಿ, ನುಡಿಯ ಹಿಂದಿನ ಲಕ್ಷಣ, ಅದರ ಹಿಂದಿನ "ಸ್ಥಿತಧೀಃ" ತಿಳಿದ ಮೇಲೆ ಅದರಂತೆ ನಡೆಯಲು ಅನುಮಾನವೇ ಇಲ್ಲ. ಇಂತಹ ಆದರ್ಶ ಪುರುಷನ ವಿಚಾರ ಹಿಂದಾಗಲಿ ಮುಂದಾಗಲಿ ಇನ್ನಾವ ಗ್ರಂಥದಲ್ಲೂ ಬಂದಿಲ್ಲ. ಇದನ್ನು ಲಿಖಿಸುವುದಕ್ಕೆ ಎಷ್ಟು ಸ್ವಾರಸ್ಯವಾಗಿ, ಎಷ್ಟು ಸುಗಮವಾಗಿ ಸನ್ನಿವೇಶವನ್ನು ತಂದಿದ್ದಾನೆ ಸ್ವಾಮಿ! ಅದನ್ನು ಅಪೇಕ್ಷಿಸಿ ಕೇಳುವುದಕ್ಕೆ ಕೆರಳಿಸುವ ವೈರಾಗ್ಯ ನಿತ್ಯಾನಿತ್ಯ ಪೀಠಿಕೆ ಹೇಳಿದವನೂ ಸ್ವಾಮಿಯೆ. ಕಠೋಪನಿಷತ್ತಿನ ಕೊನೆಯಲ್ಲಿ "ಅಥ ಮರ್ತ್ಯೋ ಅಮೃತೋ ಭವತಿ" ಎಂದು ಎರಡು ದಿವ್ಯ ಶ್ಲೋಕ ಬಂದಿದೆ—ಆಗ ಮರ್ತ್ಯನಾದವನು ಅಮೃತನಾಗುತ್ತಾನೆ ಎಂದು. ಯಾವಾಗೆಂದರೆ "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇऽಸ್ಯ ಹೃದಿ ಶ್ರಿತಾಃ" ಹೃದಯವನ್ನಾಶ್ರಯಿಸಿದ ಸರ್ವಕಾಮನೆಗಳೂ ಯಾವಾಗ ಹೋಗುವುವೊ; "ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ಹೃದಯದಲ್ಲಿ ಗಂಟುಹಾಕಿಕೊಂಡಿರುವ ವಾಸನೆಗಳು ಯಾವಾಗ ಬಿಚ್ಚುವುವೋ—ಆಗ 'ಮರ್ತ್ಯೋ ಅಮೃತೋ ಭವತಿ, ಹೃದಯಸ್ಯೇಹ ಗ್ರಂಥಯಃ ಪ್ರಭಿದ್ಯಂತೇ' ಎಂದರೆ "ಕಾಮಾ ಯಸ್ಯ ಹೃದಿ ಸ್ರಿತಾಃ" ದಿಂದ ಉಂಟಾಗಿರುವ ವ್ಯಾಮೋಹದ ಗಂಟು 'complexes'. ಪಾಶ್ಚಿಮಾತ್ಯ ಪಂಡಿತನೊಬ್ಬನು ಮನಃಶಾಸ್ತ್ರವನ್ನೇ ಈ 'complexes' ವಾಸನೆಯ ವ್ಯಾಮೋಹದ ಗಂಟುಗಳು" ಮೇಲೆ ರಚಿಸಿದ್ದಾನೆ. ಈ ವಾಸನೆ ವ್ಯಾಮೋಹದ ಗಂಟುಗಳು ಮನಸ್ಸನ್ನೆಂತು ರಚಿಸುತ್ತದೆಯೋ ಅಂತೆ ಮನುಷ್ಯ.

ಈ ಗಂಟುಗಳನ್ನು ಬಿಚ್ಚಿದ ಹೊರತು ನಿಜಸ್ವಭಾವ 'ಅಮೃತ' ಬಾರದು, ತೋರದು. ಈ ವಾಸನಾ ವ್ಯಾಮೋಹದ ಗಂಟುಗಳ ಕಂತೆಯೇ ಬಲವಾಗಿದೆ. ಈ ಗಂಟುಗಳನ್ನು ಕಳಚುವುದೇ ಕಷ್ಟ. ಇವು ಆಶ್ರಿತ ಕಾಮನೆಗಳು, ಹೃದಯ ಗ್ರಂಥಿಗಳು ನಾಶವಾದ ಮೇಲೆ "ತತ್ರ ಬ್ರಹ್ಮ ಸಮಶ್ನುತೆ;" ಬ್ರಹ್ಮಸಮಾನ ನಾಗುತ್ತಾನೆ, ಎಂದು "ಏತಾವದನುಶಾಸನಮ್."

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೆ ॥೫೫॥

ಇದನ್ನೇ ಸೂತ್ರವಾಗಿ ಷುರುಮಾಡಿದಾನೆ ಭಗವಂತ. 'ಯದಾ ಮನೋಗತಾನ್ ಸರ್ವಾನ್ ಕಾಮಾನ್ ಪ್ರಜಹಾತಿ' ಎಂದು ಯಾವಾಗ ಅಂತಃಕರಣದಲ್ಲಿನ ಸರ್ವ ಕಾಮನೆಗಳನ್ನೂ ತ್ಯಜಿಸಿ 'ಆತ್ಮನ್ಯೇವಾತ್ಮನಾ ತುಷ್ಟಃ' ಆದರೆ ಉಳಿವು ದಿನ್ನೇನು? ತನ್ನಲ್ಲಿಯೇ ತಾನು ಸಂತುಷ್ಟನಾಗುತ್ತಾನೋ ಸ್ಥಿತಪ್ರಜ್ಞನೆಂದು— "ತತ್ರ ಬ್ರಹ್ಮ ಸಮಶ್ನುತೆ" ಹೇಳಿಸಿಕೊಳ್ಳುತ್ತಾನೆ. ಒಳಗಿನ ಕೊಬರಿ ಬೇಕಾ ದರೆ ಕರಟವನ್ನು ಒಡೆಯಬೇಕು. ನಿಜಸ್ಥಿತಿ ಬರಬೇಕಾದರೆ ಆವರಿಸಿರುವ 'ಮನೋಗತಾನ್ ಸರ್ವಾನ್ ಕಾಮಾನ್' ಒಡೆಯಬೇಕು. ವರಾಹೋಪ ನಿಷತ್ತಿನಲ್ಲಿ "ಪ್ರಜಹಾತಿ ಯದಾ ಕಾಮನ್ ಸರ್ವಾಂಶ್ಚಿತ್ತಗತಾನ್ಮನೇ ಮಯಿ ಸರ್ವಾತ್ಮಕೆ ತುಷ್ಟಸ್ಸಜೀವನ್ಮುಕ್ತ ಉಚ್ಯ್ಯತೇ" ಎಂದು ಜೀವನ್ಮುಕ್ತನ ಲಕ್ಷಣ ವನ್ನು ಉಲ್ಲೇಖಿಸಿದೆ. ಇದೇ ಅಭಿಪ್ರಾಯವನ್ನೆ ಪದಶಃ ಕೊಂಚ ಹೆಚ್ಚು ಕಡಮೆ ೫೫ ನೇ ಶ್ಲೋಕದಲ್ಲಿ ಕಾಣುತ್ತೇವೆ. ಸ್ಥಿತಪ್ರಜ್ಞನೇ ಜೀವನ್ಮುಕ್ತ, ಈ ೧೮ ಶ್ಲೋಕಗಳಲ್ಲಿನ "ಸ್ಥಿತಪ್ರಜ್ಞ"ನ ವ್ಯಾಖ್ಯೆ—ವಿವರಣೆಯನ್ನು ಶ್ರೀ ವಿನೋಬಾರವರು ಅತಿ ದೀರ್ಘವಾಗಿ ಬಹಳ ಸುಂದರವಾಗಿ ಪ್ರಶಸ್ತಿಯಿಂದ ಮಾಡಿದ್ದಾರೆ. ಎಲ್ಲ ವಿಷಯಗಳನ್ನೂ ಸಂಗ್ರಹಿಸಿ, ಉಪನಿಷತ್, ಅಭಂಗಗಳು, ಶಾಸ್ತ್ರಗಳು, ಕಥೆಗಳು, ಉಪಮಾನಗಳೊಡನೆ ಅತಿ ಸರಳವಾಗಿ ಉಪನ್ಯಾಸ ಗಳಲ್ಲಿ ಉಲ್ಲೇಖಿಸಿದ್ದಾರೆ.

ಗೀತೆಯಲ್ಲಿನ ಪ್ರಜ್ವಲಿತ ಉಪದೇಶವು ದ್ವಾಪರದಲ್ಲಿ ನಿಃಸ್ವಾರ್ಥಕ ಯೋಧ ವೀರನನ್ನಾಗಿ ಅರ್ಜುನನನ್ನು ಮಾರ್ಪಡಿಸಿ ಪುರಾಣಗಳಲ್ಲಿ ಉಪದೇಶರತ್ನ ವಾಗಿ ಕಾವ್ಯವಾಗಿ ಸ್ಥಿರವಾದುದು, ಭವಿಷ್ಯತ್‌ವಾಣಿಯು ತದಂಗವಾಗಿ ತನ್ನ ಕೃತಾರ್ಥತೆಯನ್ನು ಕಲಿಯುಗದಲ್ಲಿ ನಿಃಸ್ವಾರ್ಥ ಅಹಿಂಸಾಯೋಧವೀರ, ಪ್ರೀತಿ

ಯಿಂದ ಪರರನ್ನು ಗೆದ್ದ ಮಹಾತ್ಮಾ ಗಾಂಧಿಯವರ ಜೀವನ ಮತ್ತು ಮರಣ ದಲ್ಲಿ ಕೃತಕೃತ್ಯತೆಯನ್ನು ಕಾವ್ಯದ ಭರವನ್ನು ಜೀವಿತದಲ್ಲಿ ಫಲಿಸಿ ಪರಿಪೂರ್ಣತೆ ಯನ್ನು ಹೊಂದಿತು.

ಓದಿ ಧ್ಯಾನಿಸಿದುದರಿಂದಲೇ ಇಂತಹ ವೀರರನ್ನು ಸೃಷ್ಟಿಸಬಲ್ಲ ಗೀತೆಯು ಸಾನ್ನಿಧ್ಯದಲ್ಲಿ ಸಮ್ಮುಖ ಕುಳಿತು ಕೇಳಿದ ಭಕ್ತಾಗ್ರೇಸರ ಅರ್ಜುನನಲ್ಲಿ ಎಂತಹ ಪರಿಣಾಮವನ್ನು ಮಾಡಿರಬೇಕು!

ಗೀತಾಶಾಸ್ತ್ರದಲ್ಲಿ ಅತಿಮುಖ್ಯವಾದ ಈ ಭಾಗವನ್ನು ಮಹಾತ್ಮರು ತಮ್ಮ ಪ್ರಾರ್ಥನೆಯಲ್ಲಿ ಸರ್ವದಾ ಪಠಿಸುತ್ತಿದ್ದರು. ಪ್ರಾರ್ಥನೆಯಲ್ಲಿ ಜೀರ್ಣಿಸಿಕೊಂಡು ಅಕ್ಷರತಃ ಇದನ್ನು ಆಚರಣೆಗೆ ತರಲು ಪ್ರಯತ್ನಿಸಿ, ಇದನ್ನೆ ಮನಸ್ಸಿನಲ್ಲಿಟ್ಟು ಕಾರ್ಯೋನ್ಮುಖರಾಗಿದ್ದವರು, ಸಾಧಿಸಿದ ಮಹಾಪುರುಷರಲ್ಲಿ ಸ್ಥಿತಪ್ರಜ್ಞನ ಸ್ಥಿತಿ ಮುಟ್ಟಿ, ಸ್ಥಿತಿಯಲ್ಲಿದ್ದು ಸ್ಥಿತಿಯನ್ನಾಚರಣೆಗೆ ತಂದು ಅದನ್ನು ಮೇಲ್ಪಂಕ್ತಿ ಯಾಗಿ ಹಾಕಿಕೊಟ್ಟ ಮಹಾತ್ಮರು ಪ್ರಸ್ತುತಃ ನಮ್ಮ ಕಾಲಕ್ಕೆ ಒಬ್ಬರೇ. ಅದೇ ಹಾದಿಯಲ್ಲಿ ಅದನ್ನೇ ಸಾಧಿಸಿ, ಕಣ್ಮರೆಯಾದ ಮಹಾತ್ಮರ ಆದರ್ಶದಲ್ಲೇ ನಡೆಯುತ್ತ ನುಡಿಯುತ್ತ ತನ್ಮಯರಾಗಿರುವವರು, ಅವರ ತತ್ತ್ವವಿಚಾರಶಿಷ್ಯ ವಿನೋಬಾರವರೇ. ಅವರ ಅದ್ಭುತ ಸ್ಥಿತಪ್ರಜ್ಞಭಾಷ್ಯವನ್ನು ಎಲ್ಲರೂ ಓದಲೇ ಬೇಕು. ಗೀತೆಯಲ್ಲಿ ಸಾಧನೋಪಾಯವನ್ನೆಲ್ಲ ಸರಳವಾಗಿ ಬಿಚ್ಚಿ ಕಾರ್ಯೋ ನ್ಮುಖಕ್ಕೆ ಅನುಗುಣವಾಗಿ ಸೂತ್ರರೂಪವಾಗಿಳಿಸಿರುವುದು ಈ ವ್ಯಾಖ್ಯೆಯಲ್ಲೇ. ಇದರಲ್ಲಿರುವ ಗಾಢವಿಚಾರಗಳು, ಸರ್ವದರ್ಶನತತ್ತ್ವಗಳು, ಸರ್ವಮತಸಾರಾಂಶ ಗಳು, ಸರ್ವರ ಶ್ರೇಯೋಮಾರ್ಗಗಳು ಅಜ್ಞಾನವನ್ನು ದಾಟಲು ಬೇಕಾಗಿರುವ ಗುಣಗಳನ್ನು ಸೂತ್ರಿಸಿರುವ ಈ ತತ್ತ್ವಗುಣಮಾಲೆಯನ್ನು ಯಾರೂ ದೂಷಿಸ ಲಾರರು. ಉಚ್ಚಕಲ್ಪನೆಯ ಪರಮಾವಧಿಯಲ್ಲಿ ಮುಕ್ತನ ಕಥನವೇ ಬಂದು ಮಾನವನ ಶ್ರೇಯಸ್ಸಿಗೆ ಆದರ್ಶವಾಗಿ ನಿಂತಿದೆ.

ಈ ಭಾಗದ ೧೮ ಶ್ಲೋಕಗಳನ್ನು ಶ್ರೀ ವಿನೋಬಾರವರು ನಾಲ್ಕು ವಿಭಾಗ ಮಾಡಿದ್ದಾರೆ:

(೧) ಸ್ಥಿತಪ್ರಜ್ಞನ ವಿವರಣೆ: ೪ ಶ್ಲೋಕಗಳು.

(೨) ತದನುಷಂಗವಾಗಿ ಸಂಯಮದ ವಿಜ್ಞಾನ: ೩ ಶ್ಲೋಕಗಳು.

(೩) ಸಂಯಮದ ತತ್ತ್ವಜ್ಞಾನ ಪುಷ್ಟೀಕರಣೆ: ೭ ಶ್ಲೋಕಗಳು.

(೪) ಸ್ಥಿತಪ್ರಜ್ಞನ ಸ್ಥಿತಿ ಸ್ಪಷ್ಟೀಕರಣ ಮಾಡಿ. ಅದರ ಫಲಶ್ರುತಿ: ೪ ಶ್ಲೋಕಗಳು.

ದೇವಲೋಕವೂ ದೇವತ್ವವೂ ಹೊರಗಡೆ ನೋಟದಲ್ಲಿ ಕಾಣುವುದಿಲ್ಲ. ಅವರಿವರು, ಗುರುಗಳು, ಶಾಸ್ತ್ರಿಗಳು ಕಣ್ಣಾಮುಚ್ಚಾಲೆಯಲ್ಲಿ ಅಲ್ಲಲ್ಲಿ ಅವಿತಿರುವ ಆಟಗಾರ ಸಂಗಾತಿಯರಂತೆ 'ಇಕೋ ಇಲ್ಲಿ, ಅಕೋ ಅಲ್ಲಿ' ಎಂದು ದೇವತ್ವವನ್ನು ತೋರಿಸುವವರೂ ಇಲ್ಲ, ತೋರಿಸಲು ಹೊರಗಣದೂ ಅಲ್ಲ. ನೋಡು. ನೋಡಬೇಕು, ನಿನ್ನೊಳಗೇ ದೇವತ್ವವನ್ನು. ನಿನ್ನಲ್ಲಿಯೇ, ಶಾಶ್ವತವಾಗಿ ನಿಶ್ಚಲವಾಗಿದೆ. ನೀನೇ ದೇವನಾದ ಮೇಲೆ ನಿನ್ನ ಸುತ್ತಲದೇ ದೇವಲೋಕ.

ಒಬ್ಬ ಪೂರ್ಣಮನುಷ್ಯ, ಒಬ್ಬ ಸಾತ್ತ್ವಿಕ ಶಿಖಾಮಣಿಯಲ್ಲಿ ದೇವರ ಬಿಂಬವನ್ನು ನಾವು ಕಾಣಬಹುದು. ದೇವತ್ವವು ಬರುವಿಕೆಯಲ್ಲ, ಇರುವಿಕೆ. "Not becoming, but being." ಅಂಥ ಅವಸ್ಥೆಯ ವ್ಯಾಖ್ಯೆಯೇ ಸ್ಥಿತಪ್ರಜ್ಞದರ್ಶನ.

> ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
> ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥೫೬॥

ಸರ್ವಕಾಮನೆಗಳನ್ನು ಮನಸ್ಸಿನಲ್ಲಿ ಗೆದ್ದವನು, ದುಃಖದಿಂದ ಮನಸ್ಸು ಉದ್ವೇಗಗೊಳಿಸಿಕೊಳ್ಳುವುದಿಲ್ಲ, ಸುಖದಿಂದ ಪ್ರಫುಲ್ಲವಾಗಿ ಅರಳಿಸುವುದಿಲ್ಲ. ರಾಗ, ಭಯ, ಕ್ರೋಧ ಕಳೆದುಹೋಗಿರುತ್ತದೆ. ಯೋಗವಾಸಿಷ್ಠದಲ್ಲಿ,

> "ಮುದಿತೋ ಭವ ಹರ್ಷೇಷು ದುಃಖೇಷು ಭವ ದುಃಖಿತಃ
> ಕರುಣಾಂ ಕುರು ದೀನೇಷು ಭವ ವೀರೇಷು ವೀರ್ಯವಾನ್"

ಎಂದಿರುವ ಶ್ಲೋಕಾರ್ಥವೂ ಇದೆ. ರಾಗಗಳನ್ನು ಗೆದ್ದರೂ, ಸಂತಸದಿಂದಿರುವವರೊಡನೆ ಸಂತೋಷಿಸುವನು, ದುಃಖಿಗಳಿಗೆ ಸಹಾನುಭೂತಿಯಾಗಿ ದುಃಖಿಸುವನು, ದೀನರಲ್ಲಿ ಕರುಣೆ ತೋರಿಸುವನು. ವೀರರಲ್ಲಿ ವೀರಾಗ್ರೇಸರನಾಗಿರುವನು, ರಾಗಗಳು ಅವನ ಅಧೀನದಲ್ಲಿರುವವೇ ಹೊರತು, ರಾಗಗಳು ಲೋಕಜನಸೇವೆಗಾಗಿ ಹೊರತು, ರಾಗಾದಿಗಳು ಅವನ ಮೇಲೆ ರಾಜ್ಯ ಮಾಡಲಾರವು. ಮಂಗನ ಮನೋವೃತ್ತಿಯಾದರೆ ಆನಂದವಾದಾಗ ಕೇಕೆ ಹಾಕುವುದು, ದುಃಖ ಬಂದಾಗ ಚೀರುವುದು. ಉತ್ = ಮೇಲೆ, ವೇಗ = ಗತಿ : ಉದ್ವೇಗ, ಗಾಂಭೀರ್ಯ

ವಲ್ಲ. ಮನೋನಾಶವೆಂದರೆ ಮನಸ್ಸಿನ ನಿಶ್ಯಕ್ತಿಯ ನಾಶವಲ್ಲ. ಮನಸ್ಸು ಬುದ್ಧಿಯ ನಿರ್ಣಯವನ್ನು ಕಿಮಕ್ಕೆನ್ನದೆ ಅನುಸರಿಸಬೇಕು. ಮನಸ್ಸಿನಲ್ಲಿ ಸುಖದುಃಖಗಳ ತಾಡನದಿಂದ ಪರಿಣಾಮವಾಗುವುದೆಂಪಲ್ಲ. ಆಗುವುದು. ಆದರೆ ರಾಗ, ಭಯ, ಕ್ರೋಧಗಳು ಕಳೆದಿರುವುವು, ದುಃಖವಾರ್ತೆ ಕೇಳಿದರೆ ತತ್‌ಕ್ಷಣ ಅಳುವುದಿಲ್ಲ. ಅಯ್ಯೋ ಎಂದು ಎದೆ ಬಡಿದುಕೊಳ್ಳುವುದಿಲ್ಲ. ಸುಖವಾರ್ತೆ ಯನ್ನು ಕೇಳಿದರೆ ಕುಪ್ಪಳಿಸಿ ಹಾರುವುದಿಲ್ಲ, ಕೇಕೆ ಹಾಕಿ ನಗುವುದಿಲ್ಲ. ಅದನ್ನು ತಡೆವನು, ಸಂಯಮಮಾಡುವನು. ಯಾವುದರ ಪರಿಣಾಮವಾಗಲಿ ಅಧಿಕ ವಾಗಿ ಆಗುವುದು ಪ್ರಹಾರದ ಪ್ರಥಮ ಕ್ಷಣದಲ್ಲಿ. ಆಗ ತಡೆಯಬಲ್ಲವ ಅರ್ಧ ಯುದ್ಧ ಗೆದ್ದಂತೆ, ಅನಂತರ ಅದರ ವೇಗ ಕಡಮೆಯಾಗುವುದು. ದುಃಖದಲ್ಲಿ ಉದ್ವೇಗವಾಗಲಿ, ಸುಖದಲ್ಲಿ ಪ್ರಫುಲ್ಲತೆಯಾಗಲಿ ತತ್‌ಕ್ಷಣದಲ್ಲಿ ತಡೆದು ಸಂಯಮ ಮಾಡಬಲ್ಲವನಿಗೆ ರಾಗ ಭಯ ಕ್ರೋಧಗಳು ಹುಟ್ಟಲವಕಾಶವೇ ಇಲ್ಲ. ದುಃಖದಲ್ಲಿ ಉದ್ವೇಗಗೊಂಡರೆ ಕೋಪ ಬರಬಹುದು. ವಿಪರೀತವಾಗಿದ್ದರೆ ಎದುರಿಸಲೆಂತೆಂಬ ಭಯ ಬರಬಹುದು. ಸುಖದಲ್ಲಿ ಅರಳಿದ ಸ್ಫೂರ್ತಿಯುಂಟಾ ದರೆ ರಾಗ, ಪ್ರೀತಿ ಉತ್ಪನ್ನವಾಗಬಹುದು. ಆಸಕ್ತಿ ಹೆಚ್ಚಬಹುದು. ಆದರೆ ಅವನ್ನು ತಡೆಗಟ್ಟಿದರೆ ಅವುಗಳ ಹೊರ ವಿಕಾಸಕ್ಕೆ ಎಡೆಕೊಡದಿದ್ದರೆ ಸಮತ್ವ ಬರುತ್ತದೆ.

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥

ಆಗ ಶುಭಾಶುಭ ಯಾವುದು ಪ್ರಾಪ್ತವಾದರೂ ಅದರಲ್ಲಿ ಸರ್ವತ್ರ ಸ್ನೇಹವುಂಟಾ ಗದೆ, ತದನುಸಾರ ಅಭಿನಂದಿಸದೆಯೂ ದ್ವೇಷಿಸದೆಯೂ, ತನ್ನ ಪ್ರಜ್ಞೆಯಲ್ಲಿ (ನಿತ್ಯಾನಿತ್ಯ ವಿವೇಕದಲ್ಲಿ) ಸ್ಥಿರವಾಗಿರುವನು. ಪ್ರತಿಷ್ಠಾಮೂರ್ತಿ ದೇವಸ್ಥಾನದ ಗರ್ಭಗುಡಿಯಲ್ಲಿ ಅಚಲವಾಗಿ ಸ್ಥಿರವಾಗಿರುವುದು ನೋಡಿದ್ದೀರಿ. ಹಬ್ಬ ಬರಲಿ, ಉತ್ಸವ ಬರಲಿ, ತೇರು ಕಟ್ಟಲಿ, ಪರಿಷೆ ನೆರೆಯಲಿ, ಪ್ರತಿಷ್ಠಿತ ಮೂರ್ತಿ ಅಲುಗದು. ಏನಿದ್ದರೂ, ಆ ಚಲನವಲನವೆಲ್ಲ ಉತ್ಸವ ಮೂರ್ತಿಗೇ. ಅದಕ್ಕೆ ರಥಾರೋಹಣವೂ ಉಂಟು, ಮೆರವಣಿಗೆಯೂ ಉಂಟು. ಅನಂತರ ಅವರೋಹಣವೂ ಉಂಟು. ಶ್ರೀ ರಾಮಕೃಷ್ಣರು ಒಂದಾವರ್ತಿ ನವರಾತ್ರಿ ಯಲ್ಲಿ ಉತ್ಸವಕ್ಕೆ ಸಿದ್ಧವಾಗಿದ್ದ ದುರ್ಗಾದೇವಿಯ ಪ್ರತಿಮೆಗೆ ಹೇಳುತ್ತಾರೆ

(ಒಬ್ಬ ಕುಡುಕನ ಬಾಯಲ್ಲಿ): "ನೀನು ಮೆರವಣಿಗೆಯಲ್ಲಿ ಅಲಂಕರಿಸಿರುವವಕ್ಕೆ ಮೆರೆಯಬೇಡ. ಮೆರವಣಿಗೆಯಾದನಂತರ ನಿನ್ನನ್ನು ಗಂಗಾನದಿಗೆ ಎತ್ತಿಹಾಕಿಬಿಡುತ್ತಾರೆ" ಎಂದು. ನಾವು ಗಣೇಶನನ್ನು ಮಾಡುವಂತೆ, ತಂದು ಅಲಂಕರಿಸಿ, ಪೂಜಿಸಿ ಶುಶ್ರೂಷೆ ಮಾಡಿದರೇನು? ಒಂದು ದಿನ ತೆಗೆದುಕೊಂಡು ಹೋಗಿ ನೀರೊಳಗೆ ಮುಳುಗಿಸಲೇ! ಕಾಳಿಕಾದೇವಿಗೆ ಬಲಿಕೊಡಲು ಕೋಣನನ್ನು ಪುಷ್ಟಿಮಾಡಿ ಸ್ವೇಚ್ಛೆಯಾಗಿ ಬೆಳಸಿದರೇನು? ಬಲಿಯಾಗಲಲ್ಲವೇ? ತಿಳಿಯದೆ ಕೊಬ್ಬಿದೆ ಅಲಂಕೃತಪ್ರಾಣಿ! ಬಲಿಗೆಂದು ಕಾಳಿಯ ಮುಂದೆ ನಿಲ್ಲಿಸಿರುವಾಗ ಕೂಡ ದೇವಿಗೆಂದು ಎರಡು ಕಡೆಯೂ ಕಟ್ಟಿರುವ ತಳಿರು ಕಂದಿನೆಲೆಗೆ ಬಾಯಿ ಹಾಕಲು ಹೋಗುತ್ತದಂತೆ. ಉತ್ತರಕ್ಷಣದಲ್ಲಿ ಆಗುವ ಗತಿ ಕೂಡ ಗಮನವಿಲ್ಲ, ಸ್ವೇಚ್ಛಾಪ್ರವೃತ್ತಿ. ಮೊದಲಿಂದ ಹೋದಂತೆ ಬಿಟ್ಟುಕೊಂಡು ತಿರುಗಿ, ತಿಂದು, ತೇಗಿದ ದುರಾಭ್ಯಾಸ. ಅದರಲ್ಲೇ ಆಸಕ್ತಿ.

> ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।
> ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೮॥

ಆದರೆ ಪ್ರತಿಷ್ಠಿತವಾದ ಪ್ರಜ್ಞೆಯುಳ್ಳವನಿಗಾದರೋ ವಿಷಯಗಳಲ್ಲಿ ವಿಹರಿಸುವುದಿರಲಿ, ಇಂದ್ರಿಯ ವಿಷಯಗಳಿಂದ ಇಂದ್ರಿಯಗಳನ್ನು ತನ್ನಿಚ್ಛಾನುಸಾರ, ಆಮೆಯು ಕರಚರಣಾದ್ಯವಯವಗಳನ್ನು ಅನಾಯಾಸವಾಗಿ ಸ್ವಾಭಾವಿಕವಾಗಿ ಎಂತು ತನ್ನನ್ನಾಚ್ಛಾದಿಸಿರುವ ಸುರಕ್ಷಿತವಾದ ಚಿಪ್ಪಿನೊಳಗೆ ಘಾತಕ್ಕೊಳಗಾಗದಂತೆ ಸಕಾಲದಲ್ಲಿ ಸಂಕುಚಿತಮಾಡಿಕೊಳ್ಳುವುದೋ ಅಂತು ಭೋಗೇಂದ್ರಿಯಗಳನ್ನು ಹಿಮ್ಮೆಟ್ಟಿಸಿಕೊಳ್ಳುತ್ತಾನೆ. ಪಶುಪ್ರಾಣಿಯಾದ ಆಮೆ, ಅಪಾಯವಿದ್ದೆಡೆ ಅವಯವಗಳನ್ನು ಒಳಗೆಳೆದುಕೊಳ್ಳುತ್ತೆ. ನಾವು ಮನುಷ್ಯರು ಹೆಸರಿಗೆ ವಿವೇಕವಿರುವ ಪ್ರಾಣಿಗಳು. ಪ್ರಾಣಿಯೆಂದರೆ ಅವಮಾನವೆಂದು ಭಾವಿಸುತ್ತೇವೆ, ನಮ್ಮನ್ನು ಪ್ರಾಣಿಯೆಂದರೆ ಮೂಕಜಂತು ಪ್ರಾಣಿಗಳಿಗೆ ಅವಮಾನವಾಗಬೇಕು ಅಂತು ವರ್ತಿಸುತ್ತೇವೆ. ಅವೇ ಎಷ್ಟೋ, ಈಗಿನ ನಮ್ಮ ಅವಿವೇಕ ಸ್ಥಿತಿಯನ್ನು ವಿವೇಚಿಸಿದರೆ, ನಮ್ಮೊಡನೆ ಒಂದೆಂದುಕೊಳ್ಳುವುದಕ್ಕೆ ನಾಚಬೇಕಾಗಿ ಬಂದಿದೆ. ಹೋಲಿಸಿ ನೋಡಿದರೆ ಸ್ವಾಭಾವಿಕಜೀವನದ ಮಾರ್ಗಗಳಲ್ಲಿ ಪ್ರಾಣಿಗಳೇ ವಾಸಿ, ಎಲ್ಲೆ ಮೀರಿ ನಡೆಯದ ಸ್ವಾಭಾವಿಕ ಬುದ್ಧಿಯಿಂದಲೇ.

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥

ಆದರೆ ಮನುಷ್ಯನನ್ನು ನೋಡಿ: 'ಮನುಷ್ಯನ ಪರೀಕ್ಷೆ ಮಣೆಯ ಮೇಲೆ (ಉಣುವಾಗ) ಮತ್ತು ಮಂಚದ ಮೇಲೆ ನರಳುವಾಗ' ಎಂಬನಂತೆ ಒಬ್ಬ ಮಹಾತ್ಮ. ಒಳ್ಳೆಯ ಊಟ ಸಿಕ್ಕಿತು ಎನ್ನಿ, ಒಬ್ಬ ಉಂಡಾಡಿಗನಿಗೆ; ಹೊಡೆದ ಮಿತಿಯಿಲ್ಲದೆ. ಔತಣದ ಭಕ್ಷ್ಯಗಳು ಸಿಕ್ಕುವುದಿನ್ನೆಂದೋ ಎಂದು ನೀರು ಕೂಡ ಕುಡಿಯದೆ ಅಪ್ಪಳಿಸಿದ ಅನ್ನಿ. ಇಂತು ಒಂದಾವರ್ತಿ ಮೂಗಿನವರೆಗೂ ತಿಂದು ತೇಗಿ ಬಂದ ಉಂಡಾಡಿ, ಅದರ ಪರಿಣಾಮವಾಗಿ ಹೊಟ್ಟೆಶೂಲೆ ಬಂದು ಜಗುಲಿಯ ಮೇಲೆ ಬಿದ್ದು ಹೊರಳಾಡುತ್ತಿದ್ದನಂತೆ. ನೋಡಿದ ಮಿತ್ರ ವೈದ್ಯನೊಬ್ಬ ಕನಿಕರದಿಂದ 'ಲೋ, ಒಂದು ಗಜ್ಜುಗದಷ್ಟು ಲೇಹ ಕೊಡುತ್ತೇನೆ, ತಿಂದುಬಿಡು. ಬೇನೆ ವಾಸಿಯಾಗುತ್ತದೆ" ಎಂದನಂತೆ. "ಓ! ಹೋಗೋ, ಗಜ್ಜುಗದಷ್ಟು ಜಾಗವಿದ್ದರೆ ನನ್ನ ಹೊಟ್ಟೆಯಲ್ಲಿ ಇನ್ನೆರಡು ಅಂಬೊಡೆ ಹೊಡೆಯುತ್ತಿದ್ದೆನಲ್ಲೋ! ಆಹಾ, ಆ ಅಂಬೊಡೆ ಎಷ್ಟು ಸೊಗಸಾಗಿತ್ತು! ಲೇಹವಂತೆ ಲೇಹ! ಗಜ್ಜುಗದಷ್ಟು ಜಾಗವೆಲ್ಲಿ ತರಲಿ?" ಅಂದನಂತೆ. ಅಂಥವರು ನಾವು; ಮಿತಿ ಇಲ್ಲ, ವಿವೇಚನೆಯಿಲ್ಲ; ಏನಾದರೂ ಸಿಕ್ಕಿತು ಅನ್ನಿ, ಆಸ್ಪದವಾಯಿತು ಅನ್ನಿ, ಅಂತೇ ಗಟ್ಟಿಸುವೆವು. ಮಿತಿ ಮೀರಿ ಭೋಗಿಸಲೆಳಸುವೆವು. ತತ್‌ಪರಿಣಾಮವಾಗಿ ಏನಾದರೂ ಒಂದು ಬೇನೆ ಬಂತು ಅನ್ನಿ. ಅಕೋ, ಉಂಡಾಡಿಯಂತೆ ಜಗುಲಿಯ ಮೇಲೆ ಉರುಳಾಡುವುದು. ಸಹನೆಯಿಲ್ಲ, ಹತೋಟಿಯಿಲ್ಲ. ಆ ಹಾಳು ಚಪಲಾ ರೀ! ನಾಲಿಗೆಯು ಜಠರಕ್ಕೆ ಕೇವಲ ಆಹಾರವನ್ನು ಒಪ್ಪಿಸುವ ಇಂದ್ರಿಯ. ಇದೇನು ಆಹಾರ ಪಚನ ಮಾಡುವುದಿಲ್ಲ, ಜೀರ್ಣಿಸಿ ವಿನಿಯೋಗಿಸುವುದಿಲ್ಲ. ಆಹಾರವನ್ನು ಎಲೆಗೆ ಬಡಿಸುವ ಸೌಟನಂತೆ. ಬಡಿಸುವ ಸೌಟಿಗೆ ಖಾರದ ಸಾಂಬಾರಾದರೇನು? ಸಿಹಿ ಸೀಖಂಡ್ ಪಾಯಸವಾದರೇನು? ಎರಡೂ ಸಮನೆ. ಎರಡನ್ನೂ ಎಡೆಗೆ ಒಪ್ಪಿಸಿಬಿಡುತ್ತದೆ. ನಾಲಗೆಯೂ ಬಡಿಸುವ ಸೌಟನಂತಿರಬೇಕು. ಏನು ತಿಂಡಿ ತಿಂದರೂ ಅದರ ರುಚಿ, ಚಪಲಕ್ಕೆ ಹೋಗಬಾರದು. ಎಷ್ಟು ಬೇಕೋ, ಎಷ್ಟು ದೇಹಕ್ಕೆ ಆರೋಗ್ಯವೋ ಅಷ್ಟೇ ಜಠರಕ್ಕೆ ಒಪ್ಪಿಸಬೇಕು. ಜಠರ ಭರ್ತಿಯಾಗಿ, ಬೇಡವೆಂದು ತೇಗಿ (ರೇಗಿ ಹೇಳುವ ಜಠರಭಾಷೆ, ತಿಂದು ತೇಗುವುದು ಜಾಸ್ತಿಯಾಯಿತು,

ಇನ್ನು ಬೇಡವೆಂದು) ಹೇಳಿದರೂ ನಾಲಿಗೆ ತನ್ನ ರುಚಿಭೋಗಕ್ಕಾಗಿ ಇನ್ನೂ ತಿಂದು ಜಠರಕ್ಕೆ ತುಂಬುವುದು, ಇದು ಆಗಬಾರದು. ನಾಲಿಗೆಯಲ್ಲಿ ರುಚಿ ಹೋದರೂ ಒಳಗಿನ ಚಪಲ ಪೋಗದು. ಕೈಲಾಗದು, ತಿನ್ನಲು ಶಕ್ತಿಯಿಲ್ಲ, ಭೋಗಿಸುವುದಕ್ಕೆ ತಾಖತ್ತಿಲ್ಲ, ದೇಹ ನಿರಾಹಾರವಾಗಿದೆ (ಆಹಾರವೆನ್ನುವುದು ಭೋಗ್ಯವಸ್ತುಗಳನ್ನೆಲ್ಲ ಸೂಚಿಸುವ ಪದ), ವಿಷಯಗಳನ್ನು ಗ್ರಹಿಸುವುದರಲ್ಲಿ ಅಸಮರ್ಥನಾಗಿ ಭೋಗಿಸುವ ಅವಕಾಶವಿಲ್ಲದೆ ಪ್ರಾಯಶಃ ಬೇಡ ಎಂದು ಹಿಂತಿರುಗಬಹುದು; ಇಂದ್ರಿಯಗಳು ವಿಷಯಾದಿಗಳ ಭೋಗದಲ್ಲಿ ನಿವೃತ್ತಿಯಾಗಬಹುದು; ಆದರೂ ವಿಷಯ ಭೋಗಾಕಾಂಕ್ಷೆ ಮನಸ್ಸಿನಲ್ಲಿರದೆ ಹೋಗುವುದಿಲ್ಲ. ಜೀವದಾನವೆಲ್ಲ ಮುಗಿದು ನಿಶ್ಯಕ್ತನಾದನೆಂದು ಜೀತದಿಂದ ನಿವೃತ್ತಿ ಮಾಡಿರಬಹುದು. ನಿಶ್ಯಕ್ತನೆಂದೇನೋ ನನಗೂ ವೇದ್ಯವಾಗಿಯೇ ಇದೆ. ಆದರೆ ಅಧಿಕಾರಲಾಲಸೆಯಿಂದ, ಹಿಂದಿನಿಂದ ಅನುಭವಿಸಿ ಅನುಭವಿಸಿ, ಆ ಭೋಗಲಾಲಸೆ ಬಿಡಲಾರದೆ, ಶಕ್ತಿ ಇಲ್ಲದಿದ್ದರೂ ಇನ್ನೂ ಜೀತಕ್ಕೆ ಆಸೆ. ದುಡಿಯಲು ಶಕ್ತಿ ಇಲ್ಲ, ಆದರೂ ಕಣ್ಣೀರು ಹಾಕಿಯೇ ನಿವೃತ್ತಿಯಾದಾಗ ಅಧಿಕಾರಪೀಠ ಬಿಟ್ಟು ಬರುವುದು. ರುಚಿಸದೆಹೋದರೂ, ಒಳರಸ ಅನುಭವಿಸಬೇಕೆಂಬ ಆಕಾಂಕ್ಷೆ ಬಿಡದು. ಈ ಒಳರಸ ನಷ್ಟವಾಗದೆ ಆಗುವ ಇಂದ್ರಿಯನಿಗ್ರಹ ಕುಂಟುನಿಗ್ರಹ, ನಪುಂಸಕನ ಇಂದ್ರಿಯನಿಗ್ರಹದಂತೆ. ಪುರುಷೇಂದ್ರಿಯಗಳು ಆರೋಗ್ಯದಿಂದ ಅಭಿವೃದ್ಧಿಯಲ್ಲಿರಬೇಕು, ಆಗ ನಿಗ್ರಹ ಮಾಡಬೇಕು. ಆಗ ಆಗುವ ವಿಕಾಸ, ಬುದ್ಧಿ ಸ್ಫೂರ್ತಿ, ಜ್ಞಾನವಿಲಾಸ ನೋಡಿ. ಆದರೆ ಆ ಒಳರಸ ಕಾಂಕ್ಷೆ ಯಾವಾಗ ನಷ್ಟವಾಗುತ್ತೆಂದರೆ 'ಪರಂ ದೃಷ್ಟ್ವಾ'; ಆತ್ಮದರ್ಶನವಾದಾಗ, ಆಗ ಪುನಃ ಆ ಚಪಲ ತಲೆಹಾಕದೆ ಮಾಯವಾಗುತ್ತದೆ.

ಒಬ್ಬ ಅನುಕೂಲಸ್ಥ ತನ್ನ ಮನೆಯಲ್ಲಿ ತನ್ನ ಆಪ್ತ ಸ್ನೇಹಿತರೊಡನೆ ದಿನಾ ಇಸ್ಪೇಟು ಆಟದಲ್ಲಿ ವಿಹರಿಸುತ್ತಿದ್ದ. ಅವರು ತಪ್ಪದೆ ಇವನ ಆಸರೆಗೆ ಬರುವರು. ಅವರಲ್ಲಿ ಹಣವಿಲ್ಲದಿದ್ದರೆ ದ್ಯೂತಕ್ಕೆ ಬಂಡವಾಳ ಕೊಡುವ, ಹಸಿದು ಬಂದಿದ್ದರೆ ತಿಂಡಿ ಕಾಫಿ ಕೊಡುತ್ತಿದ್ದ. ವಿನೋದವಾಗಿ ಆರು ಜನ (ಆರು ಕೈಯಾಟ ಚೆನ್ನ) ಸತತವಾಗಿ ಆಟವಾಡಿಕೊಂಡು ಖುಷಿಯಾಗಿದ್ದರೂ, ಒಂದು ದಿನ ಕಾರಣಾಂತರದಿಂದ ಜುಗುಪ್ಸೆಯಾಗಿ, ಐವರು ಮಿತ್ರರೂ ಆಟಕ್ಕೆಂದು ತವಕಪಟ್ಟುಕೊಂಡು ಸಮಯಕ್ಕೆ ಸರಿಯಾಗಿ ಹಾಜರಾದಾಗ, ಮನೆಯವ ಹೇಳಿದ:

"ಇವೊತ್ತು ಆಟಕ್ಕೆ ಮನಸ್ಸಿಲ್ಲ, ಆಸ್ಪದವಿಲ್ಲ. ಆಟಕ್ಕೆ ಇವೊತ್ತು ಬರಬೇಡಿ, ಹೋಗಿ" ಎಂದು. ಎಷ್ಟೋ ಖಿನ್ನವದನರಾಗಿ ಸಪ್ಪೆಮುಖ ಹಾಕಿಕೊಂಡು ಐವರು ಮಿತ್ರರೂ ಪೊರಟುಹೋದರು. ವಿಹಾರಕ್ಕೆ ಆಸರೆ ಇಲ್ಲ, ಆಸ್ಪದವಿಲ್ಲ. ಏನು ಮಾಡುವುದು? ಮಾರನೇ ದಿನ ಆ ಸಮಯಕ್ಕೆ ಸರಿಯಾಗಿ ಆಟಕ್ಕೆ ಹಾಜರಾದರು. ಆಸರೆ ಸ್ನೇಹಿತ ಆವೊತ್ತೂ 'ಬೇಡ' ಎಂದ. ಈ ಐವರು ದರವೇಸಿಗಳಿಗೆ ತಾವಾಗೇ ಆಟವಾಡಿಕೊಂಡಿರುವದಕ್ಕೆ ಆಸ್ಪದ ಮನೆಯೇ ಠಿಕಾಣೀನೆ? ಬಂಡವಾಳವೇ ಏನೂ ಇಲ್ಲ. ಆ ಬಂಡವಾಳದ ಮಿತ್ರನನ್ನೆ ನಂಬಿ ಕೊಂಡಿರಬೇಕು. ಪುನಃ ಹೋದರು. 'ಬೇಡರೋ, ಇವತ್ತೂ ನಂಗೆ ಯಾಕೋ ಬೇಕಿಲ್ಲಾ' ಅಂದ. ಮೂರನೇ ದಿನವೂ ಮರುಮಾತೇ ಇಲ್ಲ. ಆಗ ಈ ಐವರು ಬೇಜಾರಾಗಿ "ಥೂ, ಇವನೇಕೋ ಪ್ರಯೋಜನವೇ ಇಲ್ಲ. ಇವನ ಜೊತೆಗೆ ಹೋಗಿ ನಮಗೆ ಆದಾಯವಿಲ್ಲ. ಆಟವಿಲ್ಲ, ಬಿಡ್ರೊ" ಅಂತ ಅವನಲ್ಲಿಗೆ ಹೋಗೋದೇ ಬಿಟ್ಟುಬಿಟ್ರು. ಕೆಲವು ದಿನ ಆಟದ ಉಲ್ಲಾಸವಿಲ್ಲದೆ ಇದ್ದ ಸ್ನೇಹಿತನಿಗೆ ಅನಂತರ ಚಟ ಹುಟ್ಟಿತು. ಚಪಲದ ಮೇಲೆ ಹೋದ, ಹುಡುಕಿ ಕೊಂಡು ಆ ಐದು ಜನ ಮಿತ್ರರನ್ನು ಕರೆತರೋಕೆ. 'ಬನ್ರೊ, ಮನೇಲಿ ಎಲ್ಲಾ ಸಿದ್ಧಮಾಡಿದ್ದೀನಿ. ಹೊಸ ಮೇಜಿನ ಹೊದಿಕೆ, ಹೊಸ ಪ್ಯಾಕು, ಕಾಸು ಕೊಡು ತ್ತೀನಿ, ತಿಂಡಿ ಕಾಫಿ, ಸಿಗರೇಟು ತರಿಸಿದ್ದೀನಿ, ಬನ್ನಿ, ಬನ್ನಿ" ಅಂತ ಕರೆದ. ಆಗ ಅವರಂದ್ರಂತೆ 'ಹೋಗೋ, ನಮಗೆ ಆಟ ಬೇಕಾದಾಗ ಮಾತ್ರ ನಾವು ದಮ್ಮಯ್ಯ ಅಂತ ನಿನ್ನ ಬಾಗಿಲಿಗೆ ಬಂದ್ರೂ ಹೊಡೆದಟ್ಟಿದೆ. ನಿಂಗೆ ಬೇಕಿರಲಿಲ್ಲ. ಈಗ ನಿಂಗೆ ಬೇಕಾಗಿದ್ರೆ ನಾವು ಬರುತ್ತೇವೊ? ಅಷ್ಟು ಬಿಟ್ಟೇನೋ! ಹೋಗ್' ಎಂದು ಹಿಂದಕ್ಕೆ ಕಳುಹಿಸಿಯೇಬಿಟ್ಟರಂತೆ. ಪೆಚ್ಚುಮುಖ ಹಾಕಿಕೊಂಡು ಬಂದೇಬಿಡಬೇಕಾಯಿತಂತೆ ನಮ್ಮ ಸನ್ಮಿತ್ರ. ನೋಡಿ, ಹಾಗೇ ನಮ್ಮ ಪಂಚೇಂದ್ರಿಯಗಳ ಮತ್ತು ಮನಸ್ಸಿನ ವಿಲಾಸದ ನಿತ್ಯದ ಆಟ. ಮನದೊಡನೆ ಕೂಡಿ ಅವನ ಬಂಡವಾಳದ ಶಕ್ತಿಯಲ್ಲಿ ತಮ್ಮ ಶಕ್ತಿ ಪುಷ್ಟೀಕರಿಸಿಕೊಂಡು ಸತತವೂ ಏನು ಆಡುತ್ತವೆ? ಆಡಬಾರದ ಆಟಗಳನ್ನೆಲ್ಲ, ದ್ಯೂತ, ಮೋಸ, ಕಪಟ, ಕೃತ್ರಿಮವಿಲಾಸಗಳು, ಮನಸ್ಸಿಗೆ ಬೇಡವಾದರೆ ಮನ ಬಿಗಿಹಿಡಿದು ಅವುಗಳೊಡನೆ ಆಟವಾಡಲೊಲ್ಲದೆ ಹೋದರೆ, ಆ ಇಂದ್ರಿಯಗಳೇನು ಆಡ್ಯಾವು? ಅವಕ್ಕೆ ಆಶ್ರಯವೆಲ್ಲಿ? ಅವಕ್ಕೆ ಬಂಡವಾಳವೆಲ್ಲಿ? ಕಣ್ಣು ನೋಡಿದರೂ ಕಿವಿ

ಕೇಳಿದರೂ ಮನಸ್ಸಿನ ಮಿಳನವಿಲ್ಲದಿದ್ದರೆ ನೋಟವೆಲ್ಲಿ? ಕೇಳುವದೆಲ್ಲಿ? ಕೇಳಿಯೆಲ್ಲಿ? ಮನಸ್ಸು ಅವಕ್ಕೆ ಪ್ರೋತ್ಸಾಹ ಕೊಡದಿದ್ದರೆ ಅವುಗಳೇನು ಆಟವಾಡ್ಯಾವು? ಆಟವೇ ನಿಲ್ಲಬೇಕಾಗುತ್ತದೆ. ಅದೇ ಇಂದ್ರಿಯ ನಿಗ್ರಹ. ಅವುಗಳ ಆಟವನ್ನು ನಿಲ್ಲಿಸುವುದು. ಆದರೆ ಮನೋನಿಗ್ರಹವೆಂತು? ಮನಸ್ಸು ತಾನಾಗಿ ವಿಲಾಸಗಳಿಗೆ ಸೋತು ಆ ವಿಲಾಸಗಳನ್ನು ಅನುಭವಿಸಬೇಕೆಂಬ ಕಾಂಕ್ಷೆಹುಟ್ಟಿ ಇಂದ್ರಿಯಗಳನ್ನು ಸಹಕಾರಕ್ಕೆ ಕರೆದರೂ ಅವು ತಾವೇ ಸನ್ಮತಿಸವೆ ಆ ಆಟಗಳಿಗೆ ಜೊತೆ ಸೇರದಿರಲು ಒಡಂಬಡದೆ ನಿರಾಕರಿಸಿದರೆ, ಮನಸ್ಸಾದರೂ ಏನಾಟವಾಡೀತು? ಪೆಚ್ಚುಮೋರೆ ಹಾಕಿಕೊಂಡು ಕೂಡಬೇಕಲ್ಲವೆ?

'ವಿನಿವರ್ತಂತೆ' ಎಂದರೆ ಹಿಂದಿರುಗಿ ಹೋಗಿಯೇಬಿಡುವುದು. ಬರೀ ಹೋಗುವುದಾದರೆ ಹಿಂದಿರುಗಿ ಬರಬಹುದೆಂಬ ಚಪಲವಿರಬಹುದು. ಐವರು ಸ್ನೇಹಿತರು ಬಂಡವಾಳ ಮಿತ್ರನಿಗೆ ಹೇಳಿದಂತೆ, ಅವ ಕರೆದರೂ ಬರದೆ ಹೋಗಿಯೇಬಿಟ್ಟು ಸೇರದಿರುವುದು. ಅಂತೇ ಮನಸ್ಸು ಒಂದಾವರ್ತಿ ನಿಯಮದಿಂದ ಹಿಂದೇಟು ಹಾಕಿ ಚಪಲದಿಂದ ಇಂದ್ರಿಯಗಳನ್ನು ವಿಲಾಸಕೇಳಿಗೆ ಕರೆದರೂ ಸತತ ಇಂದ್ರಿಯನಿಗ್ರಹದಿಂದ ಅವಕ್ಕೆ ನಿಗ್ರಹವೇ ಅಭ್ಯಾಸವಾಗಿ ಸಂಪೂರ್ಣವಾಗಿ ಹತೋಟಿಗೆ ಬಂದುಬಿಟ್ಟು, ಮನಬಲಿದರೂ ಇಂದ್ರಿಯಗಳು ನಿಗ್ರಹಶಕ್ತಿಯಿಂದ ಮನದ ಜೊತೆಗೆ ಸೇರದಿರುವಷ್ಟರ ಮಟ್ಟಿಗೆ ದೃಢ ಇಂದ್ರಿಯ ನಿಗ್ರಹ ಸಹಜವಾಗಬೇಕು. ಆಗ ರಾಗನಿವೃತ್ತಿ. ಆಗ ಆತ್ಮ ಸಾಕ್ಷಾತ್ಕಾರ. ನಿಗ್ರಹವೇ ಸಹಜಾವಸ್ಥೆ. ಇಂದ್ರಿಯನಿಗ್ರಹದಿಂದ ಮನೋನಾಶವೂ ಪ್ರಾಪ್ತಿ. ಸತತವೂ ಇಂದ್ರಿಯನಿಗ್ರಹದಿಂದ ವಾಸನಾಕ್ಷಯವಾಗಿ, ಮನೋಲಯವಾಗಿ, ಸಂಕಲ್ಪನಾಶವಾಗಿ, ವೃತ್ತಿಹೀನವಾದಾಗ, ನಾನು, ನನ್ನದು ಹೋಗುತ್ತೆ. ತಾನೇತಾನಾಗಿ ಸಚ್ಚಿದಾನಂದಸ್ವರೂಪನಾಗುತ್ತಾನೆ. ಪರಮಾತ್ಮನಲ್ಲಿ ಐಕ್ಯ, ಪರಮಶಾಂತಿ.

ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ||
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ||೬೦||

ಹೀಗೆ ಆತ್ಮಶಾಂತಿಗಾಗಿ ಇಂದಿಯನಿಗ್ರಹ ಅವಶ್ಯಕ. ಏಕೆಂದರೆ ಎಂಥಾ ವಿವೇಕಿಯಾಗಲಿ, ಎಷ್ಟೇ ಪ್ರಯತ್ನಮಾಡುತ್ತಿರಲಿ, ಅಂತಹವನ ಮನಸ್ಸು ಕೂಡ ಶ್ರೋತ್ರಾದಿ ಇಂದ್ರಿಯಗಳ ಬಲಾತ್ಕಾರದಿಂದ ವಿಕಾರವನ್ನುಂಟುಮಾಡು

ವುವು. ಇಂದ್ರಿಯಗಳು ಬಹಳ ಬಲಯುತವಾದುದಕ್ಕೆ ಅವನ್ನು ಉಪನಿಷತ್ತು ಗಳಲ್ಲಿ ಅಶ್ವಗಳಿಗೆ ಹೋಲಿಸಿದೆ. ಅಶ್ವಗಳಿಗೆ ಕಡಿವಾಣ, ಕಡಿವಾಣ ರಥಿಕನ ಕೈಲಿ, ರಥಿಕ ನಡಸಿದಲ್ಲಿಗೆ ರಥ ಸಾಗುತ್ತದೆ. ಅಶ್ವಗಳು ಹೋದಲ್ಲಿಗೆ ರಥ ಸಾಗಬಾರದು. ಅಶ್ವಗಳು ಕಡಿವಾಣದ ಹತೋಟಿಯಲ್ಲೂ ಕಡಿವಾಣದ ಲಗಾಮು ರಥಿಕನ ಕೈಲೂ ಇರಬೇಕು. ಅಶ್ವಗಳು ಕಡಿವಾಣದ ಲಗಾಮಿನ ಬಿಗಿಯನ್ನು ಮೀರಿರಬಾರದು. ಒಂದು ಸುಂದರವ್ಯಕ್ತಿ ಗೋಚರಕ್ಕೆ ಬಿದ್ದೊಡನೆಯೆ, ಕಣ್ಣುಗಳು ನೋಡಿ ದಣಿಯಬೇಕೆಂದು ದೃಷ್ಟಿ ಆ ಕಡೆ ಓಡುತ್ತದೆ. ಎಷ್ಟು ತಡೆದರೂ ಗಮನವಲ್ಲೇ!

ಶುಕಮಹರ್ಷಿಯು ಯೌವನಭರಿತನಾಗಿ ಮುಂದೆ ನಡೆಯುತ್ತಿದ್ದಾಗ ಅವನ ತಂದೆ ವೃದ್ಧವ್ಯಾಸನು ಅವನ ಹಿಂದೆಯೇ ನಡೆದುಹೋಗುತ್ತಿದ್ದನಂತೆ. ಒಂದಾನೊಂದು ಪ್ರಾತಃಕಾಲದಲ್ಲಿ ಗೋಪಿಯರು ಶುಕನು ಹೋದಾಗ ತಮ್ಮ ನಗ್ನತೆಯ ಭಾವವನ್ನೇ ಮರೆತು ಕ್ರೀಡಿಸುತ್ತಲೇ ಇದ್ದರು. ಶುಕನು ಅತ್ತ ಕಡೆ ದೃಷ್ಟಿ ಧಾವಿಸದೆ ತದೇಕಧ್ಯಾನದಲ್ಲಿ ತಪೋನಿಷ್ಠನಾಗಿ ಮಾರ್ಗ ನೋಡುತ್ತ ನಡೆದನು. ಹಿಂದೆ ಬರುತ್ತಿದ್ದ ವ್ಯಾಸನು ಹತ್ತಿರನಾಗುತ್ತಲೇ ಆ ಗೋಪಿಯರು ಲಜ್ಜೆಯಿಂದ ವಸ್ತ್ರಾಚ್ಛಾದನ ಮಾಡಲು ಕೆಲವರು, ಮುದುರಿಕೊಳ್ಳಲು, ಮುಳುಗಿಕೊಳ್ಳಲು ಕೆಲವರೂ ಯತ್ನಪಟ್ಟಾಗ ವ್ಯಾಸರು ಆ ಕನ್ಯೆಯರನ್ನು ಪ್ರಶ್ನಿಸಿದರಂತೆ: 'ಏನಿದಾಶ್ಚರ್ಯ? ನಾನು ವಯೋವೃದ್ಧ, ಜ್ಞಾನವೃದ್ಧ. ನನ್ನನ್ನು ಕಂಡರೆ ಲಜ್ಜೆ ಏಕೆ? ನಾನು ನೋಡಿದರೆ ನಾಚಿಕೆ ಏನು? ಆದೇ ಇನ್ನೂ ಪ್ರಾಯದಲ್ಲಿರುವ ಸುಂದರ ಮಗ ಶುಕಮುನಿ ಈ ಮಾರ್ಗ ಹಾಯಿದಾಗ ನಿರ್ಲಜ್ಜಿತರಾಗಿ, ನಿಷ್ಕಪಟದಿಂದ, ನಿರ್ಬಾಧಿತರಾಗಿ ನಗ್ನರಾಗಿಯೇ ಕ್ರೀಡಿಸುತ್ತಿದ್ದಿರಿ. ಇದು ಅಲ್ಲಟಪಲ್ಲಟವಲ್ಲವೆ?' ಎಂದು. ಅದಕ್ಕೆ ಆ ಕನ್ಯೆಯರು ಹೇಳಿದರಂತೆ: "ಆ ಬಾಲಬ್ರಹ್ಮಚಾರಿ ಜಿತೇಂದ್ರಿಯ ಶುಕನು ಮಗುವಿನಂತೆ ಮನವುಳ್ಳವನು. ಯೌವನದಲ್ಲೂ ಕಾಮವಾಸನೆಯೇ ಇಲ್ಲದೆ ಇಂದ್ರಿಯ ಚಾಪಲ್ಯವಿಲ್ಲದವನು. ಆತನು ನೋಡುವ ಕಾಂಕ್ಷೆ ಕೂಡ ಇಲ್ಲದೆ ಹೋದನು. ಆದರೆ ನೀವಾದರೋ ವಯೋವೃದ್ಧರಾದರೂ, ಜ್ಞಾನವೃದ್ಧರಾದರೂ, ಹುಣಿಸೇಮರ ಮುದಿಯಾದಂತೆ ಹುಳಿ ಹೋಗದು. ನೀವು ಗೃಹಸ್ಥಾಶ್ರಮವನ್ನನುಭವಿಸಿ ಸ್ತ್ರೀವ್ಯಕ್ತಿತ್ವ ಬಲ್ಲಿರಿ.' (ಸಾಧಾರಣ ಹುಲಿಗೂ ನರಭಕ್ಷಕ ಹುಲಿಗೂ ಇರುವ

ಭೇಪವಂತೆ. ನರಭಕ್ಷಕ ಒಂದಾವರ್ತಿ ನರಮಾಂಸವನ್ನು ತಿಂದು ಅದರ ರುಚಿ ಕಂಡ ಮೇಲೆ, ನರಮಾಂಸಾಹಾರಕ್ಕಾಗಿ ನರರನ್ನೇ ಹುಡುಕಿಕೊಂಡು ತಿರುಗುವುದು, ಜೀವಭಯ ಕೂಡ ಇಲ್ಲದೆ ನರನ ಮೇಲೆ ಬೀಳುವುದು, ಈ ಹೆಚ್ಚಿನ ರುಚಿ ಮೆಚ್ಚಿನ ರುಚಿಯಾಗಿ ಇವರ ಕಾಂಕ್ಷೆ ಹೆಚ್ಚುವುದು.) ಅಂತೆಯೇ ಒಂದಾವರ್ತಿ ಸ್ತ್ರೀಸಂಗ ಸುಖವನ್ನು ಅನುಭವಿಸಿದವನಿಗೆ ಅದರ ಸುಖ ರಕ್ತಗತವಾಗಿ ಆ ವ್ಯಾಮೋಹದ ಬಲೆ ಬಲವಾಗುವುದು. ಅದಕ್ಕಾಗಿಯೇ ಸಂನ್ಯಾಸ ಸ್ವೀಕಾರಕ್ಕೆ ಕೂಡ ಬಾಲಬ್ರಹ್ಮಚಾರಿಯಾದವನೇ ಸಂನ್ಯಾಸವನ್ನು ನೇರಾ ಸ್ವೀಕರಿಸಬೇಕೆಂಬ ನಿಯಮ. ಸಂನ್ಯಾಸಾಶ್ರಮದಲ್ಲಿ ಕಠಿಣ ನಿತ್ಯ ನೈಮಿತ್ತಿಕ ಕರ್ಮಗಳಿಗೆ ಅನುಕೂಲವಾಗುವುದು. ಗೃಹಸ್ಥಾಶ್ರಮದಿಂದ ಸಂನ್ಯಾಸಿಯಾದವನಿಗಿದ್ದ ತೊಡಕುಗಳೆಲ್ಲ ಅವನನುಭವಿಸಿ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಿರುವ ಕಾಮವಾಸನೆಯಿಲ್ಲ, ಆ ಸುಖದ ಪರಿಣಾಮದ ಲಾಭನಚಿಂತನೆಗಳಿಲ್ಲ. ಹಾಗೆ ನೀವು ಪುರುಷಸ್ತ್ರೀಭೇದವುಳ್ಳವರು. ಆ ಭೇದಜ್ಞಾನವೇ ಇಲ್ಲದವರು ಶುಕರು. ನೀವಾದರೋ ಆಗಲೇ ನಮ್ಮನ್ನೂ ನಮ್ಮ ಲಜ್ಜಾಭಾವವನ್ನೂ ಅವಲೋಕಿಸಿರುವಿರಿ, ಆದುದರಿಂದಲೇ ನಿಮ್ಮಿಂದ ನಾವು ಲಜ್ಜಿತರಾದೆವು, ಬಾಧಿತರಾದೆವು. ಅವರ ಮುಂದೆ ಆ ಭಾವನೆಯೇ ಬರಲಿಲ್ಲ" ಎಂದಾಗ ತಲೆಯ ಮೇಲೆ ಹೊಡೆದಂತಾಗಿರಬೇಕು ವ್ಯಾಸರಿಗೆ. ತಲೆ ತಗ್ಗಿಸಿಕೊಂಡು, ನೋಟ ಹೊರಳಿಸದೆ, ಚಪಲವನ್ನು ಅಡಗಿಸಿಕೊಂಡು ನಡೆದಿರಬೇಕು. ಅಂಥ ಜಿತೇಂದ್ರಿಯರಿಗೇ ಇಂದ್ರಿಯಗಳು ಬಲಾತ್ಕಾರವಾಗಿ ವಿಕಾಸಮಾಡಬಲ್ಲವುಗಳಾದರೆ ಮಿಕ್ಕವರ ಪಾಡೇನು?

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥

ಆದುದರಿಂದ ಇಂದ್ರಿಯಗಳು ಹೋದ ಕಡೆಗೆ ಮನಸ್ಸು ಎಳೆಯದಂತೆ, ಇಂದ್ರಿಯಗಳನ್ನು ವಶಪಡಿಸಿಕೊಂಡು, ನಿಗ್ರಹಿಸಲ್ಪಟ್ಟ ಮನಸ್ಸುಳ್ಳವನಾಗಿ ಎಲ್ಲವನ್ನೂ ಸಂಯಮ ಮಾಡಿಕೊಂಡು, 'ಮತ್ಪರ'ನಾಗಿ, ಯುಕ್ತರೀತಿಯಿಂದ ಇರುವವನ ಪ್ರಜ್ಞೆ ಸ್ಥಿರವಾಗಿರುತ್ತೆ. ಎಲ್ಲ ಪ್ರಯತ್ನಕ್ಕೂ ಸಾಧ್ಯವಾಗುವಪಕ್ಷೆ ಚಿಕಿತ್ಸೆ 'ಮತ್ಪರ'ನಾಗುವುದು. ಇದು ವಿರೋಧಚಿಂತನ ನ್ಯಾಯ. ಕಾಮನಾನಿವೃತ್ತಿಗೋಸುಗ ಇಂದ್ರಿಯಗಳನ್ನು ಅತ್ತಕಡೆ ಬಿಡದೆ, ಅವಕ್ಕೆ ಬೇರೆ ಕೆಲಸ ಒದಗಿಸುವುದು. ಕೆಲಸವಿಲ್ಲದ ಇಂದ್ರಿಯಗಳಾದರೆ ಆಸಕ್ತಿ ಇಡಲು ಎಡೆಯಿಲ್ಲದೆ ಅತ್ತಿತ್ತ ಪರದಾ

ಡುವುವು. ಕಾಮುಮಾರ್ಗಕ್ಕೆ ಹೋಗಲವಕಾಶವಾಗುವುದು. ಒಂದೆಡೆ ಅಭಾವ ವಿದ್ದರೆ (Vaccum) ತಾನೆ ಅಲ್ಲಿ ಏನಾದರೂ ಸಾಮಗ್ರೀ (ಭಾವ) ತುಂಬ ಲವಕಾಶವಾಗುವುದು. ಅಭಾವಕ್ಕೆ ಮಾರ್ಗವಿಲ್ಲದಂತೆ, ಇಂದ್ರಿಯಗಳಿಗೆ ಬಿಡು ವಿಗೆ ಅವಕಾಶವೇ ಇಲ್ಲದಂತೆ ಭಗವತ್ ಚಿಂತನದಿಂದ ತುಂಬಿಬಿಟ್ಟಿದ್ದರೆ ಆ ಮನಕ್ಕೆ ಅನ್ಯಮಾರ್ಗಕ್ಕೆ ಹೋಗಲಾದರೂ ಎಂತು ಅವಕಾಶ? ಎಲ್ಲಿ ವ್ಯವಧಾನ? ಮನದಲ್ಲಿ ಕಾಮು ಕಿತ್ತೊಗೆದು ಅಲ್ಲಿ ಭಗವತ್‌ಚಿಂತನವನ್ನು ನಾಟಬೇಕು. ಅದು ಬೆಳೆಯಲು ಪೋಷಣೆ ಮಾಡಿದರೆ, ಕಾಮು ಕಳೆ ಬೆಳೆಯಲು ಅವಕಾಶ ತಾನೆ ಎಲ್ಲಿ? ಈ ವಿರೋಧ ಚಿಂತನದಿಂದ ಕಂಸ ಕೃಷ್ಣಮಯನಾದ, ಹಿರಣ್ಯ ಕಶಿಪು ವಿಷ್ಣುಮಯನಾದ. ಭಕ್ತಿ ವಿರೋಧಚಿಂತನವಾದರೂ ದುರುಪಯೋಗ ವಾಗುವುದಿಲ್ಲ. ಏಕೆಂದರೆ ವಿಷಯಧ್ಯಾನಕ್ಕೆ ಇಂದ್ರಿಯಗಳನ್ನು ಬಿಟ್ಟರೆ ಎಷ್ಟು ಅನರ್ಥಪರಂಪರೆಗಳುಂಟಾಗುವುವೆಂದು ಹೇಳುತ್ತಾನೆ. ಇದು ಜಾರುವ ಬಂಡೆ ಯಂತೆ ಅಧೋಪತನಕ್ಕೆ ಅವಕಾಶ.

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥೬೨॥
ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥೬೩॥

ವಿಷಯಧ್ಯಾನ (ಇಂದ್ರಿಯಗಳು ಮನ)–> ವಿಷಯಸಂಗ–> ಕಾಮು ಉದ್ಭವ (೧) ಕ್ರೋಧ, (೨) ಲೋಭ, (೩) ಆಸೆ. ಕಾಮು ತೃಪ್ತಿಪಡಿಸಲವಕಾಶವಿಲ್ಲವಾದರೆ ಕ್ರೋಧ, ತೃಪ್ತಿಪಡಿಸಿದರೆ ಲೋಭ, ಇನ್ನೂ ಬೇಕೆಂಬ ಆಸೆ. ಕಾಮಾಗ್ನಿ ಯನ್ನು ತೃಪ್ತಿಪಡಿಸಲಾಗುತ್ತದೆಯೆ? ಕಾಮಕ್ಕೆ 'ಅನಲ'ವೆಂದಿದ್ದಾರೆ. ಅನಲಂ ಎಂದರೆ ಸಾಕೆಂಬುದು ಎಂದಿಗೂ ಇಲ್ಲ. ಬೆಂಕಿಯಂತೆ ಇನ್ನೂ ವೃದ್ಧಿಯಾಗು ತ್ತದೆ. ಕಾಮುವನ್ನು ಪೋಷಿಸಿ ತೃಪ್ತಿಪಡಿಸುತ್ತೇನೆ ಎನ್ನುವನಾದರೂ ಉಂಟೆ! ಕ್ರೋಧವಲ್ಲಾಗಲಿ ಲೋಭವಲ್ಲಾಗಲಿ ಪರಿಣಮಿಸಿದ ಮೇಲೆ

–> ಸಂಮೋಹ (ಅವಿವೇಕ)–> ಸ್ಮೃತಿವಿಭ್ರಮ: (ಮರವೆ)–> ಬುದ್ಧಿನಾಶ (ಬುದ್ಧಿಯನ್ನು ಕಾಪಾಡಲು ಮರವೆಯಾಚ್ಛಾದನೆ)–> ಸರ್ವನಾಶ(ಪ್ರಣಶ್ಯತಿ) ಕಠೋಪನಿಷತ್ತಿನಲ್ಲಿ ಹೇಳುವಂತೆ "ಪರಾಙ್ಮುಖಾನಿ" ಮನುಷ್ಯನ ಇಂದ್ರಿಯ ಗಳಿಗೆ ಆತ್ಮದರ್ಶನವಿಲ್ಲ, ಬಹಿರ್ದರ್ಶನವಷ್ಟೆ. ಹೊರಗಿನ ಸೃಷ್ಟಿಸೌಂದರ್ಯ

ಅವನ್ನು ಸೆಳೆಯುತ್ತದೆ. ವಸ್ತುತಃ ಸೌಂದರ್ಯವಾಗಲಿ ಅಸೌಂದರ್ಯವಾಗಲಿ ಬಾಹ್ಯವಸ್ತುಗಳಲ್ಲಿಲ್ಲ. ಅಲ್ಲಿರುವುದು ಬರೀ ಆಕಾರ. ತದ್ವಿಷಯವಾದ ಅನುಕೂಲಪ್ರತಿಕೂಲವೃತ್ತಿ ಚಿತ್ತಕ್ಕೆ ಇಂದ್ರಿಯಗಳಿಂದ ಉಂಟಾಗುತ್ತೆ. ಚಿತ್ತ ಇಂದ್ರಿಯಾಧೀನವಾಗಿದೆ. ಇಂದ್ರಿಯ, ಮನ, ಬುದ್ಧಿ, ಇವು ಕಾಮನೆಗೆ ಆಶ್ರಯ ಕೊಡುವ ಮೂರು ಕೋಟೆಗಳು. ಇಂದ್ರಿಯಗಳು ಎಲ್ಲಕ್ಕೂ ಹೊರಗಿನ ಕೋಟೆ. ವಿಷಯಗಳ ಪ್ರಹಾರ ಮುಂಚೆ ಇಂದ್ರಿಯಗಳ ಮೇಲೆ. ಹೊರ ಕೋಟೆಯಲ್ಲಿ ಯುದ್ಧ ಆರಂಭ ಇಂದ್ರಿಯಗಳೇ ಮಾಡಬೇಕು. ಇಂದ್ರಿಯಗಳು ಗೆಲ್ಲದೆ ಮಡಿದರೂ ಬಾಧಕವಿಲ್ಲ. ಇಂದ್ರಿಯಗಳೇ ವಿಷಯಗಳೊಡನೆ ಸೇರಿಬಿಟ್ಟರೆ ವಂಚನಾವಳ (Vth. column—Quisling) ವಾಗಿ ಪರಿಣಮಿಸಿ ಒಳಕೋಟೆಯಾದ ಮನದ ಮೇಲೆ ಪ್ರಹಾರ. ಮನ ಬುದ್ಧಿಯ ವಶವಿಲ್ಲದೆ ಇಂದ್ರಿಯ ವಿಷಯಗಳ ಸೆಳತಕ್ಕೆ ಬಿದ್ದರೆ ಬುದ್ಧಿ ಕುಂಠಿತವಾಗಿ ಈ ವೃತ್ತಿ ಕ್ಷೋಭೆಗೆ ಕಾರಣವಾಗುತ್ತೆ. ವಿಷಪರಂಪರೆಗೆ ಕಾರಣವಾಗುತ್ತೆ. ವಿಷಪರಂಪರೆಗಳಿಂದ ಪಾರಾಗಬೇಕಾದರೆ ಮೊದಲು ವಿಷಯಧ್ಯಾನವನ್ನೂ ವಿಷಯಸುಖಚಿಂತನವನ್ನೂ ಬಿಡಬೇಕು. ಅದೇ ಇದಕ್ಕೆಲ್ಲ ತಳಹದಿ.

> ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
> ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥೬೪॥

ಯಾವಾಗ ವಿಷಯಾಸಕ್ತಿಯೇ ಇಲ್ಲವಾಗುತ್ತೆಯೋ ಆಗ ಚಿಂತಾಂತಃಕರಣನಾಗಿ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು, ರಾಗದ್ವೇಷಾದಿಗಳಿಗೆ ಕಾರಣವಾದ ವಿಷಯಗಳಿಂದ ಹಿಮ್ಮೆಟ್ಟಿ, ಪಾಲಿಗೆ ಬಂದ ವಿಷಯಗಳನ್ನು ಅನುಭವಿಸುತ್ತಾ ಚಿತ್ತಸ್ವಾಸ್ಥ್ಯದಲ್ಲಿರುವನು. 'ಪ್ರಸಾದ' ಎಂಬುದು 'ವಿಷಾದ'ಕ್ಕೆ ವಿರುದ್ಧಪದವಾಗಿ "ಪ್ರಸಾದಮಧಿಗಚ್ಛತಿ" ಎಂದರೆ ವಿಷಾದವಾವುದೂ ಇಲ್ಲದೆ ಪ್ರಸನ್ನಚಿತ್ತನಾಗುತ್ತಾನೆ.

> ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
> ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥೬೫॥

ವಿಷಾದಕ್ಕೆ ಕಾರಣವಾದ ಸರ್ವದುಃಖಗಳೂ ಹಾನಿಯಾಗಿ ಹೋಗಿಬಿಟ್ಟ ಮೇಲೆ ಚಿತ್ತವು ಪ್ರಸನ್ನವಾಗಿ ಬುದ್ಧಿಯು ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲುವುದು. 'ಮತ್ಪರ'ವಾಗಿ ಬಲವಂತದಿಂದ ತಿರುಗಿಸಿದ ಬುದ್ಧಿಯು ಇಂದ್ರಿಯ ಮನ

ದುರ್ವ್ಯಾಪಾರಗಳಿಂದ ತಪ್ಪಿಸಿಕೊಂಡು ಅಲ್ಲಿಟ್ಟದ್ದು ಅಲ್ಲೇ ಸ್ಥಿರವಾಗಿ ನಿಲ್ಲುತ್ತದೆ. ಇದೇ ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿಸುವಿಕೆ. ಮುಂಚೆ ಬಲವಂತವಾಗಿ ನಿಲ್ಲಬೇಕಾದ ಗುರಿ ನಿಶ್ಚಯಿಸಿ, ಕ್ರಮಕ್ರಮವಾಗಿ ತಲ್ಲೀನವಾಗಿ ಅದರೊಡನೆ ಒಂದಾಗುವಂತೆ ಮಾಡಬೇಕು. ಇತರ ವಿಷಯಾಸಕ್ತಿ ಬಿಡಬೇಕು. ನಾನೇ ಪರವಸ್ತುವನ್ನು ಬಯಸಿ, ಅದಕ್ಕೋಸುಗ ಆತುರನಾಗಿ ಚಿತ್ತ ಕೆಡಿಸಿಕೊಳ್ಳಲಿ? ಅದು ತನ್ನ ಸೊಕ್ಕಿನಲ್ಲಿದೆ. ನಾನೇಕೆ ನನ್ನ ಸೊಕ್ಕಿನಲ್ಲಿರಬಾರದು? ಒಬ್ಬ ಪ್ರೇಮಕ್ಕೆ ಸಿಲುಕಿದವ ತನ್ನ ಪ್ರೇಯಸಿಯ ಉಪೇಕ್ಷೆ ಕಂಡು, ಆಕೆ ನನಗೆ ಒಲಿಯಿಸದ ಮೇಲೆ ಆಕೆ ಎಷ್ಟು ಪ್ರೀತಿಪಾತ್ರಳಾಗಿದ್ದರೂ, ಸುಂದರಿಯಾಗಿದ್ದರೂ ನನಗೇನು? (If She is not fair to me, what care I how fair She be) ಎಂದು ಹಾಡಿದ್ದಾನೆ. ಈ ಪಟ್ಟಿಯನ್ನು ನೋಡಬಹುದು:

| 1 | 2 | 3 | | 4 |
|---|---|---|---|---|
| ಆದಿ— | ಬೀಜ— | ವಿಷಯಚಿಂತನೆ | × | ವಿಷಯಸಂಗವರ್ಜನೆ |
| ಮಧ್ಯ— | ಶಕ್ತಿ— | ಚಿತ್ತಚಲನ | × | ಪ್ರಸನ್ನತೆ. |
| ಅಂತ— | ಫಲಿತ— | ಬುದ್ಧಿನಾಶ | × | ಬುದ್ಧಿಸ್ಥಿರತೆ. |

ಬೀಜಶಕ್ತಿ ಫಲಿತವಾಗಿ, ಆದಿಮಧ್ಯಅಂತವಾಗಿ ಮೂರನೆಯ ಪಟ್ಟಿ ಅಥವಾ ನಾಲ್ಕನೆಯ ಪಟ್ಟಿಯಾಗಿ ಪರಿಣಮಿಸುವುದು. ವಿಷಯಚಿಂತನೆಯಿಂದ ಚಿತ್ತ ಚಲನೆ, ಬುದ್ಧಿನಾಶ; ಇಲ್ಲವಾದರೆ ವಿಷಯಸಂಗವರ್ಜನೆಯಿಂದ ಪ್ರಸನ್ನತೆ, ಬುದ್ಧಿಸ್ಥಿರತೆ. ಒಂದು ಮನೆಯಲ್ಲಿ ಕೋಮಲವಾಗಿ ಬೆಳೆದ ಹೆಣ್ಣಿಗೆ ಅನುರೂಪ ವರನೊಬ್ಬನನ್ನು ಗೊತ್ತುಮಾಡಿ, ಮದುವೆಯಾದನಂತರ ಮೆತ್ತಗೆ, ಕ್ರಮಕ್ರಮ ವಾಗಿ ಗಂಡನ ಮನೆಗೆ ಸೇರಿಸಿ, ಅನಂತರ ಅವನೊಡನೆ ಒಂದಾಗುವಂತೆ ಮಾಡುವಂತೆ, ಮದುವೆಯಾದ ನವವಧುವಿಗೆ ಈ ಬಾಲ್ಯಬಂಧುಗಳನ್ನು ಬಿಟ್ಟು ಹೋಗಲೇ ಇಚ್ಛೆಯಿಲ್ಲದೆ ಪ್ರಥಮತಃ ಅಳುತ್ತ ಕರೆಯುತ್ತ, ಒಡನಾಡುತ್ತಿದ್ದು ಸುಖಸಂತೋಷದಿಂದಿದ್ದ ಬಂಧುಗಳನ್ನು ಬಿಟ್ಟು ಗಂಡನ ಮನೆಗೆ ತಂದೆತಾಯಿ ಯರೇ ಕರೆದುಕೊಂಡು ಹೋಗಿ ಬಿಟ್ಟು, ಕೆಲವು ಕಾಲ ಜೊತೆಗಿದ್ದು ಬರುವಾಗ ಪುನಃ ವಾಪಸ್ಸು ಕರೆತಂದು ಪುನಃ ಕರೆದುಕೊಂಡು ಹೋಗಿ ಕೊಂಚ ಕಾಲ ಒಬ್ಬಳನ್ನೆ ಜೊತೆಯಿಲ್ಲದೆ ಬಿಟ್ಟದ್ದು, ಪುನಃ ಕರೆಸಿಕೊಂಡು ಕಳುಹಿಸುತ್ತಾ ಗಂಡನೊಡನೆ ಸಂಗ ಬೆಳೆಯುತ್ತಾ ಗಂಡಹೆಂಡಂದಿರೊಂದಾಗುತ್ತಾ, ಹೆಣ್ಣನ್ನು

ತಂದೆತಾಯಿ ನೋಡಬೇಕು, ಬಾ ಎಂದು ಗೋಗರೆದರೂ, "ನೀವೇ ಬಂದು ನೋಡಿಹೋಗಿ, ನಾ ಅವರನ್ನು ಬಿಟ್ಟು ಬರಲಾರೆ" ಎಂದು ಹೆಣ್ಣು ಕೂಡ ಖಂಡಿತ ಬರೆಸಂತೆ, ಜೀವಾತ್ಮನು ಪರಮಾತ್ಮನಲ್ಲಿ ಐಕ್ಯ ಮಾಡಬೇಕಾದರೆ ಮೊದಲಲ್ಲಿ, ಈ ಆಟಪಾಟದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಹುಟ್ಟು ಸಹ ವಾಸದಿಂದ ತಪ್ಪಿಸಿ ಮನವನ್ನು ಸೆಳೆದು ಅಲ್ಲಿರಿಸಿ ಕೊಂಚ ಕೊಂಚ ಕಾಲವಾದರೂ ಆತ್ಮಸಂಗದ ರುಚಿ ತೋರಿಸಿ ಬಲವಂತದಿಂದ ಈ ಬಂಧನವನ್ನು ತಪ್ಪಿಸುತ್ತ ಬಂದರೆ, ಅನಂತರದಲ್ಲಿ ಆತ್ಮೈಕ್ಯವಾದ ಮೇಲೆ ಈ ಇಹಸಂಬಂಧದ ವ್ಯಾಪಾರ ವ್ಯಾಮೋಹಗಳಿಗೆ ಕರೆದರೂ ಬರದಂತೆ, ಬಂದರೂ ಬಾರದಂತೆ, ಕ್ಷಣಿಕವಾಗಿರುವಂತೆ ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿಸಿದರೆ ಬದುಕಿರುವಾಗಲೇ ಜೀವನ್ಮುಕ್ತಾವಸ್ಥೆ. ರಮಣನಲ್ಲಿ ರಮಿಸುವ ಕಾಮಿನಿಯಂತೆ "ಪ್ರಸನ್ನಚೇತಸೊ"—ಬುದ್ಧಿಯು ಪರಮಾತ್ಮನಲ್ಲಿ ನಿಂತು ರಮಿಸುತ್ತದೆ. ಹಾಗೆ ಇಂದ್ರಿಯನಿಗ್ರಹ ಮಾಡದವನಿಗೆ ಮೇಲ್ಮೆಟ್ಟಲು ಹತ್ತಲು ಅವಕಾಶವಿಲ್ಲವೆಂಬುದು ಹೇಗೆಂದು ತೋರುತ್ತಾರೆ.

> ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
> ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥೬೬॥

ಆ ಅಭಾವವನ್ನು ತಪ್ಪಿಸಿಕೊಳ್ಳಬೇಕಾದರೆ, ಇಂದ್ರಿಯನಿಗ್ರಹಯುಕ್ತ ಬುದ್ಧಿ (ಆತ್ಮಜ್ಞಾನ)—ಯುಕ್ತಿಭಾವನ (ಆತ್ಮಧ್ಯಾನ ಶಾಂತಿ ಸುಖ ಪರಮಸುಖ) ಈ ಪರಂಪರೆ ಬೇಕು, ಇವು ಹೇಗೆ ತಪ್ಪುವುದೆಂದು "ನಾಸ್ತಿಬುದ್ಧಿ"ಯಿಂದ ಕೈತಪ್ಪಿ ಹೋಗುವ ಕೈವಲ್ಯವನ್ನು ಹೇಳಿದೆ. ಯುಕ್ತಭಾವನೆಯೆನ್ನುವುದು ಬಹು ಮುಖ್ಯ. ಇದನ್ನು ಸ್ವಾರಸ್ಯವಾಗಿ ಭಕ್ತರ ಭಾವನೆಯಲ್ಲಿ ತೋರಿಸಬಹುದು. ಏಕನಾಥನಿಗೆ ತಕ್ಕ ಅನುರೂಪಳಾದ ಹೆಂಡತಿ ಸಿಕ್ಕಿಬಿಟ್ಟಿದ್ದಳು. ಆತ ಭಾವಿಸಿದ್ದ: "ನನ್ನ ಮೇಲೆ ದೇವರಿಗೆ ಎಷ್ಟು ಕೃಪೆ! ಒಳ್ಳೆಯ ಸಹಧರ್ಮಿಣಿಯನ್ನು ದಯಪಾಲಿಸಿ ನನಗೆ ಅವನ ಸೇವೆಮಾಡಲು ಅನುಕೂಲಮಾಡಿದ್ದಾನೆ. ಅವನು ನನ್ನ ಹಿತಚಿಂತಕ" ಎಂದು. ತುಕಾರಾಂಗೆ ತಕರಾರು ಹೆಂಡತಿ ಸಿಕ್ಕಿದ್ದಳು. ಆತ ಭಾವಿಸಿದ್ದ: "ದೇವರಿಗೆ ನನ್ನ ಮೇಲೆ ಎಷ್ಟು ಕೃಪೆ! ಒಳ್ಳೆಯ ಸಹಧರ್ಮಿಣಿ ಸಿಕ್ಕಿದ್ದರೆ ವ್ಯಾಮೋಹಕ್ಕೊಳಗಾಗಿ ಸಂಸಾರದಲ್ಲಿ ಮಗ್ನನಾಗಿ ಬಿಡುತ್ತಿದ್ದೆ. ಈಗ ಈಕೆ ನನಗೆ ಸಂಸಾರದಲ್ಲಿ ವೈರ್ಯಾಗ್ಯ ಬರುವಂತೆ ಮಾಡಿ

ದೇವನನ್ನು ಧ್ಯಾನಿಸಲು ಅನುಕೂಲಮಾಡಿದ್ದಾಳೆ. ದೇವ ನನ್ನ ಹಿತಚಿಂತಕ" ಎಂದು. ದೇವನು ನಮ್ಮ ಪಾಲಿಗೆ ಏನು ಕೊಟ್ಟರೂ ಅದು ನಮ್ಮ ಸದ್ಗತಿಗೆ ಎಂದೂ "ಯೋಗಕ್ಷೇಮಧುರಂಧರಸ್ಯ ಕೃತಿನೋ, ಶ್ರೇಯಃ ಪ್ರದೋದ್ಯೋಗಿನೋ" ಎಂಬ ಶಂಕರರ ಸ್ತುತಿಯಂತೆ ದೇವ ನಮ್ಮ ಯೋಗಕ್ಷೇಮವನ್ನು ಮಧುರವಾಗಿ, ಶ್ರೇಯಸ್ಸಿಗೆ ಬೇಕಾದುದನ್ನೇ ಕೊಟ್ಟು ಕಾಪಾಡುತ್ತಾನೆಂಬ ಭಾವನೆ ಭದ್ರವಾಗಬೇಕು. ಬಾಹ್ಯಾಂತರಗಳಲ್ಲಿಯೂ ವ್ಯಾಪಿಸಿ ನಮಗೆ ಒಳ್ಳಿಯದು ಕೆಟ್ಟದ್ದರ ವಿವೇಚನೆ ಬರುವಂತೆ ಉಪದೇಶ ಮಾಡುತ್ತಿರುವ ದಯಾಕರನೆಂದು ನಂಬಬೇಕು. ಆಗ ಶಾಂತಿ.

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥೬೭॥

ಸ್ವೇಚ್ಛಾಪ್ರವೃತ್ತಿಯಿಂದ ವಿಷಯಗಳಿಗೆ ಎಡೆ ಕೊಡುವ ಮನಸ್ಸನ್ನು ಅನುಸರಿಸಿದರೆ ಸುಂಟರಗಾಳಿಗೆ ಸಿಕ್ಕಿದ ದೋಣಿಯಂತೆ ಅಜಿತೇಂದ್ರಿಯನ ಪ್ರಜ್ಞೆಯು ನಾಶಕ್ಕೊಯ್ಯುವುದು. ಎಷ್ಟು ಸುಂದರವಾದ ಉಪಮಾನ! ಸಮುದ್ರ ಮಧ್ಯದಲ್ಲಿ ಸುಂಟರಗಾಳಿಗೆ ಸಿಕ್ಕಿದ ನಾವೆಗೆ ಆಸರೆಯಾದರೂ ಎಲ್ಲಿ? ಸಿಕ್ಕಿಕೊಳ್ಳಲು ಅವಕಾಶ ಕೊಡದವನೆ ಜಾಣ. ಸಿಕ್ಕಿಕೊಂಡ ಮೇಲೆ ನಾಶ ಸ್ವತಃಸಿದ್ಧ.

ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೮॥

ಆದುದರಿಂದ ಮಹಾಬಾಹುವೇ ಎಂದು ಸಂಬೋಧನೆ. ಏಕೆಂದರೆ ಲಗಾಮನ್ನು ಬಿಗಿಯಾಗಿ ಹಿಡಿಯಬೇಕಾದರೆ ಮಹತ್ತಾದ ಶಕ್ತಿಯುಳ್ಳ ಬಾಹುಗಳು ಬೇಕು. ಬಿಗಿಯಾಗಿ ಇಂದ್ರಿಯಗಳ ಕಡಿವಾಣವನ್ನು ಹಿಡಿ. ಇಂದ್ರಿಯಗಳು (ದುಷ್ಟ ಅಶ್ವಗಳು ತಮಗೆ ಬೇಕಾದ ಕಡೆಗೆ ಹೋಗುವಂತೆ) ಇಂದ್ರಿಯಾರ್ಥೇಭ್ಯಃ ತಾನೇ ಯಾಚಿತವಾಗಿ ಬೇಕಾದೆಡೆಗೆ ಹೋಗದಂತೆ, ಸರ್ವಶಃ ಅವನ್ನು ನಿಗ್ರಹಮಾಡಿದವನ ಪ್ರಜ್ಞೆ ಸ್ಥಿರವಾಗಿರುತ್ತೆ. 'ತಸ್ಯ ಪ್ರಜ್ಞಾ ಪ್ರತಿಷ್ಠಿತಾ' ಎಂದು ನಾಲ್ಕು ಶ್ಲೋಕಗಳು ಸಮಾಪ್ತಿ ಹೊಂದಿವೆ. "ತಸ್ಯ ಪ್ರಜ್ಞಾ ಪ್ರತಿಷ್ಠಿತಾ'—ಆತ್ಮದ ನಿರಂತರ ಭಾಸವಾಗಬೇಕಾದರೆ, ಉಚಿತ ಸ್ಮರಣೆ, ಉಚಿತ ವಿಸ್ಮರಣೆ ಸೇರಿ ಸಂಯಕ್‌ಸ್ಮರಣ ಶಕ್ತಿ ಬೇಕು. ಆವಾವುದು ಇಡಬೇಕು, ಯಾವ ಯಾವುದು ಬಿಡಬೇಕು, ಹೇಗೆ ಆಮೆಯ ದೃಷ್ಟಾಂತ ಕೊಟ್ಟು ಹೇಗೆ ಸಂಯಮ ಮಾಡಿ

ಕೊಳ್ಳಬೇಕು, ಆ ನಿಗ್ರಹವನ್ನು ಸರ್ವಶಃ ಕಾಪಾಡಿಕೊಳ್ಳಬೇಕೆಂದು ಈ ವಾಕ್ಯ ಸಮಾಪ್ತಿ ಶ್ಲೋಕಗಳಲ್ಲಿ ಅಡಕವಾಗಿವೆ. ಹಿಂದೆ 'ಶೋಚಿತುಮರ್ಹಸಿ' ಎಂದು ಸಮಾಪ್ತಿಯಾಗುವ ಶ್ಲೋಕಗಳು ಎಂತು, ಯಾವುದು ಯಾವುದು ಶೋಕಿಸುವುದಕ್ಕೆ ಅನರ್ಹವಾದವುಗಳೆಂದು ವಿವೇಚಿಸಿ, ಆತ್ಮಾನಾತ್ಮಜ್ಞಾನವನ್ನು ಕೊಡುವಂತೆ ನಿರೂಪಿಸಿರುವ 'ತಸ್ಯ ಪ್ರಜ್ಞಾ ಪ್ರತಿಷ್ಠಿತಾ' ಸಮಾಪ್ತಿಯ ಶ್ಲೋಕ ನಿರೂಪಣವೂ ಸುಂದರವಾಗಿದೆ. ಪ್ರಜ್ಞೆಯು ಆತ್ಮಪ್ರತಿಷ್ಠಿತವಾದ ಮೇಲೆ ತಾನಾಗಿಯೇ 'ಆತ್ಮಕ್ರೀಡಾ, ಆತ್ಮರತಿಃ' ಎಂದು ಉಪನಿಷತ್ತುಗಳಲ್ಲಿ ಹೇಳಿದಂತೆ ತನ್ನಲ್ಲಿ ತಾನೇ ಲೀನವಾಗುತ್ತದೆ. ಇನ್ನು ಉಳಿದ ನಾಲ್ಕು ಶ್ಲೋಕಗಳಲ್ಲ ಶಾಂತಿರಸ ತುಂಬಿ ತುಳುಕಿ ಪ್ರವಹಿಸುತ್ತದೆ. ಸ್ಥಿತಪ್ರಜ್ಞಸ್ಥಿತಿ ಸ್ಥಿರವಾದ ಮೇಲೆ ಇರುವ ಶಾಂತಿವೃಷ್ಟಿಯನ್ನು ವಿವರಿಸುತ್ತದೆ.

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥

ಆಗ ಅವನು ಉಲ್ಟಾಪಲ್ಟಿ. ಮೀರಾದೇವಿ ಹೇಳುವಂತೆ 'ಉಲಟ್ ಭಾಯೀ ಮೋರೇ ನಯನ ನ ತೀ.' ಇತರರು ತಲೆಕೆಳಗಾಗಿ ನೋಡುತ್ತಿದ್ದಾರೆಂದು ಯಾಕೆ ಹೇಳಬೇಕು? ನನ್ನ ಕಣ್ಣುಗಳೇ ಕೆಳಮೇಲಾಗಿ ಕಾಣುತ್ತಿವೆ ಎಂದು ಬಿಟ್ಟರೆ ಸರಿ. ಹಾಗೆಯೇ ಆ ಸ್ಥಿತಿಯಲ್ಲಿ ಮುನೇ—ಮೌನದಿಂದ ತಿಳಿವಳಿಕೆಯಿಂದಿರುವವನಿಗೆ ರಾತ್ರಿ ಹಗಲು, ಹಗಲು ರಾತ್ರಿಯಾಗಿಬಿಡುತ್ತದೆ.

ಶ್ರೀ ತುಳಸೀದಾಸರು ರಾಮಚರಿತಾಮೃತದಲ್ಲಿ ಹೇಳಿದ್ದಾರೆ:

ಮೋಹ ನಿಶಾ ಸಬ ಸೋ ಬನಿಹಾರಾ । ದೇಖಿಯ ಸಪನ ಅನೇಕ ಪ್ರಕಾರ್ ॥
ಯಹ ಜಗ ಜಾಮಿನಿ ಜಾಗ್ರಹ ಜೋಗಿ । ಪರಮಾರಥೀ ಪ್ರಪಂಚ ವಿಯೋಗಿ ॥
ಜಾನಿಯ ತಬ ಹಿ ಜೀವಜಗಜಾಗ್ ಜಬ ಸಬ ವಿಷಯ ವಿಲಾಸ ವಿರಾಗಾ ॥
ಹೋಯಿ ವಿವೇಕ ಮೋಹ ಭ್ರಮ ಭಾಗ ತಬ ರಘುನಾಥ ಚರಣ ಅನುರಾಗ ॥

ಮೋಹನಿಶೆಯಲ್ಲಿ ಸುಖವಾಗಿ ನಿದ್ರಿಸುತ್ತಾ ಸುಖಸ್ವಪ್ನವನ್ನು ಕಾಮಿಗಳು ಕಾಣುತ್ತಿರುವ ರಾತ್ರಿಕಾಲದಲ್ಲಿ ಯೋಗಿಯು ಪ್ರಪಂಚ ವಿಯೋಗಿಯಾಗಿ ಪರಮಾರ್ಥಸ್ವರೂಪವನ್ನು ಜಾಗ್ರತಾವಸ್ಥೆಯಲ್ಲಿದ್ದು—ಕಾಣುವನು, ಯಾವಾಗ ಜಗತ್ತಿನ ಜೀವನದ ಜಾಗ್ರತೆಯ ಎಲ್ಲಾ ವಿಷಯವಿಲಾಸಗಳಲ್ಲಿಯೂ ವೈರಾಗ್ಯ ತಂದ ಮೇಲೆ ಮೋಹಭ್ರಮೆ ಹೋಗಿ ವಿವೇಕ ಬಂದಮೇಲೆ ಆಗ

ರಘುನಾಥ (ತುಲಸಿದಾಸನ ಪ್ರಾಣಸ್ವರೂಪ ರಾಮ)ನ ಚರಣ ಅನುರಾಗ ಪ್ರಾಪ್ತಿಯಾಗುತ್ತೆ.

ಮಹಾತ್ಮಾ ಗಾಂಧಿಯವರೂ ಅನಾಸಕ್ತಿಯೋಗದಲ್ಲಿ "ಭೋಗಿಯಾದ ಮನುಷ್ಯನು ಮಧ್ಯರಾತ್ರಿಯ ವರೆಗೆ (ಇನ್ನೂ ಹೆಚ್ಚು ಹೊತ್ತು) ನಾಚ್, ಪಾನ, ರಂಗಸ್ಥಳಗಳಲ್ಲಿ ಅವನ ಸಮಯವನ್ನು ವ್ಯರ್ಥಮಾಡಿ ಬೆಳಗ್ಗೆ ೮ ಘಂಟೆಯ ವರೆಗೂ ನಿದ್ರಿಸುತ್ತಾನೆ. ಸಂಯಮಿ ಮನುಷ್ಯನು, ಸಾಯಂಕಾಲ ೮ ಘಂಟೆ ವರೆಗೆ ಮಲಗಿ, ಮಧ್ಯರಾತ್ರಿಯಲ್ಲಿ ಎದ್ದು ಈಶ್ವರಧ್ಯಾನ ಮಾಡುತ್ತಾನೆ. ಭೋಗಿ ಪುರುಷನು, ಸಂಸಾರಪ್ರಪಂಚವನ್ನು ದೊಡ್ಡದು ಮಾಡುತ್ತ ಹೋಗುತ್ತಾನೆ. ಈಶ್ವರನನ್ನು ಮರೆಯುತ್ತಾನೆ. ಆ ಕಡೆ ಸಂಯಮಿಪುರುಷನು ಸಂಸಾರಪ್ರಪಂಚವನ್ನು ಅಲಕ್ಷ್ಯಮಾಡುತ್ತ ಹೋಗುತ್ತಾನೆ. ಈಶ್ವರಸಾಕ್ಷಾತ್ಕಾರ ಮಾಡುತ್ತ ಇರುತ್ತಾನೆ. ಈ ಪ್ರಕಾರದಿಂದ ಇಬ್ಬರ ಮಾರ್ಗವೂ ಬೇರೆ ಬೇರೆಯಾಗಿದೆ ಎಂಬ ಭಾವಾರ್ಥವನ್ನು ಈ ಶ್ಲೋಕಗಳಲ್ಲಿ ಭಗವಂತ ತೋರಿಸಿದ್ದಾನೆ" ಎಂದು ಅಪ್ಪಣೆ ಕೊಡಿಸಿದ್ದಾರೆ.

ಯೋಗಿ ಮತ್ತು ಭೋಗಿಯ ವಿಚಾರದಲ್ಲಿ ಅವರವರ ಪ್ರಾಪಂಚಿಕ ಮತ್ತು ಈಶ್ವರದೃಷ್ಟಿಯಿಂದ, ಇಹಪರ ವ್ಯಾಪಾರಗಳು ಮಾಡುವಾಗ ಹೇಗೆ ಒಬ್ಬನಿಗೆ ನಿಶೆ ನಿದ್ರಾವಸ್ಥೆಯಾದಾಗ ಮತ್ತೊಬ್ಬನಿಗೆ ಜಾಗ್ರತಾವಸ್ಥೆಯಾಗಿರುತ್ತದೆ. 'ಇಸ ಪ್ರಕಾರ ದೋ ನಾಕಾ ಮಾರ್ಗ ಭಿನ್ನ ಭಿನ್ನ ಹೈ' ಎಂದು ಗಾಂಧಿಯವರು ಹೇಳಿದಂತೆ ಸಾಧಕ ಸಮಯಗಳ ವಿಚಾರ ಮಾಡಿ ಭಗವಂತನು ಭೋಗಿ ಯೋಗಿಗಳ ದೃಷ್ಟಿ ಇಟ್ಟಿ ತೋರಿದ್ದಾನೆ. ಸಂಯಮಿಗೆ ನಿಶ್ಶಬ್ದ ಮಧ್ಯ ನಿಶಿಯೇ ಜಾಗ್ರತ ಈಶ್ವರ ಧ್ಯಾನ ಸಮಯ. ಶ್ರೀ ರಾಮಕೃಷ್ಣ ಭಗವಾನರು ಒಂದೆಡೆ ಹೇಳಿದ್ದಾರೆ: "ಸೊಳ್ಳೆ ಪರದೆಯೊಳಗೆ ಮಾತನಾಡದೆ ಸುಮ್ಮನೆ ಮಲಗಿದ್ದಾರೆಂದು ನಾವು ತಿಳಿಯುವ ಅನೇಕ ಯೋಗಿಗಳು ಮಧ್ಯರಾತ್ರಿಯಲ್ಲಿ ಈಶ್ವರಧ್ಯಾನ ಸಾಕ್ಷಾತ್ಕಾರದಲ್ಲಿ ಜಾಗ್ರತರಾಗಿರುತ್ತಾರೆ" ಎಂದು.

ಥಿಯಾಸಫಿಯ ಮೂಲಕರ್ತರಲ್ಲೊಬ್ಬರಾದ ಶ್ರೀಮತಿ ಆನಿ ಬೆಸೆಂಟರು "ಯೋಗಿಯು ಮುನಿಯು ಜನಸಾಮಾನ್ಯರು ನಿದ್ರಿತರಾಗಿ ಅಲಕ್ಷ್ಯದಿಂದಿರುವ ಸತ್ಯತತ್ತ್ವಗಳಿಗೆ ಜಾಗ್ರತನಾಗಿರುತ್ತಾನೆ. ಅಂದರೆ ಮುನಿಯು ಅಂತಶ್ಚಕ್ಷು, ಸಾಧಾರಣ ಮನುಷ್ಯರ ಕಣ್ಣುಗಳಿಗೆ ಗೋಚರವಾಗದ ಸತ್ಯತತ್ತ್ವಗಳಿಗೆ ತೆರೆ

ದಿರುತ್ತದೆ. ಜಾಗ್ರತೆಯಿಂದ ತೀಕ್ಷ್ಣದೃಷ್ಟಿಯ ನೋಟದ ಸಾಮಾನ್ಯ ಜನರ ಸಾಮಾನ್ಯ ವಿಷಯಗಳಲ್ಲಿ ಮುನಿ ಕಣ್ಮುಚ್ಚಿದ್ದಾನೆ, ನಿದ್ರಿಸುತ್ತಾನೆ' ಎಂದು ಅರ್ಥಮಾಡಿದ್ದಾರೆ.

ಯೋಗವಾಸಿಷ್ಠದಲ್ಲಿ "ಜಾಗ್ರತ್ಯಪಿ ಸುಷುಪ್ತೀಶ್ವ, ಜ್ಞಾಗರ್ತಿಚ ಸುಷುಪ್ತಕೇ ಜಾಗ್ರತ್ಸುಷುಪ್ತ ಯೋರೈಕ್ಯಾತ್ತವಸ್ತ್ಯೈಸಿ ನಿರಾಮಯಃ" ಎಂದು ಜಾಗ್ರತ, ಸುಷುಪ್ತಿಗಳು ಎರಡೂ ಒಂದೇ ಆಗಿ ನೀನೂ ನಿರಾಮಯನಾಗಿರಬಲ್ಲೆ ಎಂದು ಭಾವನಾ ಪ್ರತಿಪಾದನಪ್ರಕರಣದಲ್ಲಿ ವಸಿಷ್ಠರು ಶ್ರೀರಾಮರಿಗೆ ಹೇಳಿದರು. ಅವಸ್ಥಾತ್ರಯಸಾಕ್ಷಿಯೊಡನೈಕ್ಯನಾದವನಿಗೆ ಅವುಗಳ ಭೇದವೇ ಗೋಚರವಾಗದು. ಅವನು ಅವಸ್ಥಾತ್ರಯಾತೀತನಾಗಿ ನಿರಾಮಯನಾಗಿರುವನು. ಅವನದು ಬ್ರಹ್ಮೈಕಸ್ಥಿತಿ ಏಕಸ್ಥಿತಿ ಮಾತ್ರ ಯಾವಾಗಲೂ.

ಅಕರ್ತೃಸ್ವರೂಪದಿಂದ ಜ್ಞಾನಪ್ರಕಾಶವಾಗಿರುತ್ತೆ, ಆತನಿಗೆ. ಇತರರು ಆತ್ಮನೆ ಕರ್ತೃ ಎಂದು ತಿಳಿದು ಅವಿದ್ಯಾ ಕತ್ತಲೆಯಲ್ಲಿರುತ್ತಾರೆ. ಅವಿದ್ಯಾ ಕತ್ತಲೆಯಲ್ಲಿ ಎಲ್ಲ ಪ್ರಾಣಿಗಳು ಕುರುಡುರು. ಸ್ಥಿತಪ್ರಜ್ಞನಾದರೋ, ಆತ್ಮ ಪ್ರಕಾರದಿಂದ ನಿತ್ಯ ಪ್ರಕಾಶದಲ್ಲಿರುವವನು—ಎಂದು ಶಂಕರರ ಭಾಷ್ಯ. ಎಲ್ಲ ಜನರೂ ಫಲದ ವಿಷಯದಲ್ಲಿ ಎಚ್ಚತ್ತಿದ್ದಾರೆ. ಕರ್ತವ್ಯವಿಷಯದಲ್ಲಿ ಮಲಗಿದ್ದಾರೆ. ಸ್ಥಿತಪ್ರಜ್ಞನಾದರೋ ಫಲದ ವಿಷಯದಲ್ಲಿ ಮಲಗಿದ್ದಾನೆ. ತನ್ನ ಕರ್ತವ್ಯ ವಿಷಯದಲ್ಲಿ ಎಚ್ಚರದಿಂದಿದ್ದಾನೆ. ಇತರರು ಭೋಗ ವಿಷಯದಲ್ಲಿ ಸ್ವೇಚ್ಛೆಯಿಂದ ಪ್ರವರ್ತಿಸುವುದರಲ್ಲಿ ಎಚ್ಚರಿದ್ದಾರೆ. ಸಂಯಮದ ವಿಷಯದಲ್ಲಿ (ನಿಗ್ರಹದಲ್ಲಿ) ಮಲಗಿದ್ದಾರೆ. ಸಂಯಮಿಯು ನಿಗ್ರಹದ ವಿಷಯದಲ್ಲಿ ಎಚ್ಚರಿದ್ದಾನೆ. ಇಂದ್ರಿಯಗಳು ಸ್ವೇಚ್ಛೆಯಾಗಿ ಹೋಗದಂತೆ ಎಚ್ಚರನಾಗಿರುತ್ತಾನೆ. ಭೋಗೇಚ್ಛೆಯ ವಿಷಯದಲ್ಲಿ ನಿಶಾಕತ್ತಲಲ್ಲಿದ್ದಾನೆ. ಈ ಶ್ಲೋಕ ಧ್ಯಾನಯೋಗ ಭೂಮಿಕೆಯ ಭಾವ. ಮುಂದಿನ ಶ್ಲೋಕ ಜ್ಞಾನಯೋಗ ಭೂಮಿಕೆಯ ಭಾವ ತೋರುತ್ತೆ.

ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥೭೦॥

ಈ ಶ್ಲೋಕವು "ಅವಧೂತೋಪನಿಷತ್"ನಲ್ಲಿ ಬಂದಿದೆ. (ಯೋಗಿಯ ಸ್ಥಿತಿ) ಪರಿಪೂರ್ಣವಾಗಿಯೂ, ಅಚಲವಾಗಿಯೂ, ಗಂಭೀರವಾಗಿಯೂ ಇರುವ ಸಮುದ್ರವನ್ನು ನದಿಗಳು ಹೇಗೆ ಪ್ರವೇಶಿಸುವುವೋ, ಸರ್ವಕಾಮನೆಗಳನ್ನು, ವಿಷಯಸುಖದುಃಖಗಳನ್ನೂ ಸ್ಥಿತಪ್ರಜ್ಞನು ಹೊಂದುತ್ತಿದ್ದಾಗ್ಯೂ ಶಾಂತನಾಗಿಯೇ ಇರುವನು. ವಿಷಯಾಸಕ್ತಿ ವಿಷಯಭೋಗಗಳಿಂದ ಎಂದಿಗೂ ಆ ರೀತಿ ಶಾಂತಿಯನ್ನು ಹೊಂದಲಾರನು. ಸಮುದ್ರದೊಳಕ್ಕೆ ಆನೆಯು ಹೋದರೂ ಏನೂ ಆಗುವುದಿಲ್ಲ. ಅದೇ ಒಂದು ಮಡುವಿನೊಳಗೆ ಹೋದರೆ ನೀರು ಅಲ್ಲೋಲಕಲ್ಲೋಲವಾಗಿ ದಡದ ಮೇಲೆಲ್ಲ ಎರಚುತ್ತೆ. ಮದವು ಹೊಕ್ಕರೂ ಅಚಲನಾದ ಸ್ಥಿತಪ್ರಜ್ಞನು ಅಳ್ಳಾಡನು. ತುಂಬಿದ ಕೊಡ ತುಳುಕುವುದಿಲ್ಲ. ಸಮುದ್ರದ ಗಾಂಭೀರ್ಯದಂತೆ ಸುಖದುಃಖಪ್ರವೇಶವಾದರೂ ಸಂಯಮಿಯ ಚಿತ್ತವು ಗಂಭೀರವಾಗಿರುವುದು. "ಅಕರ್ದಮಮಿದಂ ತೀರ್ಥಂ ಸಜ್ಜನಾನಾಂ ಮನೋ ಯಥಾ" ಎಂದು ವಾಲ್ಮೀಕಿಗಳು ತಾವು ಸ್ನಾನಕ್ಕೆ ಇಳಿಯುವ ಕೊಳದ ಜಲವನ್ನು ಚಿತ್ರಿಸಿರುವರು. ಅಮಲವಾಗಿ ಪ್ರಸನ್ನವಾಗಿರುವ ಜಲವನ್ನು, ನಿಃಸಂಕೋಚವೂ, ನಿರ್ಮಲವೂ ಪ್ರಕಟವೂ (ಪ್ರತಿಷ್ಠ) ಆಗಿರುವ ಸಜ್ಜನರ ಚಿತ್ತಕ್ಕೆ ಹೋಲಿಸಿದ್ದಾರೆ. ಅಂತೆಯೇ ರಾತ್ರಿಯಲ್ಲಿ ಪ್ರಕಾಶಿಸುವ (ಪ್ರತಿಷ್ಠ) ನೀರವ ನಿಷ್ಪಂದ ನಿರಭ್ರ ತಾರಕಿಕ ಆಕಾಶ. ಸಜ್ಜನ ಚಿತ್ತದ ಶುಭಗುಣಗಳೇ ಆಕಾಶದಲ್ಲಿನ ತಾರೆಗಳು. "ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ, ಭೂಮ್ಯೈವ ಸುಖಂ ಭೂತಾಕ್ಷೇವ ವಿಜಿಜ್ಞಾಸತವ್ಯ" ಎಂದು ಸನತ್ಕುಮಾರರು ಛಾಂದೋಗ್ಯದಲ್ಲಿ ಹೇಳಿರುವಂತೆ, ಪೂರ್ಣಪ್ರತಿಷ್ಠಿತವಾದುದರಲ್ಲೇ ಸುಖ, ಅಲ್ಪದರಲ್ಲಿ ಸುಖವಿಲ್ಲ. (That which is infinate is bliss There is no bliss in that which is finate) 'ಸಚ್ಚಿದಾನಂತ'ವನ್ನೇ "ಸಚ್ಚಿದಾನಂದ"ವೆಂದೂ ಬ್ರಹ್ಮಸ್ವರೂಪ ವರ್ಣನೆಯುಂಟು. ಅನಂತವೇ ಆನಂದವೆಂದು, ಅನಂತಾನಂದವೇ ಶಾಂತಿ (ಪ್ರಶಾಂತ ಹೃದಯ) ಸ್ಥಿತಪ್ರಜ್ಞನ ಪ್ರಶಾಂತ ಹೃದಯದಲ್ಲಿ ತಾಂಡವಾಡುವ ಶಾಂತಿಯೇ ಅನಂತಾನಂದ. ಈ ಶ್ಲೋಕದಲ್ಲಿ ಜ್ಞಾನದ ಮಹಿಮೆ, ಜ್ಞಾನಿಯ ಗೌರವ ಸಮುದ್ರದ ಪರಿಪೂರ್ಣತೆಯನ್ನು ಪ್ರತಿಷ್ಠೆಯನ್ನೂ ಹೋಲುತ್ತದೆ. ಕೊನೆಯದಾಗಿ ಈ ಸ್ಥಿತಿ ಹೊಂದಿದ ಮೇಲೆಯೂ ಎಚ್ಚರಿಕೆಯಿಂದಿರಬೇಕು. ಕೈಗೆ ಗಂಟು ಸಿಕ್ಕಿದರೂ ಕೈ ಬಿಗಿ

ಯಿರಲಿ, ಸಡಲಿಸಬಾರದು. ಗಂಗೆ ತನ್ನ ಗತಿಯನ್ನು ಮುಟ್ಟುವೆಡೆ ಸಮುದ್ರ ಸೇರುವಾಗ ಮಂದಗಾಮಿನಿಯಾಗುತ್ತೆ. ಶತ್ರುಗಳನ್ನು ಗೆದ್ದಾಗ ಯೋಧನ ಕೈ ಕತ್ತಿಯ ಮೇಲೆ ಸಡಿಲವಾಗುತ್ತೆ. ಕುತೂಹಲದಿಂದ ಪುರುಷನಿಗೆ ಪ್ರಾಪ್ತ ವಾಗಿರುವ ಸ್ಥಿತಿಯನ್ನು ಸ್ಥಿರಪಡಿಸಿಕೊಳ್ಳಬೇಕು. ಸ್ಥಿರಮತಿಯನ್ನು ಮೈ ಮರೆತು ಹೋಗಲಾಡಿಸಿಕೊಳ್ಳಬಾರದು. ಉಚ್ಚಸ್ಥಿತಿಯಿಂದ ಜಾರಬಾರದು.

> ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
> ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥೭೧॥

ಆದುದರಿಂದ ಸಂಯಮವನ್ನು ಸ್ಥಿರಪಡಿಸಿಕೊಂಡು ಅಂತಃಕರಣದ ನಾನಾ ಕಾಮನೆಗಳನ್ನು ತ್ಯಜಿಸಿ 'ನಿಸ್ಪೃಹಃ, ನಿರ್ಮಮಃ, ನಿರಹಂಕಾರಃ' ಸ್ಫೂರ್ತಿ ಇಲ್ಲದೆ, ಅಹಂಕಾರ ಮಮಕಾರಗಳನ್ನು ತ್ಯಜಿಸಿ, ಶಾಂತಿಯನ್ನು ಹೊಂದುವನು. ಭರ್ತೃಹರಿ ವೈರಾಗ್ಯಶತಕದಲ್ಲಿ—

> ಏಕಾಕೀ, ನಿಸ್ಪೃಹಃ ಶಾಂತಃ ಪಾಣಿಪಾತ್ರೋ ದಿಗಂಬರಃ ।
> ಕದಾ ಶಂಭೋ! ಭವಿಷ್ಯಾಮಿ ಕರ್ಮನಿರ್ಮೂಲನ ಕ್ಷಮಃ ॥

ಎಂದು ಶಂಭುವನ್ನು ಯಾವಾಗ ಈ ಸ್ಥಿತಿಯು ಯಾವುದನ್ನೂ ಅಪೇಕ್ಷಿಸದೆ ನಾನು, ನನ್ನದು ಎನ್ನುವದನ್ನು ಆಹಾರವಸ್ತ್ರಗಳಲ್ಲೂ ಇಲ್ಲದೆ, ಕರ್ಮನಿರ್ಮೂಲ ವಾಗಿ ಬರುವುದೋ? ಎಂದು ಪ್ರಾರ್ಥಿಸಿದ್ದಾರೆ.

"ಸ ಮೇ ಪ್ರಿಯಃ" ಎಂದು ಪ್ರೀತಿಪಾತ್ರನಾದ ಭಕ್ತನ ಲಕ್ಷಣಗಳನ್ನು ವರ್ಣಿಸುವಾಗ ಕೂಡ ೧೨ ನೇ ಅಧ್ಯಾಯದ ೧೩ ನೇ ಶ್ಲೋಕದಲ್ಲಿ "ನಿರ್ಮಮೋ ನಿರಹಂಕಾರಃ" ಗುಣಗಳನ್ನು ಮುಖ್ಯವಾಗಿ ಭಗವಂತ ಉಲ್ಲೇಖಿಸಿರುವದರಿಂದ ಇವು ಭಗವತ್ಸಾಕ್ಷಾತ್ಕಾರಕ್ಕೆ, ಆತ್ಮದರ್ಶನಕ್ಕೆ ಎಷ್ಟು ಮುಖ್ಯವಾದ ಅಡಿಗಲ್ಲೆಂದು ವ್ಯಕ್ತವಾಗುತ್ತದೆ. ಇನ್ನೂ ಬಿಡಿಸಿ ಅಧ್ಯಾಯ ೧೮, ೫೩ ನೇ ಶ್ಲೋಕದಲ್ಲಿ, "ಅಹಂಕಾರಂ ಬಲಂ ದರ್ಪಂ ಕಾಮಕ್ರೋಧಂ ಪರಿಗ್ರಹಂ ವಿಮುಚ್ಯ" ಎಂದು ನಿರಹಂಕಾರದ ವಿವರಣೆ ಮಾಡಿ, "ನಿರ್ಮಮ" ಸೇರಿಸಿ, ಬ್ರಹ್ಮಭಾವಕಲ್ಪನೆ, ಅರ್ಹತೆ ವಿವರಣೆಯಲ್ಲಿ ಸೇರಿಸಿದ್ದಾನೆ. ಸಂಯಮವನ್ನು ಬಿಟ್ಟಾನೆಂದು ಎಚ್ಚರಿಕೆ, ಕಾಪಾಡಿಕೊಳ್ಳುವುದು ಕಷ್ಟ. ಸಂಯಮದಿಂದ ತಾಪವಾಗದಿದ್ದರೆ ಅದೆಂತಹ ತಪ? ಆ ಸ್ಥಿತಪ್ರಜ್ಞನೆಂತಹ ತಪಸ್ವಿ? ಪ್ರವಾಸಿಗೆ ಬುತ್ತಿಯ ಗಂಟು ಹೊರೆಯೆ! ಅದು ತೃಷೆಂಗುಡಗಿಸಲು ಬೇಕೆಂದು ಬಂದು ತರಹ ಕಾಪಾಡ

ಬೇಕಾದ ವಸ್ತುವೇ! ಮರ ಕಡಿಯುವವನು ಎಲ್ಲ ರೆಂಬೆಗಳನ್ನು ಕಡಿದರೂ, ತಾನು ನಿಂತಿರುವ, ತನಗಾಸರೆಯಾಗಿರುವ ರೆಂಬೆಯನ್ನು ಕಡಿದಾನೆ? ಸಂಯಮವು ನಾಶವಾಗದಂತೆ ಕಾಪಾಡಿಕೊಳ್ಳಬೇಕು. ಕೈ ನೀರಿನ ದಂಡೆ ಮುಟ್ಟಿದರೆ ಸಾಲದು, ಪ್ರವಾಹದಲ್ಲಿ ಕಾಲು ದಂಡೆಯ ಮೇಲೆ ಸ್ಥಿರವಾಗಿ ಊರಬೇಕು. ಆಗಲೇ ಪುನಃ ಪ್ರವಾಹದೊಳಗೆ ಕೊಚ್ಚಿಕೊಂಡು ಹೋಗುವ ಭಯವಿಲ್ಲ. ಅದಕ್ಕಾಗಿ ಸ್ಥಿತಪ್ರಜ್ಞನು 'ನಿಸ್ಪೃಹಃ ನಿರ್ಮಮಃ ನಿರಹಂಕಾರಃ' ಆಗಿ ನಿತ್ಯ ಪ್ರಯತ್ನಶೀಲನಾಗಿರಬೇಕು.

ಅಹಂಕಾರಿಗಳಿಂದ ಯಾವ ಕೆಲಸವೂ, ಯಾವ ಕಾಲದಲ್ಲಿ, ಯಾವ ಲೋಕ ಕಲ್ಯಾಣವೂ ಆಗಿಲ್ಲ. ಆಗಿರುವ ಲೋಕಕಲ್ಯಾಣವೆಲ್ಲ ನಿರಹಂಕಾರಿಗಳಿಂದಲೇ. ಆದರಿಂದಲೇ 'ನಿರಹಂಕಾರಃ' ಎಂದು ಶಾಂತಿಗಾಗಿ ಕೊನೆಯ ಕಲ್ಯಾಣಗುಣ ವಾಗಿ ಶಾಂತಿಹೊಂದಲು ಪರಮಾತ್ಮನು ಹೇಳುವುದು. "ಮಮ" ನನ್ನದು ಎನ್ನುವುದಾದರೂ ಹೋಗಬಹುದು. ಆದಕ್ಕಾಗಿಯೇ ಯಾವ ಸತ್ಕರ್ಮವನ್ನು ಮಾಡಿಸಿದರೂ, ಯಾವ ದಾನವನ್ನು ಕೊಟ್ಟರೂ ಸಕಾಮಪೂಜೆಗಳ ಕೊನೆ ಯಲ್ಲಿ, ಉಪಾಯನದಾನ ಕೊಟ್ಟ ಮೇಲೆ ಕೂಡ, 'ಇದಂ ನ ಮಮ' ಎಂದು ದಾತನ ಕೈಯಲ್ಲಿ ಹೇಳಿಸುತ್ತಾರೆ. ಮಮಕಾರ ಅಳಿಯಲು ಅಭ್ಯಾಸವಾಗ ಲೆಂದೇ ಯಾವ ಕಾರ್ಯ ನಾವು ಮಾಡಿದ ಮೇಲೂ 'ಇದಂ ನ ಮಮ' "ಶ್ರೀ ಕೃಷ್ಣಾರ್ಪಣಮಸ್ತು' ಎಂದು ಹೇಳಿ ಪರ್ಯವಸಾನಮಾಡುವುದು. ಆಗ್ಯೂ ಬಿ 'ಅಹಂ' ಎನ್ನುವ ತನ್ನ ಆಕಾರವು ಹೋಗದು. ಅದಕ್ಕಾಗಿಯೇ ತುಕಾರಾಂ ರವರು 'ನಾನು ಹೋದರೆ ಸ್ವರ್ಗಕ್ಕೇ ಹೋಗಬಹುದು' ಎಂದು ವಿದ್ವತ್ ಸಭೆಯ ಮುಂದೆ ಹೇಳಿ, ನೋಡಿದಿಯೋ, ಅವನ ಅಹಂಕಾರ! 'ತಾನು ಹೋದರೆ ಮಾತ್ರ ಸ್ವರ್ಗಕ್ಕೆ ಹೋಗುತ್ತಾನಂತೆ. ನಾವಾರೂ ಇಷ್ಟು ವಿದ್ವಾಂಸರಾದರೂ ಹೋಗ ಲಾರೆವೋ' ಎಂದು ಪ್ರತಿಭಟಿಸುವಂತೆ ಮಾಡಿದನು. ಆಗ ವಿನಯದಿಂದ ಅರ್ಥ ಹೇಳಿದನಂತೆ. 'ಹೌದು, ನಾನೇನೂ ತಿಳಿಯದವ, ನನಗೆ ಸ್ವರ್ಗಕ್ಕೆ ಹೋಗು ವಷ್ಟು ಪ್ರತಿಭೆಯಿಲ್ಲ. ಆದರೂ "ನಾನು" ಎಂದರೆ ನಾನೆಂಬ "ಅಹಂ"ಕಾರವು ಹೋದರೆ ಮಾತ್ರ ನಾನು ಎಂಬ ಅಂತರಾತ್ಮ ಪರಮಾತ್ಮನೊಡನೆ ಲೀನವಾಗ ಬಹುದು ಅಷ್ಟೆ. ನಾನೇನು ಹೀಗೆ ತುಕನಾಗಿ ಸ್ವರ್ಗಾರೋಹಣ ಮಾಡುವುದಿಲ್ಲ.' ನಾನು ಹೋಗಬೇಕು ಎಂದು ಅಸೂಯೆಪಡುತ್ತಿದ್ದ ಪಂಡಿತವರ್ಗಕ್ಕೆ ನಾಚಿಕೆ

ಯಿಂದ ತಲಿತಗ್ಗಿಸುವಂತೆ ಮಾಡಿದನಂತೆ. ಒಂದು ದಾರದಲ್ಲಿ ಒಂದು ಸಣ್ಣ ನೂಲೆಳೆಯಾದರೂ ಕೊನೆಯಲ್ಲಿ ಚೆದರಿಕೊಂಡಿದ್ದರೆ ಸೂಜಿಕಣ್ಣಿನೊಳಗೆ ದಾರ ಪ್ರೋಣಿಸಲಾಗುವದಿಲ್ಲ. ಹೀಗೆಯೇ ಎಲ್ಲಾದರೂ ಕೊಂಚ ಅಹಂಭಾವ ಕೆರಳಿದ್ದರೂ ಪರಮಾತ್ಮನೊಳಗೆ ಪ್ರವೇಶವಿಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ತನ್ನನ್ನು ಇಲ್ಲದಂತೆ ಮಾಡಿ 'ಎನ್ನನ್ನಳಿಸು; ನೀನೆ ನೆಲಿಸು' ಎಂದು ಆತನಲ್ಲಿ ಒಂದಾಗಬೇಕು. ಕೊಂಚವೂ ಇಲ್ಲದಂತೆ ಶೂನ್ಯವಾಗಬೇಕು. ಆಗಲೆ ಜೀವಾತ್ಮ ಪರಮಾತ್ಮನಲ್ಲಿ ಲೀನವಾದಂತೆ, ಕೊಂಚವೂ ಭೇದವೇ ಇಲ್ಲದೆ ಸೇರಿಬಿಡುವುದು. ಉಪನದಿ ದೊಡ್ಡನದಿಯನ್ನು ಸೇರಿಬಿಡುವಂತೆ 'ನಾನು ಅಳಿಸಿ ಹೋಗಬೇಕು, ದೊಡ್ಡನದಿ ಸಾಗರವನ್ನು ಸೇರುವಂತೆ. ಷುರು ಮಾಡಿದುದೂ 'ಯದಾ ಕಾಮಾನ್ ಸರ್ವಾನ್' ಕೊನೆ ಮುಟ್ಟಿಸಿದುದೂ; 'ಕಾಮಾ ಯಃ ಸರ್ವಾನ್.' ತ್ಯಜಿಸಬೇಕೆಂದು ಅರ್ಧಂಬರ್ಧದ ಮಾತೇ ಇಲ್ಲ. 'ಸರ್ವಾನ್' ಎಲ್ಲಾ ತ್ಯಜಿಸಬೇಕು. 'ಆತ್ಮನೇವಾತ್ಮಾನಾ ತುಷ್ಟ'ನಾದರೇ, ನಿಸ್ಪೃಹ, ನಿರಹಂಕಾರ ಪ್ರಾಪ್ತಿ ಹೇಗೆ ಸ್ಥಿತಿ ಮತಿಯಲ್ಲಿ ಪ್ರತಿಷ್ಠಿತನಾಗಲು ಮುಖ್ಯ ತತ್ವವನ್ನು ಮೊದಲು ಕೊನೆಯಲ್ಲಿ ಹೇಳಿದ್ದಾನೆ ಪರಮಾತ್ಮ.

> ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
> ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥೭೨॥

ಈ ಬ್ರಾಹ್ಮೀಸ್ಥಿತಿ ಪಡೆದ ಮೇಲೆ ಯಾವನೂ ಅಜ್ಞಾನಕ್ಕೊಳಗಾಗಿರುವುದಿಲ್ಲ. ಕೊನೆಯ ಕಾಲದ ವರೆಗೂ ಆ ಸ್ಥಿತಿಯಲ್ಲಿಯೇ "ಬ್ರಹ್ಮನಿರ್ವಾಣ" ಕೈವಲ್ಯವನ್ನು ಹೊಂದುವನು ಎಂದು ಅಭಯಪ್ರದಾನ ಮಾಡಿದ್ದಾನೆ ಸ್ವಾಮಿ.

ಬೃಹದಾರಣ್ಯಕದಲ್ಲಿ ಬರುವಂತೆ ಆ ಬ್ರಾಹ್ಮೀಸ್ಥಿತಿಯಲ್ಲಿರುವವನು "ಅತಃ ಪಾಪಮಕರವಮಿತ್ಯತಃ ಕಲ್ಯಾಣಮಕರವಮಿತ್ಯುಭೇ ಉಹ್ಯೈವೈಷ ಏತೇ ತರತಿ ನೈನಂಕೃತಾಕೃತೇ ತಪತಃ" ಪಾಪಮಾಡಿದನೆಂದಾಗಲಿ, ಕಲ್ಯಾಣವನ್ನು ಮಾಡಲಿಲ್ಲವೆಂದಾಗಲಿ, ಎರಡರ ಯೋಚನೆಯೂ ಇಲ್ಲ. ಪಾಪಕ್ಕೆ ಹೆದರಲಿಲ್ಲ, ಪುಣ್ಯಕ್ಕೆ ಹಿಗ್ಗಲಿಲ್ಲ. ಕೃತಾಕೃತದರ ಚಿಂತೆಯೂ ಇಲ್ಲ. "ಸರ್ವ ಪಾಪ್ಮಾನಂ ತಪತಿ ವಿಪಾಪೋ, ವಿರಾಜೋ, ವಿಚಿಕಿತ್ಸೋ ಸಬ್ರಾಹ್ಮಣೋ ಭವತ್ಯೇಷ, ಬ್ರಹ್ಮಲೋಕಸ್ಸಮ್ರಾಡಿತಿ" ಸಕಲಪಾಪವನ್ನೂ ದಾಟಿ ಪಾಪಹೀನನಾಗಿ ವಿರಾಜಿಸುತ್ತ ಬ್ರಹ್ಮಲೋಕ ಚಕ್ರವರ್ತಿಯಾಗುವನೆಂದು ಯಾಜ್ಞವಲ್ಕ್ಯರು ಹೇಳಿದ್ದಾರೆ.

'ಬ್ರಹ್ಮೈವ ಭವತಿ.' 'ನಿರ್ವಾಣ'ವೆಂಬ ಪದಕ್ಕೆ ಬೌದ್ಧರಲ್ಲಿ ಶೂನ್ಯವೆಂದು ಅರ್ಥಮಾಡುತ್ತಾರಂತೆ. ಶೂನ್ಯವೆಂದರೆ ಬೆಲೆಯಿಲ್ಲದ್ದಾಗುತ್ತೆ, ಆದರೆ ಅದ್ವೈತ ದಲ್ಲಿ 'ನಿರ್ವಾಣ'ಕ್ಕೆ 'ಪೂಜ್ಯ'ವೆನ್ನಬಹುದು. ಅದರ ಬೆಲೆ ಅಗಾಧವಾದುದು. ಅದರಲ್ಲಿ ಅಡಗಿರುವ ಶಕ್ತಿ ಅಮೋಘವಾದುದು. ಅದರ ನಿತ್ಯತೆಗೆ ಇತರವುಗಳ ಅವಶ್ಯಕತೆಯಿಲ್ಲ. ಹೆಚ್ಚುಕಡಮೆ ಇಲ್ಲದೆ ಇರುವುದು. ಇದಕ್ಕೆ "ಪೂರ್ಣಂ" ಎಂದು ಉಪನಿಷತ್ತುಗಳಲ್ಲಿ ಹೇಳುತ್ತಾರೆ. ಪೂರ್ಣಕ್ಕೆ ಪೂರ್ಣ ಸೇರಲಿ, ಪೂರ್ಣ ಕಳೆಯಲಿ, ಪೂರ್ಣವೇ. ಅದರಿಂದಲೆ ಎಲ್ಲಕ್ಕೂ ಬೆಲೆ ಬರುತ್ತದೆ. ಗಣಿತದಲ್ಲಿ ಪೂಜ್ಯಕ್ಕೆ ಅಂಕೆ ಸೇರಿದರೆ ಸಂಖ್ಯೆಯಾಗುತ್ತದೆ. ಅಂಕೆಯ ಅನಾಂಕೆಯ ಅಂತರ ದಲ್ಲಿದೆ. (midpoint of positive and negative) ಗೀತೆಯಲ್ಲಿ ನಿರ್ವಾಣವು "ಬ್ರಹ್ಮನಿರ್ವಾಣ" ಪೂಜ್ಯಪೂರ್ಣಸ್ಥಾನ. ಆ ಸ್ಥಾನಕ್ಕೆ ಬ್ರಾಹ್ಮೀಸ್ಥಿತಿಯ ಪ್ರಾಜ್ಞನನ್ನು ಶ್ರೀಕೃಷ್ಣನು ಅಂತ್ಯಕಾಲದಲ್ಲಿ ಪ್ರಾಪ್ತವಾದರೂ ಸೇರಿಸಿರುವುದು.

ಯೋಗ ವಾಸಿಷ್ಠದಲ್ಲಿ

> ಅನಿರ್ವಾಣೇ ವಿನಿರ್ವಾಣೇ ಶಾಂತಂ ಶಾಂತೇ ಶಿವೇ ಶಿವಂ ।
> ನಿರ್ವಾಣಮಪ್ಯ ನಿರ್ವಾಣಂ ಸನಭೋರ್ಥಂ ನವಾಸಿ ತತ್ ॥

ನಿರ್ವಾಣವೂ ಕೂಡ ಬೇರೊಂದೆಂಬ ಬುದ್ಧಿ ಬೇಡ. ಅನಿರ್ವಾಣವು, ಅನಿ ರ್ವಾಣದಲ್ಲಿ, ಶಾಂತವು ಶಾಂತದಲ್ಲಿ, ಶಿವದಲ್ಲಿ ಶಿವ ಸೇರಿಹೋಗುವುದು. ನಿರ್ವಾ ಣವು ಅನಿರ್ವಾಣವಾಗಿ ಆಕಾಶದಂತೆ ಆಗಿ ಅದೂ ಅಲ್ಲ ಎನ್ನುವಂತಾಗುವುದು.

ನಿಶೆಯಿಲ್ಲದ ಸೂರ್ಯನಲ್ಲಿ ನಿಶೆಯು ಸೇರಿ ತಾನೂ ಇಲ್ಲವಾಗುವಂತೆ (ನಿವೃತ್ತಿ ಯಾಗು) (ಅಸೀತೆ ಸೂರ್ಯೇ ನಿಶಾ ನಿವೃತ್ತಿವತ್) ಸತ್ಯಜ್ಞಾನಫಲದಿಂದ ನಾನಾರ್ಥನಿವೃತ್ತಿರೂಪದಿಂದ ನಿರತಿಶಯಾನಂದ ಶಿವಮಾನಂದ ಪ್ರಾಪ್ತಿಯಾಗಿ, ಅನಿರ್ವಾಣವೇ ಬ್ರಹ್ಮ ನಿರ್ವಾಣಂ, ನಿತ್ಯಶಾಂತಿಯಲ್ಲಿ ಶಾಂತವಾಗುವುದು ಎಂದು ತಾತ್ಪರ್ಯ ಪ್ರಕಾಶಕರು ವಿವರಿಸಿದ್ದಾರೆ.

ಮಹೋಪನಿಷತ್ತಿನ ಕೊನೆಯಲ್ಲಿ—

> "ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ
> ಭಾವಾಭಾವ ವಿನಿರ್ಮುಕ್ತಂ ಜರಾಮರಣವರ್ಜಿತಂ
> ಪ್ರಶಾನ್ತ ಕಲನಾರಮ್ಭಂ ನಿರಾಗಂ ಪದಮಾಶ್ರಯ
> ಏಷಾ ಬ್ರಾಹ್ಮೀಸ್ಥಿತಿ ಸ್ವಚ್ಛಾ ನಿಷ್ಕಾಮಾ ವಿಗತಾಮಯಾ"

ಎಂದು ಇದೇ ಬ್ರಾಹ್ಮೀ ಸ್ಥಿತಿ ಎಂಬ ಅಭಿಪ್ರಾಯವು ಉಲ್ಲೇಖವಾಗಿ "ಸಿದ್ಧಿ ಕಲ್ಪಪದಂ ಗತ್ವಾ, ಸ್ವಸ್ಥೋಭವ ಮುನೀಶ್ವರೇತ್" ಎಂದು ಕೆಲವೇ ಶ್ಲೋಕ ಗಳಂತರ ಸಮಾಪ್ತಿಯಾಗಿ ಈ ಬ್ರಾಹ್ಮೀ ಸ್ಥಿತಿಯ ಮಹಾತ್ಮ್ಯ ನಿರ್ಣಯವಾಗಿದೆ.

ಈ ಎರಡನೆಯ ಅಧ್ಯಾಯವು ಕೊನೆಯ ಅಧ್ಯಾಯವನ್ನು ಬಿಟ್ಟರೆ ಅತಿ ವಿಸ್ತಾರವಾದುದು. ೭೨ ಶ್ಲೋಕಗಳನ್ನೊಳಗೊಂಡು ತತ್ತ್ವವಿಚಾರಗಳನ್ನೊಳ ಗೊಂಡ ದರ್ಶನವಾಗಿದೆ. ಎರಡನೆಯ ಭಾವವಾದ "ಸತ್ಯ, ಭೂತದಯೆ"ಗೆ ಸಂಬಂಧಿಸಿದೆ. ನೇತ್ರಸ್ಥಾನ, ವಾಕ್ಕನ್ನು ನಾಲ್ಕು ವೇದಗಳನ್ನೂ ಸೂರೆಗೊಂಡಿದೆ. ಆತ್ಮವಿಚಾರ, ಅದನ್ನು ಹೇಗೆ ಸಾಧಿಸುವುದು ಹೇಳಿದೆ. ಅಲ್ಲಿಗೇ ಮುಗಿಯಲು ಅರ್ಜುನ ಬಿಡಲಿಲ್ಲ. ಆದರ್ಶವನ್ನೇನೋ ಹೇಳಿ ಆ ಆದರ್ಶವನ್ನು ಕರ್ಮರೂಪ ವಾಗಿ ಹೇಗೆ ಮಾಡಬೇಕೆಂದು ತಿಳಿಸಲು ಭಗವಂತನಲ್ಲಿ ವಿಜ್ಞಾಪಿಸಿಕೊಂಡನು. ತತ್ತ್ವವನ್ನು ಕಾರ್ಯರೂಪಕ್ಕೆ ಇಳಿಸಲು ಮಾರ್ಗ ತೋರಲು ಬೇಡಿದನು. ಅದ ರಿಂದ ಕರ್ಮಯೋಗಕ್ಕೆ ಪ್ರಾರಂಭವಾಯಿತು.

ಉಪನಿಷತ್ತು, ಬ್ರಹ್ಮವಿದ್ಯಾ, ಯೋಗಶಾಸ್ತ್ರಗಳನ್ನು ಒಳಕೊಂಡ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯ ಸಂಪೂರ್ಣ.

# ಅಧ್ಯಾಯ ೩: ಕರ್ಮಯೋಗ

## ಕರ್ಮನಿಷ್ಠಾ ಪ್ರಧಾನ; ಅದರ ಉಪಾಯದಿಂದ ಜ್ಞಾನನಿಷ್ಠೆ ಪಡೆಯುವುದು

ಎರಡನೆಯ ಅಧ್ಯಾಯದಲ್ಲಿ ತತ್ತ್ವಜ್ಞಾನವನ್ನು ಸಾಮಾಜಿಕಹಿತದಿಂದ, ಭೂತಭವಿಷ್ಯವರ್ತಮಾನದ ದೃಷ್ಟಿಯಿಂದ, ಇಹಪರವಿವೇಚನೆಯಿಂದ ಉಗ್ರ ಪರೀಕ್ಷೆಗೆ ಒಡ್ಡಲಾಗಿದೆ. ಮೂಢಭಕ್ತಿ ಅನುಮಾನಗಳನ್ನೆಲ್ಲ ತೊಳೆದು ದೃಢ ನಂಬಿಕೆಗೆ ಸೂತ್ರವಾಗಿದೆ.

> ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।
> ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥
> ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।
> ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥೨॥

ಕರ್ಮಕ್ಕಿಂತಲೂ ತತ್ತ್ವವಿಚಾರಬುದ್ಧಿಯು ಶ್ರೇಷ್ಠವಾದ ಮೇಲೆ ನನ್ನನ್ನು ಈ ಘೋರ ಯುದ್ಧಕರ್ಮಕ್ಕೆ ಏಕೆ ನುಗ್ಗಿಸುತ್ತೀ? ಮಿಶ್ರವಾಕ್ಯಸಿಂದ ನನ್ನ ಬುದ್ಧಿಯು ಮೋಹಮಯವಾಯ್ತು. ಆದುದರಿಂದ ಯಾವುದಾದರೂ ಒಂದನ್ನು ನಿಶ್ಚಯಿಸಿ, ನನಗೆ ಶ್ರೇಯಸ್ಸನ್ನುಂಟುಮಾಡುವುದನ್ನು ಹೇಳು. ಈ ಅರ್ಜುನ ಸೂಜಿಯನ್ನು ಹಾಕಿ ದಬ್ಬಳವನ್ನು ತೆಗೆಯುವ ಇಸಂ. ಕೃಷ್ಣನೇನೋ ಧನು ರ್ಬಾಣಗಳನ್ನು ಹೊತ್ತಿಲ್ಲ. ಹೊತ್ತಿರುವವ, ಕಾದಬೇಕಾಗಿರುವವ ಅರ್ಜುನ. ಕೃಷ್ಣನೇನಿದ್ದರೂ ಸಾರಥಿ, ರಥವನ್ನು ನಡಸುವವನು. ಆದುದರಿಂದಲೇ ಮಾರ್ಗದರ್ಶಿ. ತಾನೇ ಕೆಲಸಮಾಡದಿದ್ದರೂ ಹಾಗೆ ಮಾಡೆಂದು ಹೇಳುವ ಅಂತರ್ಯಾಮಿ. ಕರ್ತವ್ಯಮಾರ್ಗವನ್ನು ಸೂಚಿಸುವ ಮೇಲಧಿಕಾರಿ. ಆದುದರಿಂದ ಅರ್ಜುನನು ತನಗೆ ಶ್ರೇಯಸ್ಸು ಯಾವುದೋ ನಿಶ್ಚಯಿಸಿ ಹೇಳೆಂದು ಒಂದೇ ಮಾತು 'ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯಃ' ಎಂದು ಬೇಡಿದನು. ಅವನು ತನಗೆ ಬೇಕಾದುದನ್ನು 'ಪ್ರೇಯಃ' ಕೇಳಲಿಲ್ಲ. ಕಠೋಪನಿಷತ್‌ನಲ್ಲಿ ಯಮಧರ್ಮನು 'ಶ್ರೇಯಶ್ಚ ಮನುಷ್ಯಮೇತ್ . . . ಯೋಗಕ್ಷೇಮಾದ್ವೃಣೀತೆ' ಎಂದು ನಚಿಕೇತನಿಗೆ ಹೇಳಿದ ಪ್ರಸಿದ್ಧ ಶ್ಲೋಕವು ಜ್ಞಾಪಕ ಬರುತ್ತದೆ. ಯೋಗ

ಕ್ಷೇಮಕ್ಕಾಗಿ ಧೀರನು ಶ್ರೇಯಸ್ಸನ್ನು, ತನಗೆ ಶ್ರೇಯಸ್ಕರವಾದುದನ್ನು, ತನಗೂ ಇತರರಿಗೂ ಇಹಪರಕ್ಕೆ ಸಾಧನವಾಗುವುದನ್ನು ಅವಲಂಬಿಸುತ್ತಾನೆ. 'ಯೋಗ' ಎಂದರೆ ಪಡೆವುದು. ಕ್ಷೇಮ ಸಂಭವಿಸುವುದು ಎಂದರೆ ಪಡೆದುದನ್ನು ಸರಿಯಾಗಿ ಕಾಪಾಡಿಕೊಳ್ಳುವುದು; ಯೋಗಕ್ಷೇಮವೆಂದರೆ ಸಾಧನವನ್ನು ಪಡೆದು ಕಾಪಾಡಿ ಕೊಳ್ಳುವ ಮಾರ್ಗವನ್ನು ಹಿಡಿಯಬೇಕು. ಅದಕ್ಕಾಗಿಯೇ ಅರ್ಜುನನು ಸರ್ವ ಕಲ್ಯಾಣ ಕರ್ಮವನ್ನು ಹೇಳಲು ಯಾಚಿಸಿದ್ದಾನೆ. ನಿಶ್ಚಯಿಸುವ ಭಾರ ಪರ ಮಾತ್ಮನ ಮೇಲೆ ಹಾಕಿದ್ದಾನೆ. ಕೆಲವು ಶ್ಲೋಕಗಳ ಮುಂದೆ ಪರಮಾತ್ಮನೂ "ಶ್ರೇಯಃ ಪರಮವಾಪ್ಸ್ಯಥ" (೩, ೧೧) ಎಂದು 'ಪರಮ ಶ್ರೇಯಸ್ಸನ್ನು ಪಡೆದುಕೊಳ್ಳಿರಿ' ಎಂದಿದ್ದಾನೆ. ತಾನು ಉಪದೇಶಿಸುವುದು ಬರಿಯ ಶ್ರೇಯ ಸ್ಸಲ್ಲ. "ಶ್ರೇಯಃ ಪರಮಂ" ಆತನಿಗೊಬ್ಬನಿಗೆ ಅಲ್ಲ. ಹೇಳುವ ಕರ್ಮ ಮಾರ್ಗ ಮನುಷ್ಯದೇವತೆಗಳೆಲ್ಲರಿಗೂ ಪರಮ ಶ್ರೇಯಸ್ಸನ್ನು ಕೊಡುವ ಮಾರ್ಗ. ಎಲ್ಲರ ಹಿತಕ್ಕಾಗಿ, ಸಮೂಹಹಿತಕ್ಕಾಗಿ, ಅನ್ಯೋನ್ಯ ಹಿತಕ್ಕಾಗಿ, ಸಮಾಜ ಹಿತಕ್ಕಾಗಿ.

ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥೩॥

ಹೇಳುವುದು "ಮಯಾನಘ", 'ಅನಘ'—ಪಾಪರಹಿತ, ಆದುದರಿಂದ ಅರ್ಜುನ ತನ್ನವನು. ಪಾತ್ರವಾದರೂ ಎಂತಹದು? ಎಷ್ಟು ಪ್ರೀತಿಯಿಂದ ಹೇಳಿರಬೇಕು. ಮುಂಚೆ ಹೇಳಿರುವುದು ಲೋಕದಲ್ಲಿರುವ ಎರಡು ಮಾರ್ಗಗಳು. ಲೋಕಸೂಚಕ ಅಧಿಕಾರಿಭೇದಿಂದ ಜ್ಞಾನ, ಕರ್ಮ ಎಂದು ಎರಡು ನಿಷ್ಠೆಗಳು. ಪರಿಪಕ್ವವಾಗಿ ಶುದ್ಧಾಂತಃಕರಣವುಳ್ಳವರಿಗೆ ಜ್ಞಾನಯೋಗವೂ, ಇನ್ನೂ ಆ ಸ್ಥಿತಿಗಾಗಿ ಅಭ್ಯಾಸಿಸುತ್ತಿರುವವರಿಗೆ ಕರ್ಮಯೋಗವೂ ಹೇಳಲ್ಪಟ್ಟಿತು. ತಾಯಿ ಮಕ್ಕಳಿಗೆಲ್ಲ ಒಂದೇ ತರಹದ ಆಹಾರ ಕೊಡುವುದಿಲ್ಲ. ತಾಯಿಗೆ ಮಕ್ಕಳಲ್ಲಿ ತಾರತಮ್ಯವಿಲ್ಲ. ಜೀರ್ಣಿಸಿಕೊಳ್ಳಬಲ್ಲ ಬಲಯುತವಾದ ಮಗುವಿಗೆ ಪುಷ್ಟಿ ಯಾಗಲು, ಅನ್ನ, ಪಲ್ಯ, ಭಕ್ಷ್ಯ ಕೊಡುವಳು; ಎಳಸಾದ ಬೆಳೆಯುತ್ತಿರುವ ಮಗುವಿಗೆ ಹಾಲೆರೆಯುವಳು. ಎರಡೂ ಆಹಾರವೇ, ಭೇದವಿದ್ದರೂ, ಅವರವ ರಿಗೆ ಯುಕ್ತವಾದ ಆಹಾರ. ಅವರವರು ಜೀರ್ಣಿಸಿಕೊಳ್ಳಬಹುದಾದ ಆಹಾರ ಅವರವರು ಸೇವಿಸಬೇಕು. ಅದಕ್ಕೆ ಅವರು ಅಧಿಕಾರಿ. ಅಂತಸ್ತಿನ ಮೇಲೆ

ಹೋಗುತ್ತದೆ. ತಲೆಗೆಲ್ಲ ಒಂದೇ ಮಂತ್ರವಲ್ಲ. ಅವರವರಿಗೆ ಸಾಧ್ಯವಾದುದನ್ನು ಅವರವರು ಅಭ್ಯಸಿಸಲು ಅವಕಾಶವಾಗುವ ಮಾರ್ಗಗಳು. ಅದರಲ್ಲೇನು ಹೆಚ್ಚು ಕಡಮೆಯೆಂದು ಭಾವಿಸಬಾರದು. ನಾವು ಈ ಮೂರನೇ ಅಧ್ಯಾಯ ವನ್ನು ಓದುವಾಗ ಪರಮಾತ್ಮ ಗೀತೆಯಲ್ಲಿ ಕರ್ಮಯೋಗವನ್ನೆ ಸಾಧಿಸಿದ್ದಾ ನೆಂದು ಅಭಿಪ್ರಾಯ (ಶ್ರೀ ತಿಲಕರಂತೆ) ಪಡುವೆವು. ನಾಲ್ಕನೆಯ ಅಧ್ಯಾಯ ಓದಿದಾಗ ಗೀತೆಯಲ್ಲಿ ಪರಮಾತ್ಮನು ಜ್ಞಾನಯೋಗವನ್ನೆ ಸಾಧಿಸಿದ್ದಾನೆಂದು (ಶ್ರೀ ಶಂಕರರಂತೆ ಅಭಿಪ್ರಾಯಪಡುವೆವು. ಹನ್ನೆರಡನೆಯ ಅಧ್ಯಾಯವನ್ನು ಓದುವಾಗ ಗೀತೆಯಲ್ಲಿ ಪರಮಾತ್ಮನು ಭಕ್ತಿಯೋಗವನ್ನೆ ಸಾಧಿಸಿದ್ದಾನೆಂದು (ಶ್ರೀ ರಾಮಾನುಜರಂತೆ) ಅಭಿಪ್ರಾಯ ಪಡುವೆವು. ಗೀತೆಯನ್ನು ಆದ್ಯಂತ ವಾಗಿ ಪಠಿಸಿದ ಮೇಲಲ್ಲವೇ, ಕರ್ಮ, ಜ್ಞಾನ, ಭಕ್ತಿಗಳೆಂಬ ಮೂರು ನೂಲಿ ನಿಂದಲೂ ಬಲವಾದ ಹಗ್ಗವನ್ನು ಹೆಣೆದು, ಸಂಸಾರ ಸಮುದ್ರದಲ್ಲಿ ಆಸೆ ತೊರೆದು ಕೈಯಾಡಿಸುತ್ತಿರುವವರ ಆನರೆಗಾಗಿ ಹಿಡಿದು ತನ್ನಲ್ಲಿಗೆ ಎಳೆದು ಕೊಳ್ಳಲು ಹೆಣೆದ ಹಗ್ಗವನ್ನು ನಮ್ಮಲ್ಲಿಗೆ ಬೀಸಿರುವನು ಎಂಬ ಅಭಿಪ್ರಾಯ ಬರುವುದು. ನಾಲ್ಕನೆಯ ಅಧ್ಯಾಯವು ಜ್ಞಾನಯೋಗವೆಂದು ಸಾರಿದ್ದರೂ, ಎಷ್ಟು ಕಡೆ ಕರ್ಮದ ವಿಚಾರ ಬರುತ್ತೆ! ಜ್ಞಾನವು ಕರ್ಮದ ಮೂಲಕವೇ ಮನೋವಾಕ್ಕಾಯ ಕರ್ಮಗಳಲ್ಲೇ ಪ್ರಕಟವಾಗಬೇಕು. ಕರ್ಮವು ಜ್ಞಾನದಲ್ಲೇ ಸಮಾಪ್ತಿ ಹೊಂದಬೇಕು. ಕವಿ ರವೀಂದ್ರರು 'ನಿಜಿಯಾದ ಜ್ಞಾನವನ್ನು ಸಾಧಿಸ ಬೇಕಾದರೆ ಪ್ರೀತಿ, ಕರ್ಮ ಕಾರ್ಯಗಳಿಂದಲೇ ಜ್ಞಾನದ ಪರಿಸಮಾಪ್ತಿ. ಬರಿಯ ವಿದ್ವತ್ತಿಗಲ್ಲ; ಅರಿವಿಗೆ' ಎಂದು ಜ್ಞಾನ ಕರ್ಮ ಸಮನ್ವಯ ಮಾಡಿದ್ದಾರೆ.

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥೪॥

ಆದುದರಿಂದ ನಿಷ್ಕಾಮಕರ್ಮವನ್ನು ಮಾಡಿ ಅಂತಃಕರಣಶುದ್ಧಿಯನ್ನು ಪಡೆಯದೆ ಬರಿಯ ಮಲಿನಾಂತಃಕರಣವುಳ್ಳವನು ಕೇವಲ ಸಂನ್ಯಾಸ ಮಾತ್ರ ದಿಂದಲೇ (ಬರಿಯ ಹೊರಗಿನ ವೇಷದಿಂದಲೇ) ಸಿದ್ಧಿಯನ್ನು ಕೈವಲ್ಯವನ್ನು ಪಡೆಯುವುದಿಲ್ಲ. ಸಂನ್ಯಾಸವೆಂದು ಹೇಳಿಕೊಂಡು ಅಥವಾ ವೇಷ ಧರಿಸಿಕೊಂಡು ಎಲ್ಲವನ್ನೂ ಬಿಟ್ಟೆನೆಂದೂ, ನಾನು ಏನನ್ನೂ ಮಾಡುವುದಿಲ್ಲವೆಂದೂ ಹೇಳಿ ಕೊಂಡು ಕುಳಿತರೆ ಆಯಿತೋ?

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫॥

ಜ್ಞಾನಿಯಾಗಲಿ ಅಜ್ಞಾನಿಯಾಗಲಿ ಅವರವರ ಕರ್ಮಕ್ಕನುಸಾರವಾಗಿ ಯಾವಾಗ್ಯೂ ಯಾವುದಾದರೂ ಕಾಯಾ ಮನಸಾ ವಾಚಾ ಕರ್ಮಗಳನ್ನು ಮಾಡುತ್ತಲೇ ಇರುವರು. ಕೂತಪ ಬಾಯಲ್ಲಿ ಉಪದೇಶವನ್ನೋ, ಮನದಲ್ಲಿ ಜಪವನ್ನೋ, ಮಾಡುತ್ತಿರುವನು. ಮನಸಾ ವಾಚಾ ಕರ್ಮವನ್ನು ಮಾಡಿ ದಂತಲ್ಲವೇ. ಯಾವಾಗ್ಯೂ ಕರ್ಮವನ್ನು ಯಾವ ರೀತಿಯಲ್ಲಾದರೂ ಮಾಡದೆ ಯಾವ ಪ್ರಾಣಿಯೂ ಕ್ಷಣವಾದರೂ ಸುಮ್ಮನಿರುವುದಿಲ್ಲ. "ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್" ಎನ್ನುವುದಕ್ಕೆ ಸಮನಾದ 'ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ' ಎನ್ನುವ ವಾಕ್ಯವು ೧೮ ನೇ ಅಧ್ಯಾಯದ ೧೧ ನೇ ಶ್ಲೋಕದ ಆದಿಯಲ್ಲಿ ಬರುವುದು.* ದೇಹಧಾರಿಯಾದವ ನಿಂದಲೂ ಯಾವುದಾದರೂ ಒಂದು ಕರ್ಮವನ್ನು ಮಾಡದೆಯೇ ಇರುವುದು ಶಕ್ಯವೇ ಇಲ್ಲ. ಸಂಸ್ಕಾರಾನುಗುಣವಾಗಿ ಕರ್ಮ ಮಾಡುತ್ತಿರುವಾಗ ಅದರ ಫಲವನ್ನು ತ್ಯಾಗಮಾಡತಕ್ಕವನೇ ತ್ಯಾಗಿಯೆಂದು ಆ ಶ್ಲೋಕದ ಉತ್ತರಾರ್ಧ ದಲ್ಲಿ ಉಕ್ತವಾಗಿದೆ. ಕರ್ಮತ್ಯಾಗವು ತ್ಯಾಗವಲ್ಲ. ಕರ್ಮಫಲ, ಅದೂ ಮಾಡು ತ್ತಿರುವ, ನಿಷ್ಕಾಮ ಸತ್ಕರ್ಮಫಲತ್ಯಾಗವೇ ತ್ಯಾಗ; ಆತನೇ ತ್ಯಾಗಿ. ಬಂಗಾಳಿ ಯಲ್ಲಿ "ತ್ಯಾಗಿ"ಗೆ "ತಾಗಿ" ಎನ್ನುತ್ತಾರೆ. "ಗೀತಾ ಗೀತಾ ಗೀತಾ ಗೀ" ಎಂದು ಗೀತಾಪಠಣದಲ್ಲಿ ತನ್ಮಯನಾದರೆ "ಮರಾ ಮರಾ ಮರಾ" ಎಂದು ಹೇಳುತ್ತಿದ್ದ ಮಹರ್ಷಿಯು "ರಾಮಮಯ"ನಾದಂತೆ ಗೀತಾ ಉಚ್ಚರಣದ ಜ್ಞಾನಿಯೂ ತಾಗೀ (ಅಥವ ತ್ಯಾಗಿ) ಯಾಗುವನೆಂದು ವಂಗಭಾಷೆಯಲ್ಲಿ ಶ್ರೀ ರಾಮಕೃಷ್ಣರು ಹೇಳುತ್ತಿದ್ದರು.

ಒಂದು ಧರ್ಮಸಂಸ್ಥೆಯ ಖರ್ಚಿನಲ್ಲಿ ಒಂದಾವರ್ತಿ "ಸುಮ್ಮನೆ ಕುಳಿತಿರುವ ಸ್ವಾಮಿಯ ಊಟಉಪಚಾರಕ್ಕಾಗಿ" ಎಂದು ಒಂದು ಲೆಖ್ಖವಿದ್ದುದನ್ನು ಒಬ್ಬ ಹೊಸ ಅಧಿಕಾರಿಯಾಗಿ ಬಂದವನು ನೋಡಿ, ಆ ಸುಮ್ಮನೆ ಕುಳಿತಿರುವವನಿಗೆ ವೃಥಾ ಏಕೆ ಊಟ ಉಪಚಾರದ ಖರ್ಚು, ಎಂದು, ತನ್ನ ಹೊಸ ಅಧಿಕಾರದ ಹುಮ್ಮಸ್ಸಿನಲ್ಲಿ ಆ ಖರ್ಚನ್ನು ತಪ್ಪಿಸಬೇಕೆಂದೂ ಈ ಆಹಾರದ ಅಭಾವದಲ್ಲಿ ಆ ಸೋಂಭೇರಿಗೆ ಅನ್ನ ಹಾಕುವುದು ವ್ಯರ್ಥವೆಂದೂ ಆತನನ್ನು ಹೋಗಿ ಕೇಳಿದ

ನಂತೆ: 'ಏನು ಮಹಾ ಕೆಲಸ ನೀವು ಮಾಡುತ್ತೀರಿ? ಏಕೆ ಸುಮ್ಮನೆ ಕುಳಿತ ನಿಮಗೆ ಆಹಾರ ಹಾಕಬೇಕು?" ಎಂದು, ಆತ ಹೇಳಿದನಂತೆ: "ಸರಿ, ಸುಮ್ಮನೆ ಕುಳಿತಿರುವುದು ಹಾಗಾದರೆ ಅಷ್ಟು ಸುಲಭವೆಂದು ತಿಳಿದಿದ್ದೀರಾ?" ಎಂದು. ಅಧಿಕಾರಿ "ಹೌದು ಸುಲಭವೇ." ಎಂದ. "ಹಾಗಾದರೆ ನೀವು ಒಂದೊಪ್ಪತ್ತು ಇಲ್ಲಿಯೇ ನನ್ನ ಮುಂದೆ ಸುಮ್ಮನೆ ಕುಳಿತುಕೊಳ್ಳಿ ನೋಡೋಣ." ಅಧಿಕಾರಿ "ಇದೇನು ದೊಡ್ಡ ಕೆಲಸ ಹೇಳಿದಿರಿ" ಎಂದು ತೋರಲು ಕುಳಿತನಂತೆ. ಕೊಂಚ ಹೊತ್ತಿಗೆ ಕೈಕಾಲು ಆಡಿಸಲು, ಅತ್ತಿತ್ತ ನೋಡಲು ಸುರುಮಾಡಿದ. "ಏನ್ರಿ, ಇದೇನೋ ಸುಮ್ಮನೆ ಕುಳಿತುಕೊಳ್ಳುವುದು?' ಎಂದು ಕೇಳಲು, "ಕೈ ಕಾಲು ಜೊಂ ಹಿಡಿದರೆ ಆಡಿಸಬಾರದೇನ್ರಿ?' ಎಂದು ರೇಗಿಯೇ ಕಣ್ಣು ಬಿಟ್ಟನಂತೆ. ಸುಮ್ಮನೆ ಕೂಡುವುದೂ ಸಾಧ್ಯವಲ್ಲದ ಕೆಲಸವೆಂದೂ ಏನಾದರೂ ಅತ್ತಿತ್ತ ನೋಡುತ್ತ, ಯೋಚಿಸುತ್ತ, ಕೈಕಾಲಾಡಿಸುತ್ತಲಾದರೂ ಇರಬೇಕಾಗುತ್ತದೆಂದೂ ಆಗ ಆ ಅಧಿಕಾರಿಗೆ ವೇದ್ಯವಾಯಿತಂತೆ. "ನಾ ಕೂಡುವುದೂ ಪ್ರಯತ್ನವಷ್ಟೆ. ನಿಗ್ರಹಕ್ಕಾಗಿ ಕಷ್ಟಪಡುವುದು" ಎಂದು ಆತ ಹೇಳಿದ ಮೇಲೆ ಅಧಿಕಾರಿ ಆತನ ಖರ್ಚು ವಜಾಮಾಡುವ ಹಂಬಲವನ್ನು ಬಿಟ್ಟನಂತೆ.

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥

ಯಾವ ಮೂಢಾತ್ಮನು ವಾಗಾದಿ ಕರ್ಮೇಂದ್ರಿಯಗಳನ್ನು ನಿಗ್ರಹಿಸಿಕೊಂಡು ವಿಷಯಾದಿಗಳನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ಇರುವನೋ ಅವನು ಮಿಥ್ಯಾ ಚಾರಿಯೆಂದು ಕರೆಯಲ್ಪಡುವನು. ಬುಡಕ್ಕೇ ತಂದ ಪರಮಾತ್ಮ. ಅಂತಃ ಕರಣಶುದ್ಧಿಯನ್ನೇ ನೋಡಲು ಹತ್ತಿದ. ಮನಸ್ಸು ನಿಷ್ಕಲ್ಮಷವಿರಬೇಕು. ಮನೋನಿಗ್ರಹವಿರಬೇಕು. ತತ್ಪರಿಣಾಮವಾಗಿ ಇಂದ್ರಿಯನಿಗ್ರಹವಿರಬೇಕು. ಇಲ್ಲವಾದರೆ ಬಕಧ್ಯಾನವಾದೀತು. ಒಂದು ಕಾಲ ಮೇಲೆ ನಿಂತು ಕಣ್ಣು ಅರ್ಧ ಮುಚ್ಚಿದ್ದರೂ, ಕಪ್ಪೆಗೆ ಮೀನಿನ ಮೇಲೇ ಧ್ಯಾನ. ಮನಸ್ಸೂ ಇಂದ್ರಿಯಗಳೂ ಇತರ ವಿಷಯಗಳಿಗೆ ಓಡದಂತೆ ಸತ್ಕರ್ಮವಾಗಲಿ, ಧ್ಯಾನವಾಗಲಿ ಮಾಡುತ್ತಿರ ಬೇಕು. ಒಂದು ಆನೆಯು ಸೊಂಡಿಲಾಡಿಸುತ್ತ ನಿರರ್ಥಕ ಆಯಾಸದಿಂದಿರು ವುದು. ಶಮನಮಾಡಲು ಮಾವಟಿಗನು ಸೊಂಡಿಲಿಗೆ ಒಂದು ಭಾರಿ ಸರಪಣಿ ಯನ್ನು ಕೊಡುತ್ತಾನೆ. ಮನಸ್ಸು ಅಲ್ಲಿ ಇಲ್ಲಿ ತಿರುಗಾಡದೆ ಸ್ಥಿರವಾಗಿರಲು

ಅದಕ್ಕೆ ಒಂದು ಕೆಲಸವಿರಬೇಕು. ಅದಕ್ಕಾಗಿ ಸರಿಯಾದ ಒಂದು ಸತ್ಕರ್ಮ ಕೊಡಬೇಕು. ಇಲ್ಲವಾದರೆ ಆನೆಯು ಸೊಂಡಿಲನ್ನು ಅತ್ತ ಇತ್ತ ಆಡಿಸುತ್ತಾ ಗ್ರಹಿಸಲು ಏನಾದರೂ ಸಿಕ್ಕೀತೇ ಎಂದು ತಡವರಿಸುವಂತೆ ಮನವು ಅತ್ತಿತ್ತ ಆಡುತ್ತ ಏನಾವರೂ ಪ್ರವಹಿಸಲು ವಿಷಯಾಸಕ್ತಿಯನ್ನು ತಡಕುತ್ತದೆ.

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥೭॥

ಯಾವನು ಮನಸ್ಸಿನಿಂದ ಜ್ಞಾನೇಂದ್ರಿಯಗಳನ್ನು ತಡೆದು, ಫಲೇಚ್ಛಾರಹಿತ ನಾಗಿ, ಕರ್ಮೇಂದ್ರಿಯಗಳಿಂದ ನಿಷ್ಕಾಮಕರ್ಮಗಳನ್ನು ಮಾಡುತ್ತಿರುವನೋ ಅವನು ಅಶುದ್ಧ ಅಂತಃಕರಣವುಳ್ಳ ಮಿಥ್ಯಾಚಾರಿಗಿಂತಲೂ ಶ್ರೇಷ್ಠನು. ಇಂಥಾ ಕರ್ಮಯೋಗಿ ಬೇಸಾಯಮಾಡಿದರೆ, ಅನ್ನ ಒಂದೇ ಸಾಧನವಲ್ಲ, ಧರ್ಮ ಸಾಧನ, ಅನ್ನ ದಾರಿ. ಹಿಟ್ಟು ಗುರಿಯು, ಪರರಿಗೆ ಹಿಟ್ಟು ಒದಗಿಸುವ ಗುಟ್ಟೇ ಗುರಿ. ಆತನ ಮನಸ್ಸು ಫಲಾಸಕ್ತಿ ಬಿಟ್ಟು ಕರ್ಮದಲ್ಲೇ ರಮಿಸುತ್ತೆ. ಆತ್ಮ ವಿಕಾಸವಾಗುತ್ತೆ. ಇಹವೂ ಸಾಧನೆ. ಪರರಿಗೂ ಹಿತ. ಪರಕ್ಕೂ ಸಾಧಕ. ಇವೇ ಸೇವಾತತ್ತ್ವ.

ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋಹ್ಯಕರ್ಮಣಃ ।
ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥೮॥

ಈತ ಪ್ರಯತ್ನ ಮಾಡುತ್ತಾ ಇದ್ದಾನೆ. ಇದರಿಂದ ಕರ್ಮಮಾಡುವುದರ ಆಗತ್ಯ ವೇದ್ಯವಾಗುತ್ತೆ. ಕರ್ಮವನ್ನು ಮಾಡದವನಿಗೆ ಶರೀರ ನಿರ್ವಾಹವು ಕೂಡ ಕಷ್ಟಸಾಧನವಾಗುತ್ತೆ. ಶರೀರದ ನಿತ್ಯಪೋಷಣೆಯನ್ನು 'ಶರೀರ ಯಾತ್ರಾಪಿ' ಎಂದಿದೆ. ದೇಹಯಾತ್ರೆ ನಡೆಯಬೇಕಾದರೆ ಪ್ರಯತ್ನ ಬೇಕು. ತೈತ್ತಿರೀಯದಲ್ಲಿ "ಸತ್ಯಂ ವದ ಧರ್ಮಂ ಚರ" ಎಂದು ಶಿಷ್ಯ ತಾನೇ ಸ್ವತಂತ್ರ ನಾಗಿ ವ್ಯಾಸಂಗ ಮುಗಿದುಹೋಗುವ ವೇಳೆಗೆ ಉಪದೇಶಮಾಡುವಾಗ 'ಸತ್ಯಾನ್ನ ಪ್ರಮದಿತವ್ಯಂ, ಧರ್ಮಾನ್ನ ಪ್ರಮದಿತವ್ಯಂ' ಎಂದು, ದುಡಿದು ಸಂಪಾದಿಸಿ ಊಟಮಾಡಬೇಕೆಂದು ಹೇಳಿದೆ. ಅದರಲ್ಲೇ ಮುಂದೆ 'ಅನ್ನಂ ಬಹು ಕುರ್ವೀತ ತದ್ವ್ರತಂ' ಎಂದು ಶಾಸನಮಾಡಿದೆ. ಅನ್ನವನ್ನು ಬಹುವಾಗಿ ಮಾಡಲು ಬೆಳೆವ ಆರಂಬಗಾರನು ನೇಗಿಲಯೋಗಿಯಲ್ಲವೆ? ನಾವು ಪ್ರತಿದಿನ, ಪ್ರತಿ ತುತ್ತು ಊಟಮಾಡುವಾಗಲೂ ಆ ಅನ್ನವು ನಮ್ಮ ಬೆವರುನೀರಿನ ತೇವದ

ತಾಪದಲ್ಲಿ ಬೆಂದಿದೆಯೋ ಅಥವಾ ಪರರ ಕಣ್ಣೀರಿನ ಬೇಗುದಿಯಲ್ಲಿ ಬೆಂದಿದೆಯೋ ಎಂದು ತುತ್ತುತುತ್ತಿಗೂ ವಿಮರ್ಶಿಸಿ ನೋಡಬೇಕು. ಬಿಟ್ಟಿ ಕೂಳಿಗೂ ಕಳ್ಳ ಕೂಳಿಗೂ ಅಲ್ಲದ ಸಲ್ಲದ ಮೃಷ್ಟಾನ್ನಕ್ಕೂ ಆಸೆ ಬೀಳಬಾರದು. ಇದೇ ಶರೀರಯಾತ್ರೆಯ ಮರ್ಮ. ಶಂಕರರು ಕ್ಷುತ್‌ವ್ಯಾಧಿಚಿಕಿತ್ಸಿತಾಂ—ಪ್ರತಿದಿನ ಹಸಿವೆಂಬ ರೋಗದ ಚಿಕಿತ್ಸೆಗಾಗಿ, ಗಾಂಧಿಯವರು ಇರುವ ಮನೆಯ ಬಾಡಿಗೆಗಾಗಿ, ವಿಜ್ಞಾನಿಗಳು ಯಂತ್ರಕ್ಕೆ ಕೆಲಸಮಾಡಲು ಶಕ್ತಿಗೆ ಎಣ್ಣೆಯಂತೆ ಆಹಾರ ತೆಗೆದುಕೊಳ್ಳಬೇಕೆಂದು ಹೇಳುತ್ತಾರೆ. ಅದಕ್ಕೆ ಸ್ವಪ್ರಯತ್ನ ಬೇಡವೆ? "ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ, ಜ್ಞಾನವೈರಾಗ್ಯ ಸಿಧ್ಯರ್ಥಂ ಭಿಕ್ಷಾಂ ದೇಹೀ ಚ ಪಾರ್ವತಿ" ಎಂದು ಶಂಕರರು ಅನ್ನಪೂರ್ಣಾಷ್ಟಕದಲ್ಲಿ ಹೇಳಿರುವ ಶ್ಲೋಕವು ಎಷ್ಟು ಭಾವಗರ್ಭಿತವಾಗಿದೆ! ಸುಮ್ಮನೆ ನಾಲಿಗೆಗೆ ರುಚಿಗಲ್ಲ, ಬೊಜ್ಜು ಬೆಳಸಲಲ್ಲ, ಆಸೆಗಲ್ಲ, ತಿನ್ನುವುದು. ಜ್ಞಾನ ವೈರಾಗ್ಯ ಸಿದ್ಧ್ಯರ್ಥಂ. ಅದೂ 'ಭಿಕ್ಷಾಂ.' ಸದಾಪೂರ್ಣೆಯಾದ, ಎಲ್ಲರಿಗೂ ಊಟಕ್ಕಿಡುವ ಶಂ=ಎಂದರೆ ಸುಖವನ್ನು, ಕರ=ಎಂದರೆ ಮಾಡುವವನ ಪ್ರಾಣವಲ್ಲಭೆ ಎಂದರೆ ಸುಖಪ್ರದಾಯಕಳು, ಸಕಲ ಪ್ರಾಣಿಗಳಿಗೂ ಮಾತೆಯಾದ ದೇವಿಯಲ್ಲಿ "ಅಮ್ಮಾ ಅನ್ನ" ಎಂದು ಕಂದ ಕೇಳಿಕೊಳ್ಳುವಂತೆ ಭಿಕ್ಷೆಯನ್ನು ಯಾಚಿಸಿ ತೆಗೆದುಕೊಂಡು, ವಿನಯದಿಂದ– ಭೋಗಿಸದೆ –ಉಣಬೇಕು. ಪಾರ್ವತಿ= ಪರ್ವತರಾಜನ ಮಗಳು. ಪರ್ವತದಲ್ಲಿ ಬೆಳೆವ ಕಂದಮೂಲ, ಫಲ ಭಕ್ಷ್ಯಗಳನ್ನು ಕೊಡುವ ಮನೆಮಗಳು. ಈ ಭಾವದಿಂದ ಶರೀರಯಾತ್ರೆಯನ್ನು ನಿರ್ವಹಿಸಬೇಕು. "Pilgrim's Progress"ನ ತತ್ತ್ವ ಶರೀರಯಾತ್ರೆಯಲ್ಲಿಯೇ ಸೂಚಿತವಾಗಿದೆ. ಈ ಶರೀರವು ಆತ್ಮವೆಂಬ ವಸ್ತುವನ್ನು ಪರಮಾತ್ಮನ ಸ್ಥಾನಕ್ಕೆ ಯಾತ್ರೆ ತೆಗೆದುಕೊಂಡು ಹೋಗುವ ಯಂತ್ರ. ಆದ್ದರಿಂದ ಸುಮ್ಮನಿರುವುದಕ್ಕಿಂತ ನಿಯತವಾದ ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡು. ಹಸಿವಿನಿಂದ ತಳಮಳಿಸುತ್ತ ಬಡಿಸಿ ಸಿದ್ಧವಾಗಿರುವ ಊಟದ ಮುಂದೆ ಕೂತಾಗ ಅಗತ್ಯವಾದ ಪರರನ್ನು ಕಂಡರೆ ಅದನ್ನೆತ್ತಿ ತತ್‌ಕ್ಷಣ ನೀಡುವ ತ್ಯಾಗದಾನಂದ, ನಿನ್ನ ಹಸಿವನ್ನು ನಿಗ್ರಹಿಸುವುದರಿಂದಾದ ಆನಂದದ ರುಚಿ, ತಿಳಿವರೆ –ಅದೇ ಯಜ್ಞ, ಅದೇ ಈಶ್ವರಾರ್ಪಣ. ತಾಯಿ ಮಗುವಿಗಾಗಿ ದುಡಿದು ತ್ಯಾಗದಿಂದ ತೇದಾಗ ಮಾಡಿದ ತನ್ನ ಕೆಲಸದ ವರದಿ ಪ್ರಕಟಿಸುತ್ತಾಳೆಯೆ? ವಂದನೆಗೆ ಅಪೇಕ್ಷಿಸಿಯಾಳೆ?

ವಂದಿಸಹೋದರೆ ತಾನೇನೂ ಮಾಡಲಿಲ್ಲವೆಂದಾಳು. ಆ "ಮುಕ್ತಸಂಗಸ್ಸಮಾಚರ"ಇದಲ್ಲಿ ಕ್ಲೇಶ, ಕಷ್ಟ, ಡೊಂಕು ಏನಾದರೂ ಉಂಟೆ?

ಕೂಲಿ ಕೆಲಸಕ್ಕೆ ಬೆಲೆ ಕಟ್ಟಬಹುದು. ದಕ್ಷಿಣೆಯ ಮಾತು ಹಾಗಲ್ಲ. ಕೂಲಿಯ ವಿಷಯಕ್ಕೆ ಹೆಚ್ಚುಕಡಮೆಯಾಯಿತೆಂದು ತರ್ಕ ಮಾಡಬಹುದು. ಎಷ್ಟು ದಕ್ಷಿಣೆ ಎಂದು ಕೇಳಿದವರುಂಟೆ? ಕೊಟ್ಟ ದಕ್ಷಿಣೆಗೆ ಹಿಂದೆ ಪ್ರೀತಿ ಭಕ್ತಿ ಭಾವವಿದೆಯೋ ಎನ್ನುವುದೇ ಮುಖ್ಯ.

ಹೂವಿಗೆ ತೂಕ ಉಂಟೆ? ಶ್ರೀ ರುಕ್ಮಿಣೀದೇವಿಯ ಭಕ್ತಿ ತುಂಬಿದ ಒಂದು ತುಳಸಿದಳ, ಸತ್ಯಭಾಮೆಯ ಆಡಂಬರದ ಮಣಗಟ್ಟಲೆ ಭಂಗಾರವನ್ನು ಸೋಲಿಸಿ ತುಲಾಭಾರ ತೂಗಿಸಲಿಲ್ಲವೆ? ಈಶ್ವರಾರ್ಪಣಬುದ್ಧಿ, ಭಕ್ತಿ ನಮ್ರಭಾವವೇ ಮುಖ್ಯ.

> ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ
> ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥೯॥

ಸ್ವಾರ್ಥವನ್ನು ಬಿಟ್ಟು, ಪರಾರ್ಥವಾಗಿ (ಯಜ್ಞಾರ್ಥಾತ್ Sacrifice) ಮಾಡದ ಕರ್ಮವೆಲ್ಲವೂ ಲೋಕದಲ್ಲಿ ಕರ್ಮಬಂಧನಕ್ಕೆ ಸಿಲುಕಿಸುವುವು. ಆದುದರಿಂದ ಕರ್ಮದ ಫಲಸಂಗವನ್ನೂ ಫಲಾಪೇಕ್ಷೆಯನ್ನೂ ಬಿಟ್ಟು ಕರ್ಮವನ್ನು ಚೆನ್ನಾಗಿ ಮಾಡು. "ಸಮಾಚರ" "ಮುಕ್ತಸಂಗಃ" ಎಷ್ಟು ಅರ್ಥಗರ್ಭಿತವಾಗಿದೆ. ಕಾಟಾಚಾರಕ್ಕೆ ಮಾಡುವುದಲ್ಲ. ಮಾಡುವುದು ಹಚ್ಚಿಕೊಂಡು ಸ್ವಾರ್ಥಕ್ಕಾಗಿ ಮಾಡುವುದಲ್ಲ. ಈ ಎರಡರ ಅರ್ಥ ಸಂಗ್ರಹಿಸಿ ಮಾಡಿದ ಕರ್ಮಗತಿಯಾದರೂ ಏನು—ಯಜ್ಞವೇ (Sacrifice)!

> ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
> ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್ ॥೧೦॥

ಪ್ರಜೆಯನ್ನೂ, ಯಜ್ಞವನ್ನೂ ಪ್ರಜಾಪತಿ ನಮ್ಮೊಡೆಯನು ಆದಿಯಲ್ಲಿ ಒಡನೆಯೇ ಸೃಷ್ಟಿಸಿದನು. "ಸಹ" ಅವಳಿಗಳಾಗಿ ಹುಟ್ಟಿರುವೆವು. ಯಜ್ಞವನ್ನು (Sacrifice) ಬಿಟ್ಟು ತನ್ನನ್ನು ತಾನು ಪರಾರ್ಥವಾಗಿ ಅರ್ಪಿಸದೆ ಪ್ರಜೆ (ಮನುಷ್ಯನು) ಎಂತು ಬಾಳಿಯಾನು?

ಕರ್ಮಯೋಗಿಗಳಿಗೆ ಅವರವರ ಕರ್ಮವೇ ಅವರವರ ಅಧ್ಯಾತ್ಮಶಾಲೆಯಾಗಿ ಪರಿಣಮಿಸಿತು. ಅವೇ ಸೇವಾಮಯವೂ, ಉಪಾಸನಾಮಯವೂ

ಆಯ್ತು. ಅಂಥವರ ಕರ್ಮ ನೋಡಲಿಕ್ಕೆ ಹೊರಗೆ ವ್ಯವಹಾರ, ಒಳಗೊಳಗೆ ಆಧ್ಯಾತ್ಮಿಕ.

ನೈವೇದ್ಯವೇ ಪೂಜೆಯ ಫಲವಲ್ಲ. ಈಶ್ವರದರ್ಶನವೇ ಪೂಜಾಫಲ. ನೈವೇದ್ಯ ಕೇವಲ ಕ್ಷುದ್ರಫಲ. ಈ ದೃಷ್ಟಿಯಿಂದ ಹಿಡಿ ಬಿತ್ತಿದರೂ ಹದ ನೋಡಿ ಬಿತ್ತಿದಂತೆ ಫಲವೂ ಹಸನಾದೀತು.

ಹಾಗೆ ತಾನು ತನ್ನ ಸರ್ವಾರ್ಪಣವನ್ನು, ಆತ್ಮಾರ್ಪಣವನ್ನುಮಾಡಿದರೆ ಆಗ ಕಾಮಧೇನು ಕೊಡುವ ಫಲದಂತೆ ಕರ್ಮವು ಫಲಕಾರಿಯಾದೀತು. ಕಾಮಧೇನುವು ಕೊಡುವ ಫಲ, ಹಸು ಕೊಡುವ ಹಾಲು ಸರ್ವದಾ ಪರಾರ್ಥವಾಗಿಯೆ. ನಾವು ಮಾಡಬೇಕಾದ ಕರ್ಮಗತಿಯನ್ನು ಯಾವ ಸ್ಥಿತಿಗೆ ತಂದು ನಿಲ್ಲಿಸಿದ ಪರಮಾತ್ಮ! ಅನೇನ—ಯಾವಾಗಲೂ ಕಾಮಧೇನುವಿನಂತೆ ಕರ್ಮ.

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥

ಅನ್ಯೋನ್ಯ ಸಹಾಯ ಭಾವ ಬರಿಯ ಮಾನವವರ್ಗದಲ್ಲಲ್ಲ. ಪ್ರಪಂಚ ದೃಷ್ಟಿಯಲ್ಲಲ್ಲ. ಈ ಯಜ್ಞದಿಂದ ಪರಾರ್ಥ (Sacrifice) ದೇವತೆಗಳೊಡನೆ ಕೂಡ ಅನ್ಯೋನ್ಯ ಭಾವ (Brotherly co-operation) "ಪರಸ್ಪರಂ ಭಾವಯಂತಃ" ಆ ಸಹಾಯ ಅನ್ಯೋನ್ಯಭಾವವು ಪರರಿಗಾಗಿಯೇ ಹೆಚ್ಚಾಗಿ, ಪರರಿಗಾಗಿಯೇ ಯಾವಾಗಲೂ, "ಭಾವಯಂತಃ" ತಮ್ಮ ಮನೋಚಿಂತನೆಯನ್ನೆಲ್ಲ ಮೀಸಲಾಗಿಡುತ್ತಾರೆಯೋ ಆಗ ಸರ್ವರೂ ಪರಮ ಶ್ರೇಯಸ್ಸನ್ನು ಪಡೆದುಕೊಳ್ಳುವರು. ಇವರಲ್ಲಿ ಭ್ರಾತೃಭಾವವು ಎಷ್ಟು ಚೆನ್ನಾಗಿ ಎರೆದಿದೆ! 'ಸ್ವದೇಶೋ ಭುವನತ್ರಯಂ' ಎಂದು ಶಂಕರರು ಹೇಳುತ್ತಾರಲ್ಲಾ ಅಂತೆ. ನಮ್ಮ ಕರ್ಮಗಳು ಮಾನವರ ಶ್ರೇಯಸ್ಸಿಗೆಲ್ಲ ಕಿಂಚಿತ್ಸೇವೆಯಾಗಿ ಪರಿಣಮಿಸಬೇಕು.

ದೇವಾ, ನೀನೇ ಕಾರ್ಯತಃ ಗೀತೆಯಲ್ಲಿ "ದೇವಾನ್ ಭಾವಯತಾನೇನ, ತೇ ದೇವಾ ಭಾವಯಂತು ವಃ" ಎನ್ನುವುದನ್ನು ನರನಾರಾಯಣರೂಪರಾದ ಪಾರ್ಥಕೃಷ್ಣಪಾತ್ರಗಳಲ್ಲಿ ಎಂತು ತೋರಿಕೊಟ್ಟಿದ್ದೀಯೆ! ಪರಸ್ಪರ ಭಾವಕ್ಕೆ ದೇವಮಾನವರಲ್ಲಿ, ನಿಮ್ಮ ಆದರ್ಶವೇ ಸಾಕಲ್ಲವೆ. ಅನ್ಯೋನ್ಯ ಭಾವವು ಅನನ್ಯವಾಗಿ ನಿಮ್ಮನ್ನೆಂತು ಒಂದು ಮಾಡಿದೆ! ನಿಮ್ಮಿಬ್ಬರಿಂದ ಎಂತು ಲೋಕಕಲ್ಯಾಣಕ್ಕೂ ಸರ್ವಕಾಲ, ಸರ್ವದೇಶ ಸರ್ವಜನ ಹಿತೋಪದೇಶಕ್ಕೂ ಕಾರಣವಾಗಿದೆ!

ನಿಷ್ಕಾಮಪರಾರ್ಥಸೇವೆಯು ಯಾವಾಗ್ಯೂ ನಿತ್ಯಶ್ರೇಯಸ್ಕರವು, ಸರ್ವ ಶುಭವು. ಈಶಾವಾಸ್ಯೋಪನಿಷತ್ತಿನಲ್ಲಿ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ಏವಂ ತ್ವಯಿ ನಾ ನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ" ನೂರು ವರ್ಷ "ಸಮಾಃ" (ಬರಾಬರಿ) ಸರಿಯಾಗಿ ಕರ್ಮವನ್ನು, ಸತ್ಕರ್ಮವನ್ನು, ಪರಾರ್ಥಕರ್ಮ ಮಾಡಿಕೊಂಡು ಜೀವಿಸಬೇಕು. ಈ ಕರ್ಮ ಮನುಷ್ಯನಿಗೆ ಅಂಟುವುದಿಲ್ಲ. ನಿರ್ಲಿಪ್ತಕರ್ಮ 'ಮಾ ಗೃಧಃ ಕಸ್ಯಸ್ವಿದ್ಧನಮ್' ಪರರ ಸಂಪತ್ತಿಗೆ ಆಸೆಪಡದ ಕರ್ಮ. ಜಗತ್ತಿನಲ್ಲಿ ಕಿಂಚಿತ್ ಯಾವುದಿದೆಯೋ ಎಲ್ಲ ಈಶನ ವಾಸಸ್ಥಾನವು, ಎಲ್ಲವೂ ಅವನದೇ. ಏನು ಪ್ರಾಪ್ತವಾಗಿ ಲಭಿಸುತ್ತದೋ ಅದನ್ನು ನಾನು ನನ್ನದು ಎಂಬುದನ್ನು ಬಿಟ್ಟು ಅನುಭವಿಸಬೇಕು. ಆಗ ಕರ್ಮದಿಂದ ಲಿಪ್ತನಾಗದೆ ನೂರು ವರ್ಷ ಸುಖವಾಗಿ ಬಾಳಲಾಗುತ್ತೆ. ಸೇವಾಕಾಂಕ್ಷೆಯಿಂದ ಪರಾರ್ಥಸೇವೆಯನ್ನು ಮಾಡಿದುದರಿಂದ ಸಂತುಷ್ಟರಾದ ದೇವತೆಗಳು ನಮಗೆ ಅಭೀಷ್ಟ ಭೋಗಗಳನ್ನು ಕೊಡುತ್ತಾರೆ.

> ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
> ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥

ಹೀಗೆ ಅವರಿಂದ ಪಡೆದಿರುವ ಸಂಪತ್ತನ್ನು ಪುನಃ ಸೇವಾರ್ಥವಾಗಿ ಅವರ ಇಷ್ಟವಂತೆ, ಅವರ ತೃಪ್ತಿಗಾಗಿ ಉಪಯೋಗಿಸದವನು, ಕಳ್ಳ, ವಂಚಕ. 'ಕೆರೆಯ ನೀರನು ಕೆರೆಗೆ ಚೆಲ್ಲಿ'ದಂತೆ ಕೃತಾರ್ಥತೆಯನ್ನು ಪಡೆಯಬೇಕು. ಎಲ್ಲವೂ ಆತ ಕೊಟ್ಟದ್ದೆ. ಆತ ಕೊಟ್ಟದ್ದನ್ನು ಆತನಿಗೆ ಪುನಃ ಒಪ್ಪಿಸಿ ಸಂತುಷ್ಟರಾಗಬೇಕು. ಮತ್ತೆ ಎಲ್ಲಿಂದ ನಮಗೆ ಬಂತು? "ಆರ್ ಪಾಬೇಕೊಥ" ಎಂದು ವಂಗ ವೈಷ್ಣವ ಕವಿತೆಗಳಲ್ಲಿ ಬರುವಂತೆ, ದೇವತೆಗಳಿಂದ ಏನು ಲಭಿಸಿತೋ ಅದನ್ನು ಪ್ರಿಯಜನರಿಗೂ ಪ್ರಿಯಜನರಿಂದ ಲಭಿಸುವುದನ್ನು ದೇವತೆಗಳಿಗೂ ಅರ್ಪಿಸುವುದು. ಅದರಿಂದ ದೇವಮಾನವ ಭೇದವೇ ಅಳಿಯಿತು. ದೇವನಿಗೆ ಮನುಷ್ಯತ್ವ, ಮಾನವನಿಗೆ ದೇವತ್ವ ಕೊಟ್ಟಂತಾಯಿತು. ಹೀಗೆ ಯಾವನು ಪರಾರ್ಥಸೇವೆಯಿಂದ ಉಳಿದುದನ್ನು ತಾನು ಊಟಮಾಡುತ್ತಾನೋ (ಅನುಭವಿಸುತ್ತಾನೋ) ಅವನು ಸರ್ವ ಕಿಲ್ಬಿಷ(=ದೋಷ)ಗಳಿಂದ ಪಾರಾಗುತ್ತಾನೆ.

> ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
> ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥೧೩॥

ಪರರ ಚಿಂತೆಯಿಲ್ಲದೆ ಯಾವನು ಕೇವಲ ಸ್ವಾರ್ಥದಿಂದ ಎಲ್ಲವನ್ನೂ ಸಿದ್ಧಮಾಡಿ ಕೊಂಡು ಉಣಲು ಯತ್ನಿಸುತ್ತಾನೋ, ತನಗೋಸ್ಕರವೇ ಅನ್ನ ಪಚಿಸುವವನು ಪಾಪವನ್ನೆ ಭೋಜನಗೈಯುವನು. ಆತ್ಮಕಾರಣದಿಂದ ತನ್ನೊಬ್ಬನ ಹಿತವನ್ನೇ ಬಯಸಿ ಯಾವ ಕಾರ್ಯವನ್ನೂ ಮಾಡಬಾರದು. ಸ್ವಾರ್ಥವು ನೀಗಬೇಕಾದರೆ ತಾನು ಉಣುವದನ್ನು ಪರರಿಗೂ ಅರ್ಪಿಸಿ ತಾನು ಉಣಬೇಕು. ಇದರಿಂದಲೇ ಸಂಸಾರ, ಇದರಿಂದಲೇ ಸಮಾಜ. ಬರಿಯ ಆತ್ಮತೃಪ್ತಿಗಾದರೆ ಪರಸೇವೆ ಯೆಲ್ಲಿ ಬಂತು? ತಾನು ಅನುಭವಿಸುವುದಕ್ಕೆ ಮಾತ್ರವೇ ಸಲಕರಣೆಗಳನ್ನು ಸಿದ್ಧಿಸಿಕೊಳ್ಳುವಾತ ಸ್ವಾರ್ಥದಿಂದ ಪಾಪವನ್ನೆ ಮಾಡಿ ಅದರ ಫಲವನ್ನೇ ಅನು ಭವಿಸುವನು. 'ತಾನುಂಟೋ ಮೂರು ಲೋಕ ಉಂಟೋ' ಎನ್ನುವ ತತ್ತ್ವ ವಿರಬಾರದು. ನಮ್ಮಲ್ಲಿ ಅದಕ್ಕೇ ಅತಿಥಿಸತ್ಕಾರಕ್ಕೆ ಅಷ್ಟು ಮುಖ್ಯ ಸ್ಥಾನ ಕೊಟ್ಟಿದ್ದಾರೆ. 'ಅತಿಥಿದೇವೋ ಭವ' ಎಂದು ಸಾರಿದೆ. ಅಲ್ಲದೆ ನಾವು ಉಪಯೋಗಿಸುವ ಸಾಮಾನ್ಯ ಶಬ್ದದಲ್ಲಿ ಕೂಡ ಈ ಅತಿಥಿದೇವಭಾವನೆ ಅಡಕವಾಗಿದೆ. ನಾವು ಔತಣಕ್ಕೆ ಮೃಷ್ಟಾನ್ನಕ್ಕೆ ಭೋಜನಕ್ಕೆ ಕರೆಯುವು ದಿಲ್ಲ; 'ಸಮಾರಾಧನೆ'ಗೆ ಬನ್ನಿ ಎಂದು ನಾವು ಊಟಕ್ಕೆ ಆಮಂತ್ರಿಸುವುದು. ಎಲ್ಲಾ ಅತಿಥಿಗಳನ್ನು ಸಮವಾಗಿ, ಭೇದಭಾವವಿಲ್ಲದೆ ದೇವರಂತೆ ಕಂಡು ಆರಾಧನೆಯನ್ನು ನಮ್ಮಲ್ಲಿರುವ ಅಲ್ಪವನ್ನರ್ಪಿಸಿ ಪೂಜೆಮಾಡುವ ಭಾವನೆ. ಎಷ್ಟು ಉತ್ಕೃಷ್ಟವಾಗಿದೆ ಭಾವ! ಎಷ್ಟು ಸಂಸ್ಕೃತಿ ತುಂಬಿದೆ ಆ ಪದದಲ್ಲಿ! ಒಳ್ಳೆ ಯದು ಸಂಭವಿಸಲಿ, ಕೆಟ್ಟದ್ದಾಗಲಿ, ಆ ಸಂದರ್ಭದಲ್ಲಿ ಅದನ್ನು ಹಂಚಿ ಕೊಂಡು ಉಣಲಿಕ್ಕೆ, ಮಂಗಳಕಾರ್ಯಗಳಾದ ಮದುವೆ ಮುಂಜಿಗಳು ಸಂತೋಷಿ ಸುವ ಮೊದಲಿನಲ್ಲಿ 'ದೇವರ ಸಮಾರಾಧನೆ'ಗೂ ಅಮಂಗಳಕಾರ್ಯಗಳಲ್ಲಿ ದುಃಖದ ಅಂತ್ಯದಲ್ಲಿ 'ವೈಕುಂಠ ಸಮಾರಾಧನೆ'ಗೂ ಎಲ್ಲರನ್ನೂ ಆಹ್ವಾ ನಿಸುವೆವು. ಸಂತೋಷವನ್ನು ಹಂಚಿ ಅನುಭವಿಸಿದಷ್ಟೂ ಆ ಸಂತೋಷವು ಇಮ್ಮಡಿಯಾಗುವುದು. ದುಃಖವನ್ನು ಹೇಳಿಕೊಂಡು ಭಾಗಿಸಿಕೊಂಡಷ್ಟೂ ಆ ದುಃಖದ ತಾಪ ಕಡಮೆಯಾಗುವುದು. ಸಂತೋಷದ ಕಾಲದಲ್ಲಿ ಎಲ್ಲ ರೊಡನೆ ಸೇರಿ ಅನುಭವಿಸಿದರೆ, ದುಃಖಕಾಲದಲ್ಲಿ ನೆರವಾಗಿಯೇ ಆಗುವರು. ಅದು ಕಾರಣದಿಂದಲೇ ಕೇವಲ ಆತ್ಮಕಾರಣದಿಂದಲೇ ಯಾವುದನ್ನೂ ಅನು ಭವಿಸಲು ಎಸಗಬಾರದು. ಇವರಿಗೆ ತೃಪ್ತಿಯಾದುದರಿಂದಲೇ ನಮಗೂ ತೃಪ್ತಿ.

ಪರಮಾತ್ಮನಿಗೆ ತೃಪ್ತಿಯಾದರೆ ಆತ್ಮತೃಪ್ತಿ. ಇತರರು ಉಂಡದ್ದು ನೋಡಿಯೇ ಎಷ್ಟೋ ಜನರಿಗೆ ಊಟವಿಲ್ಲದವರಿಗೆ ಹೊಟ್ಟೆ ತುಂಬಿದೆ. ಬಡವನಾಗಲಿ ಬಲ್ಲಿದ ನಾಗಲಿ, ಪಂಡಿತನಾಗಲಿ, ಪಾಮರನಾಗಲಿ, ಸಮವಾಗಿ ಆರಾಧಿಸುವೆವು. ದೇವ ನೆಂಬ ಭಾವನೆಯಿಂದ ಆ ಸಮಾರಾಧನೆಗೆ ಬಂದಿರುವ ಅತಿಥಿಗಳಲ್ಲಿ ಭೇದಭಾವನೆ ಇಲ್ಲದೆ ಪಂಕ್ತಿಭೇದವಿಲ್ಲ. ಅವರು ಉಂಡು ತೃಪ್ತಿಯಾದ ಮೇಲೆ, ಅತಿಥಿ ಸತ್ಕಾರ ನಡೆದ ಮೇಲೆ ಉಳಿದುದನ್ನು ಪ್ರಸಾದರೂಪದಲ್ಲಿ ತಿಂದು ತೃಪ್ತಿಪಡು ವೆವು. ಈ 'ಸಮಾರಾಧನೆ' ಪದದಲ್ಲಿ ಎಷ್ಟು ಭಾವವಿದೆ! ಇದರ ಆಚರಣೆ ಯಲ್ಲಿ ಉಪಯೋಗದಲ್ಲಿ ಎಷ್ಟು ಸಂಸ್ಕೃತಿ ಇದೆ! ಇಂತಹ 'ಸಮ+ಆರಾಧನೆ'ಗೂ ಈಗಿನ "ಟೀ"ಗೆ ಕರೆದು ಒಬ್ಬರಿಗೆ ಕಾಫಿ, ಕೇಕು, ಮತ್ತೊಬ್ಬರಿಗೆ ಟೀ ಬಿಸ್ಕತ್ತು ಕೊಡುವ ಅತಿಥಿಸತ್ಕಾರಕ್ಕೂ (ಮುಖ ನೋಡಿ ಮಣೆ ಹಾಕುವ ಮನೋ ಧರ್ಮಕ್ಕೂ) ಎಷ್ಟು ಅಂತರವಿದೆ. ಒಂದು ಅರ್ಧದೇಹ ಚಿನ್ನಮಯವಾಗಿದ್ದ ಮುಂಗುಸಿ ಬಂದು, ಧರ್ಮರಾಯ ಅಶ್ವಮೇಧಯಜ್ಞ ಮಾಡಿದ ಮೇಲೆ ಆ ಯಾಗಭೂಮಿಯಲ್ಲಿ ಬಿದ್ದು ಹೊರಳಾಡಿ ಅತೃಪ್ತಿಯಿಂದ ಹೇಳಿತಂತೆ: "ಏನು ಯಾಗ, ಏನು ಧರ್ಮ ಮಾಡಿದರೋ?" ಎಂದು. "ಏಕೆ, ಇಂಥಾ ವೈಭವದಿಂದ ಮಾಡಿದ ಈ ಯಾಗವನ್ನು ತೆಗಳುತ್ತಿ? ಇದಕ್ಕಿಂತ ಇನ್ನು ದಾನ ಧರ್ಮ ಯಾಗ ತ್ಯಾಗಗಳು ಯಾರು ಮಾಡಿಯಾರು?' ಎಂದು ಕೇಳಿದುದಕ್ಕೆ ಹೇಳಿತಂತೆ: "ಒಬ್ಬ ಬಡ ಬ್ರಾಹ್ಮಣ ಹೆಂಡತಿ ಮಗ ಸೊಸೆ ಹೊಟ್ಟೆಗಿಲ್ಲವೆಂದು ಕ್ಷಾಮಗಾಲದಲ್ಲಿ ಸಾಯುವ ಸ್ಥಿತಿಗೆ ಬಂದಿದ್ದಾಗ, ಆ ಬ್ರಾಹ್ಮಣ ಯಜಮಾನ ಸಂಸಾರ ಸಂಕಟವನ್ನು ನೋಡಲಾರದೆ ಎಲ್ಲಿಂದಲೋ ಹೋಗಿ ನಾಲ್ವರಿಗಾಗು ವಷ್ಟು ಅಕ್ಕಿ, ಹಿಟ್ಟು ಊಟ ಸಾಮಗ್ರಿಯನ್ನು ಪ್ರಯಾಸದಿಂದ ಸಂಪಾದಿಸಿ ತಂದ. ಆದರದಿಂದ ಅವನ ಹೆಂಡತಿ ಅಡಿಗೆ ಮಾಡಿ, ನಾಲ್ವರೂ ಆತುರದಿಂದ ಊಟಕ್ಕೆ ಎಲೆಯ ಮುಂದೆ ಕೂತಾಗ ಒಬ್ಬ ವೃದ್ಧ ಹಸಿದ ಬ್ರಾಹ್ಮಣ ಅತಿಥಿ ಯಾಗಿ ಬಂದ. ಬ್ರಾಹ್ಮಣ ಆತನನ್ನು ಆದರದಿಂದ ಬರಮಾಡಿ, ತನ್ನ ಭಾಗದ ಭೋಜನವನ್ನಿಟ್ಟನು. ಆತ ತಿಂದು ಹಸಿವಾರಲಿಲ್ಲವೆನ್ನಲು ಹೆಂಡತಿ ತನ್ನ ಭಾಗವನ್ನಿಟ್ಟಳು. ಸಾಲದಾಯಿತು ಬ್ರಾಹ್ಮಣನಿಗೆ ಇನ್ನೂ. ಮಗನೂ ಸೊಸೆಯೂ ತಮ್ಮ ಭಾಗದ ಅನ್ನವನ್ನು ಅವನಿಗೆ ಅಕ್ಕರೆಯಿಂದ ಇಟ್ಟಮೇಲೆ ಆತ ತಿಂದು ತೇಗಿ ತೃಪ್ತಿಯಿಂದ ಹರಸಿ ಹೋದನು. ಹರಕೆಯೇನೋ ಆಯಿತು.

ಹರಕೆಯಿಂದ ಹಸಿವು ತುಂಬುತ್ತದೆಯೆ? “ಗಾಣಿಗಿತ್ತಿ ಅಯ್ಯೊ ಎಂದರೆ ನೆತ್ತಿ ತಣ್ಣಗಾಗುತ್ತೆಯೆ?” ಹಸಿದ ಇಬ್ಬರು ದಂಪತಿಗಳೂ ಹಾಗೆಯೇ ನೊರಗಿ ಆ ರಾತ್ರಿ ಸತ್ತರು. ಆ ಮನೆಗೆ ಹೋದ ನಾನು ಬಿದ್ದಿದ್ದ ನಾಲ್ಕು ಅಗುಳುಗಳ ಮೇಲೆ ಬಿದ್ದು ಹೊರಳಾಡಿದಾಗ ಆ ಅಗುಳುಗಳ ಸಂಪರ್ಕಕ್ಕೆ ಬಂದ ದೇಹ ವೆಲ್ಲ ಚಿನ್ನವಾಯಿತು. ಆಗಿನಿಂದ ಮಿಕ್ಕ ಬಿಟ್ಟಿರುವ ದೇಹವನ್ನು ಚಿನ್ನ ಮಾಡಿಕೊಳ್ಳುವ ಆಸೆಯಿಂದ ನಾನು ಹಾಗೆಯೇ ಹುಡುಕಿಕೊಂಡು ಧರ್ಮ ಯಜ್ಞ ನಡೆದ ಸ್ಥಳಗಳಲ್ಲೆಲ್ಲ ಹೊರಳಾಡಿ ಪರದಾಡುತ್ತಿದೇನೆ. ಇನ್ನೂ ಎಷ್ಟು ಮಾಡಿದರೂ ಅದಕ್ಕೆ ಸಮನಾದ ಮತ್ತೊಂದು ಧರ್ಮಸ್ಥಳ ಸಿಕ್ಕದೆ ಇನ್ನೂ ಅರ್ಧ ದೇಹ ಮಾತ್ರ ಚಿನ್ನವಾಗಿ ನಾನು ಅಲೆಯುತ್ತಿದೇನೆ” ಎಂದಾಗ, ತಾವು ಮಹಾಧರ್ಮದ ಮಹಾಯಾಗ ಮಾಡಿದೆವೆಂದು ಹೆಮ್ಮೆಯಿಂದಿದ್ದ ಪಾಂಡವರು ನಾಚಿಕೆಯಿಂದ ತಲೆ ತಗ್ಗಿಸಿದರಂತೆ. ಇದು ನಮ್ಮ ಪೂರ್ವಕಾಲದ ಅನ್ನದಾನದ ಸೂಕ್ಷ್ಮಧರ್ಮ. ಈಗ ನೋಡಿದ್ದರೆ ಮುಂಗುಸಿ ಏನೆನ್ನುತ್ತಿತ್ತೊ!

ಒಬ್ಬಾಕೆಯ ಮನೆಯಲ್ಲಿ ಗಂಡ, ಹೆಂಡತಿ, ಒಬ್ಬನೇ ಮಗನಿಗೆ ಅಡಿಗೆಮಾಡು ವಾಗ 1½ ಪಾವು ಅಕ್ಕಿ ಸಾಕಾಗಿದ್ದರೂ ಅಚ್ಚೇರಕ್ಕಿ ತಪ್ಪಲೆಯೇ. ಮನೆಯಲ್ಲಿ ಅನ್ನಕ್ಕೆ ಸಣ್ಣತಪ್ಪಲೆಯಿದ್ದುದರಿಂದ 1½ ಪಾವಿಗೆ ಬದಲು ಅಚ್ಚೇರಕ್ಕಿಯನ್ನ ಹಾಕಿ ಪ್ರತಿಸಾರಿಯೂ ಅಡಿಗೆಯನ್ನು ಮಾಡಿಬಿಡುತ್ತಿದ್ದರಂತೆ. ಈಗಿನಂತೆ ರೇಷ್ಣ ಕಾಲವಲ್ಲ ಬಿಡಿ, ಆಗಿನ ಕಾಲ. ಬಂದ ಅತಿಥಿಅಭ್ಯಾಗತರಿಗೊ, ಮಗನ ಮಿತ್ರರು ಬಂದರೆ ಅವರಿಗೋ ಉಪಯೋಗವಾಗದಿದ್ದರೆ ಭಿಕ್ಷಾನ್ನಕ್ಕೆ ಹಾಕಿ ಬಿಡುತ್ತಿದ್ದರು. ಆರೀತಿ ಅಡಿಗೆ ಸಿದ್ಧಮಾಡಬೇಕು. “Thy need is greater than mine” ಎನ್ನುವಂತೆ. ಯಾರ ಆತುರ ನಮಗಿಂತ ಅಧಿಕ ವಾಗಿದೆಯೋ ಅವರಿಗೆ ನಮ್ಮ ತುಟಿಯವರೆಗೆ ಹೋಗಿರುವ ತುತ್ತು ಹಿಂದೆಗೆದು ಆ ಹಿಡಿಯನ್ನು ಆತುರದ ಆರ್ತರಿಗೆ ಸಮರ್ಪಿಸುವ ಸುಬುದ್ಧಿ ಇರಬೇಕು. ಆತುರ ದಲ್ಲಿ ತಾನು ತುರುಕಿಕೊಳ್ಳುವ ಮೊದಲು ನಾಲ್ಕೆಡೆ ನೋಡಬೇಕು. ಯಾವಾಗ ಸರ್ವತ್ರವ್ಯಾಪಿಯಾದ ಅಂತರಾತ್ಮನು ಯಾವ ರೂಪದಲ್ಲಿ ಬರುತ್ತಾನೋ ಎಂದು.

ಕೊಟ್ಟವನು ಯಾವಾಗಲೂ ಕೆಟ್ಟಿಲ್ಲರೀ! ಒಂದು ಹಿಡಿಯವಲಕ್ಕಿಯನ್ನು ಕೊಟ್ಟ ಕುಚೇಲನಿಗೆ ಪರಮಾತ್ಮನು ಎಂತು ಅತುಲೈಶ್ವರ್ಯವನ್ನು ಹೇರಿದನು! ಕೊಡುವುದನ್ನು ವಿವೇಚನೆಯಿಂದ ಕೊಡಬೇಕು.

ಶ್ರೀ ರಾಮಕೃಷ್ಣರು, ಗಂಟಲಿನ ವ್ಯಾಧಿ ಅಧಿಕವಾಗಿ ಆಹಾರ ನುಂಗಲು ಕಷ್ಟವಾಗಿ ವ್ಯಥೆಯಲ್ಲಿದ್ದಾಗ ಒಂದು ದಿನ ಅವರ ಶಿಷ್ಯರು ಕೇಳಿಕೊಂಡರಂತೆ. "ಗುರುವರ್ಯ, ದಯವಿಟ್ಟು ಮಾತೆಯನ್ನು ನೀವು ಆಹಾರ ಉಣಲು ಶಕ್ತಿ ಬರುವಂತೆ ಬೇಡಿಕೊಳ್ಳಬೇಕು" ಎಂದು. ಮಾರನೆಯ ದಿನ ಗುರುಗಳನ್ನು 'ತಾಯಿಯನ್ನು ಕೇಳಿದಿರಾ?' ಎಂದು ಪ್ರಶ್ನಿಸಲು, ಶ್ರೀ ರಾಮಕೃಷ್ಣರು "ನೀವು ಏನು ಅವಮಾನ ಮಾಡಿಬಿಟ್ಟರಿ ನನಗೆ? ಉತ್ತರವಾಗಿ ತಾಯಿ ಕೇಳಿಯೇ ಬಿಟ್ಟಳು: 'ಇಷ್ಟು ಬಾಯಿಗಳಲ್ಲಿ ನೀನು ಆಹಾರ ತೆಗೆದುಕೊಳ್ಳುತ್ತಿರುವಾಗ, ನಿನಗೆ ಬೇರೆ ಉಣಲು ಇಚ್ಛೆಯೊ?' ಎಂದು ಕೇಳಿದಾಗ, 'ಇಷ್ಟು ಜನ ಉಂಡು ತೃಪ್ತಿಪಡುತ್ತಿರುವಾಗ ಇನ್ನೂ ನಿನಗೆ ತೃಪ್ತಿಯಿಲ್ಲವೆ?' ಎಂದು ಹೇಳಿದಾಗ ನಾಚಿಕೆಯಿಂದ ತಲೆ ತಗ್ಗಿಸುವಂತಾಯಿತು. ಬೇಡ, ಬೇಡ, ನಾನೇ ಸ್ವಂತ ತಿಂದು ತೇಗುವುದು ಇನ್ನು ಬೇಡ" ಎಂದರಂತೆ. ಆ ಸೂಕ್ಷ್ಮ ಬರಬೇಕು. ಭುಂಜಂತೇ ಎನ್ನುವುದನ್ನು ಸರ್ವಭೋಗ ಭೋಗಿಸುವುದರ ಸಂಕೇತವಾಗಿ ಹೇಳಿದೆ. ಊಟದ ವಿಷಯ ಒಂದರಲ್ಲೆ ಅಲ್ಲ; ಸಕಲ ಭೋಗಗಳಲ್ಲೂ, ಸಕಲ ಕರ್ಮಗಳಲ್ಲೂ ಸಕಲ ಫಲಾಕಾಂಕ್ಷೆಯಲ್ಲೂ ಆತ್ಮಕಾರಣವಿರಬಾರದು. ತನಗಾಗಿ ಮಾಡುವದರಲ್ಲಿ ಏನೂ ಸುಖವಿಲ್ಲ. ಪರರ ಸಂತುಷ್ಟಿಗಾಗಿ, ಪರಮಾತ್ಮನ ಪ್ರೀತಿಗಾಗಿ ಮಾಡುವ ಕಾರ್ಯಗಳಲ್ಲಿ ಸಂತೋಷವಿದೆ, ಸುಖವಿದೆ.

> ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
> ಯಜ್ಞಾದ್ಭವಂತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥
> ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
> ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥

ಇಲ್ಲಿ ಅನ್ನವನ್ನು ಪಚಿಸುವುದು ಉದಾಹರಣೆಗೆ ತೆಗೆದುಕೊಂಡುದುದರಿಂದ ಅನ್ನದಲ್ಲಿನ ಧರ್ಮಸೂಕ್ಷ್ಮವನ್ನೂ ಉತ್ಪತ್ತಿಕ್ರಮವನ್ನೂ ಹೇಳುತ್ತಾರೆ.

ಬ್ರಹ್ಮ (ಪರಮಾತ್ಮ)ನಿಂದ —> ಬ್ರಹ್ಮಾಕ್ಷರ (ವೇದಉತ್ಪತ್ತಿ) —> ವೇದ ಪ್ರಕಾಶಕಕರ್ಮ (ವೇದವಿಹಿತಕರ್ಮಾಚರಣೆ —> ಪರಾರ್ಥಯಜ್ಞ (Sacrifice) —> ಉತ್ಪತ್ತಿಯಾದದ್ದು —> ಪರ್ಜನ್ಯಧರ್ಮವು ಧಾರಾರೂಪವಾಗಿ ಜಲಸುರಿವುದು —> ಅನ್ನ (ಆಹಾರಪದಾರ್ಥಗಳು; ಫಲಕಂದಾದಿಗಳು) —>

ಭೂತಾನಿ (ಪಂಚಭೂತದೇಹ; ಈ ಪಂಚಭೂತ ಪಂಜರದಲ್ಲಿ ಪರಮಾತ್ಮನ ಸ್ವಯಂ ಪ್ರತಿಷ್ಠೆ).

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥೧೬॥

ಈ ಚಕ್ರವನ್ನು, ತಾನಾಗಿ ತಾನು ಸುತ್ತುತ್ತಿರುವ ಈ ಕ್ರಮವನ್ನು ಪ್ರಪಂಚದಲ್ಲಿ ಅಂಗೀಕರಿಸದೆ ವಿಷಯಲಂಪಟನಾಗಿ ಪಾಪದಿಂದ ಜೀವಿಸುವವನು ವ್ಯರ್ಥವಾಗಿ ಬದುಕುವನು. ಅವನು ಈ ಕ್ರಮವನ್ನರಿತರೆ, ಪ್ರಕಾಶಯುಕ್ತನಾಗಿ ಪರಾರ್ಥ ದಿಂದ ಕರ್ಮಮಾಡುವನು. ಇಲ್ಲವಾದರೆ ಮೋಹಯುತನಾಗಿ ಸ್ವಾರ್ಥತೆ ಯಿಂದ ವ್ಯರ್ಥಜೀವನ ಕಳೆಯುವನು.

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥

ಈ ಚಕ್ರವನ್ನರಿತವನು ಪರಮಾತ್ಮನಲ್ಲಿ ಪ್ರತಿಷ್ಠಿತನಾಗಿ, ಆತ್ಮನಲ್ಲಿಯೇ ಪ್ರೀತಿ ಯುಳ್ಳವನಾಗಿ, ಆತ್ಮನಿಂದಲೇ ತೃಪ್ತನಾಗಿ, ತನ್ನಲ್ಲಿಯೇ ಸಂತೋಷವುಳ್ಳವ ನಾಗಿ, ಕರ್ಮದ ಕರ್ತವ್ಯವು (ಅವಶ್ಯಕತೆ) ಇಲ್ಲದೆ ಇರುವನು.

'ಆತ್ಮೈವೇದಗ್ ಸರ್ವಮಿತಿ ಸವಾಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ, ಆತ್ಮಮಿಥುನ ಆತ್ಮಾನಂದಸ್ಸಸ್ವರಾಡ್ಭವತಿ, ತಸ್ಯ ಸರ್ವೇಷು ಲೋಕೇಷು ಕಾಮಾಚಾರೋ ಭವತಿ' ಛಾಂ. ೭. ೨೫. ೨. ರಲ್ಲಿ ಹೇಳಿರುವಂತೆ ಆತ್ಮವನ್ನು ನೋಡಿ ತಿಳಿದ ಮೇಲೆ ಆತ್ಮನೇ ಆಗಿ ಆತ್ಮನಲ್ಲಿ ರಮಿಸುತ್ತ, ಆತ್ಮನಲ್ಲೇ ಸೇರಿ ಆನಂದಿಸುತ್ತ ಆತ್ಮಚಕ್ರವರ್ತಿಯಾಗಿ ಇಚ್ಛಿಸಿ ದಂತೆ ಲೋಕದಲ್ಲಿ ಆಚರಿಸುತ್ತಿರುವನು.

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥

ಇಂತಹದೇ ಅವ ಮಾಡಬೇಕೆಂಬ ಕಡ್ಡಾಯವಿಲ್ಲ. ಆ ಜ್ಞಾನಿಗೆ ಕರ್ಮದಿಂದ ಯಾವ ಪ್ರಯೋಜನವೂ ಇಲ್ಲ. ಕರ್ಮಮಾಡದಿರುವದರಿಂದ ಯಾವ ದೋಷವೂ ಇಲ್ಲ. ಆ ವಿವೇಕಿಗೆ ಯಾವ ಭೂತದಲ್ಲಿ ಯಾವ ಅರ್ಥವೂ ಆಶ್ರಯವೂ (ಉಪಯೋಗ ಮತ್ತು ಸಂಬಂಧ) ಇಲ್ಲ. ಸ್ವತಂತ್ರದಿಂದ "ಸ್ವರಾಟ್" ಆಗಿದ್ದಾನೆ. ಆದ್ದರಿಂದ ೧೨ ನೇ ಅಧ್ಯಾಯ ೧೫ ನೇ ಶ್ಲೋಕದಲ್ಲಿ ಹೇಳಿರುವಂತೆ ಯಾರೂ

ಆತನಿಗೆ ಭಯಪಡುವುದಿಲ್ಲ. ಆತನಿಗೆ ಯಾರ ಭಯವೂ ಇಲ್ಲ. (ನಿರ್ಭಯು ಸಂತಾಪ.)

ಈ ಶ್ಲೋಕ ಅಕ್ಷರಶಃ ಯೋಗವಾಸಿಷ್ಠದ ನಿರ್ವಾಣಪ್ರಕರಣದ ದೃಶ್ಯೋಪ ದೇಶಯೋಗದಲ್ಲಿ ಬಂದಿದೆ. ಎಷ್ಟೋ ಅಭಿಪ್ರಾಯಗಳು ಅದ್ವೈತ ತತ್ತ್ವಗಳು ಒಂದೇ ಭಾವನೆಯಲ್ಲಿ ರಮ್ಯವಾಗಿ ಭಗವದ್ಗೀತೆಯಲ್ಲಿಯೂ ಯೋಗವಾಸಿಷ್ಠ ದಲ್ಲೂ ಶ್ಲೋಕಾರ್ಥ ಪ್ರತಿಪದವಾಗಿ ಬಂದರೂ ಈ ಶ್ಲೋಕವು ಮಾತ್ರ ಪೂರ್ತಿ ಯಾಗಿ ಬಂದಿರುವದರಿಂದ ಅದರ ತತ್ತ್ವಾರ್ಥವು ಎಷ್ಟು ಮುಖ್ಯವೆಂದು ಗಮನಿಸ ಬೇಕು. ಶ್ರೀರಾಮನಿಗೂ ವಸಿಷ್ಠಋಷಿಗಳು ಗುರುವಾಗಿ ಮಹತ್ತ್ವತತ್ತ್ವೋಪ ದೇಶವನ್ನು ಮಾಡಿರುವರು. ಅದರಲ್ಲಿಯೂ ಕರ್ಮಯೋಗದ ಸಾರ ಬ್ರಹ್ಮಾ ತ್ಮೈಕ್ಯತ್ವ. ಅದ್ವೈತತತ್ತ್ವವೆಲ್ಲ ಉಪಮಾನ ಕಥೆಗಳೊಂದಿಗೆ ಸವಿಸ್ತಾರವಾಗಿ ಬೋಧಿಸಿದ್ದಾರೆ. ಅರ್ಥ ತಿಳಿದವನಿಗೆ "ಜ್ಞಾ"ನಿಗೆ, ಅಜ್ಞನಿಗೆ, ವ್ಯತಿರಿಕ್ತವಾದ ಅಜ್ಞಾನ ನಾಶವಾದವನಿಗೆ ಯಾವ ಕಾರ್ಯ ಮಾಡಿಯೂ ಪ್ರಯೋಜನವಿಲ್ಲ, ಯಾವುದು ಮಾಡದೆ ಬಿಟ್ಟರೂ ನಷ್ಟವಿಲ್ಲ. ಯಾರಿಂದ ಏನೂ ಆಗಬೇಕಾದು ದಿಲ್ಲ—ಎಂದು ಕಾರ್ಯಾತೀತ, ಸ್ನೇಹಾತೀತವಾದವನ ಸ್ಥಿತಿ ವರ್ಣಿತವಾಗಿದೆ. ಆ ಸ್ಥಿತಿಯ ಸ್ವತಂತ್ರತೆ, ಆನಂದ ಆಳತೆಗೆ ಮೀರಿದುದು. ನಿರ್ಬಂಧವೇ ತಪ್ಪಿದ ಸ್ಥಿತಿ. ಯಾವ ಸಂದರ್ಭದಲ್ಲೂ, ಯಾರಿಗೋಸ್ಕರ ಏನೂ ಮಾಡಲಾರನು. ತಾನೇ ಆತ್ಮಾರಾಮನಾಗಿರುವದರಿಂದ, ಯಾವುದು ಮಾಡಿದರೆ ಎಂತೋ, ಮಾಡದಿದ್ದರೆ ಎಂತೋ, ಯಾರು ಏನು ಅಂದುಕೊಳ್ಳುವರೊ, ಯಾರು ನನಗೆ ಸಹಾಯ ಮಾಡದಿರುವರೋ ಎಂದು ಲೇಶ ಚಿಂತೆಯೂ ಇಲ್ಲ. ಅದರಿಂದ ಬಿಡುಗಡೆ ಹೊಂದಿ ಕಾರ್ಯಮುಕ್ತನಾಗಿ ಆತ್ಮಾರಾಮನಾಗಿ ಆನಂದದಿಂದ ಇರುವನು.

> ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।
> ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥

ಅರಿತ ಅವರಿವರ ಅಭಿಪ್ರಾಯಕ್ಕೆ ಹೆದರದೆ, ಫಲಾಪೇಕ್ಷೆ ಇಲ್ಲದೆ, ವಿಧ್ಯುಕ್ತ ವಾದ ಕರ್ಮವನ್ನು ಮಾಡುತ್ತ, ಅಸಕ್ತನಾಗಿ ಜ್ಞಾನಮೋಕ್ಷವನ್ನು ಪಡೆಯು ವನು. ಇದು ಎಂತಹ ಕರ್ಮದಿಂದ ಜ್ಞಾನಕ್ಕೂ ಮೋಕ್ಷಕ್ಕೂ ಮಾರ್ಗವೆನ್ನು ವುದನ್ನು ಹೇಳುತ್ತದೆ. ಈ ಆಸಕ್ತಿ ಇಲ್ಲದಿರುವುದೇ ಗಾಂಧಿಯವರ ಅನಾಸಕ್ತಿ

ಯೋಗ. ಅವನಿಗೆ ಅರ್ಥ ಆಶ್ರಯಗಳಿಲ್ಲದಿರುವುದೇ, ಆತನನ್ನು ತಟ್ಟದಿರುವುದೇ ಅಸ್ಪರ್ಶ ಯೋಗ. (ಕಾರಿಕೆ–ಗೌಡಪಾದರು)

ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥೨೦॥

ಹೀಗೆ ಇಂತಹ ಕರ್ಮದಿಂದಲೇ ಅಂತಃಕರಣಶುದ್ಧಿಯನ್ನೂ ಪಡೆದು ಜ್ಞಾನಸಿದ್ಧಿ ಪೊಂದಿದ ಜನಕಾದಿಗಳು ಕೂಡ, ತಾವು ಜ್ಞಾನಸಿದ್ಧರೆಂಬ ಭಾವನೆ ಇದ್ದರೂ, ಲೋಕಸಂಗ್ರಹಕ್ಕಾಗಿ (ಶೇಖರಿಸಿ ಕಾಪಾಡುವದಕ್ಕಾಗಿ) ಆದರೂ ಅವರು ನಿರ್ಲಿಪ್ತರಾಗಿ ಕರ್ಮವನ್ನು ಮಾಡುತ್ತಿದಂತೆಯೇ ನೀನೂ ಮಾಡು. ಜನಕನಿಗೆ "ವಿದೇಹ" ಎಂಬ ಹೆಸರಿತ್ತಂತೆ. ಆತ ದೇಹ ತಾನೆಂಬುದನ್ನೆ ಮರೆತು ದೇಹವಿಲ್ಲದವನಾಗಿದ್ದ. ದೇಹವೇ ತಾನಲ್ಲದ ಮೇಲೆ ಅದು ಮಾಡುವ ಕೆಲಸವೆಲ್ಲ ತಾನು ಮಾಡುವದಲ್ಲವೆಂದು ಅರಿತಿದ್ದ. ಆತ ಆತ್ಮಮಯನಾಗಿ ಆತ್ಮಾನಂದದಲ್ಲೇ ಇರುತ್ತಿದ್ದ. ಜನಕನಲ್ಲಿಗೆ ಅನೇಕ ಮಹಾತ್ಮರು, ಮಹರ್ಷಿಗಳು ತತ್ತ್ವಜ್ಞಾನಕ್ಕೆ ಹೋಗುತ್ತಿದ್ದರು. ಜನಕನ ಒಡ್ಡೋಲಗದಲ್ಲಿ ಇವರುಗಳು ಅವನ ಸಮ್ಮುಖದಲ್ಲಿ ಚರ್ಚೆ ನಡಸುತ್ತಿದ್ದರು. ಇವನಿಂದ ತೀರ್ಪು ಪಡೆದು ಇತ್ಯರ್ಥಗಳಿಗೆ ಬರುತ್ತಿದ್ದರು. ಬೃಹದಾರಣ್ಯಕದಲ್ಲಿ ಒಂದು ಸ್ವಾರಸ್ಯವಾದ ಪ್ರಸಂಗವಿದೆ. ಜನಕನ ಒಡ್ಡೋಲಗದಲ್ಲಿ ಯಾಜ್ಞವಲ್ಕ್ಯನೂ, ಅರ್ಥಭಾಗನೂ, ಮಹಾಮುನಿಗಳೂ ಚರ್ಚಿಸುತ್ತಿದ್ದಾಗ ಅರ್ಥಭಾಗ "ಮನುಷ್ಯ ಸತ್ತಾಗ ಅವನ ವಾಕ್ ಅಗ್ನಿಯನ್ನೂ ಅವನ ಪ್ರಾಣ ವಾಯುವನ್ನೂ ಅವನ ಚಕ್ಷು ಸೂರ್ಯನನ್ನೂ ಅವನ ಮನಸ್ಸು ಚಂದ್ರನನ್ನೂ—ಹೀಗೆ ಎಲ್ಲಾ ಹೊಂದಿ ಐಕ್ಯವಾಗುವುವು. ಆದರೆ ಆ ಮನುಷ್ಯನೇನಾಗುತ್ತಾನೆ?" ಎಂಬ ಗಾಢ ಪ್ರಶ್ನೆ ಹಾಕಿದನು. ಯಾಜ್ಞವಲ್ಕ್ಯನು ಅರ್ಥಭಾಗನ ಕೈಹಿಡಿದು ಹೊರಕ್ಕೆ ಕರೆದುಕೊಂಡು ಹೋಗಿ "ಈ ಪ್ರಶ್ನೆಯನ್ನು ನಾವು ಗೋಪ್ಯವಾಗಿ ಚರ್ಚಿಸಬೇಕು. ಬಹಿರಂಗ ಚರ್ಚೆಗೆ ಇದು ಅತಿ ಗಾಢವಾದುದು" ಎಂದು ಹೊರಗೆ ಹೋಗಿ ಚರ್ಚಿಸಿದರಂತೆ. ಅವರು ಮಾತನಾಡಿದುದು ಕರ್ಮದ ವಿಷಯವಂತೆ, ಕರ್ಮಪ್ರಶಂಸೆಯಂತೆ. ಅದೇನೆಂದು ಮಾತ್ರ ವಿಸ್ತರಿಸಿಲ್ಲ. ಇದರಿಂದ ಕರ್ಮದ ಗಾಢಗತಿಯು ಸೂಚಿತವಾಗಿದೆ—ಮನುಷ್ಯನೇನಾಗಬಹುದಾದರೂ ಮುಂದೆ ಕರ್ಮದಿಂದಲೇ ಎಂದು. ಇಲ್ಲವಾಗಿ ಮಹದಾತ್ಮನಲ್ಲಿ ಲೀನವಾಗಬೇಕಾದರೂ ಕರ್ಮಫಲತ್ಯಾಗ ಲೋಕಸಂಗ್ರಹ

ಕರ್ಮದಿಂದಲೇ. ಚಕ್ರವರ್ತಿಗಳಾದರೂ, ಕ್ಷತ್ರಿಯರಾದರೂ, ಜನಕ, ಅಶ್ವಪತಿ ಮೊದಲಾದ ರಾಜರು ಈ ರೀತಿ ಲೋಕಸಂಗ್ರಹಕರ್ಮವನ್ನೆ ಮಾಡುತ್ತಾ ತಾನು, ತನ್ನದು ಎನ್ನದೆ ದೇಹವನ್ನೇ ಮರೆತು ಜೀವನ್ಮುಕ್ತಾವಸ್ಥೆಯಲ್ಲಿ ಜೀವಿಸುತ್ತಿದ್ದುದರಿಂದ ಬ್ರಹ್ಮರುಷಿಗಳು ಕೂಡ ತತ್ತ್ವಜ್ಞಾನ ಚರ್ಚೆಗಳಿಗೆ ಅವರುಗಳಲ್ಲಿ ಹೋಗಿ ಫಲ ಹೊಂದುತ್ತಿದ್ದರು. ಲೋಕಸಂಗ್ರಹ ಮಾಡಿದ ಮಹಾಪುರುಷರಲ್ಲಿ, ಶ್ರೀರಾಮ, ಶ್ರೀಕೃಷ್ಣ, ಬುದ್ಧರುಗಳು ಕ್ಷತ್ರಿಯರುಗಳೇ, ರಾಜರುಗಳೇ. ಈಗಿನ ಕಾಲದಲ್ಲೂ ನಮ್ಮನ್ನಾಳುತ್ತಿದ್ದ ಮಹೀಶೂರ ನಾಲ್ವಡಿಕೃಷ್ಣರಾಜರೂ, ನಮ್ಮನ್ನಾಳುತ್ತಿರುವ ರಾಜರು ಶ್ರೀ ಜಯಚಾಮರಾಜರೂ ರಾಜಋಷಿಗಳ ಪಥದಲ್ಲೆ ಕಾಲಾನುಗುಣವಾಗಿ ಅನ್ವಯಿಸಿಕೊಂಡು, ಅಂತರಂಗದಲ್ಲಿ ಶಮದಮಸದಾಚಾರಗಳನ್ನು ಕಾಪಾಡಿಕೊಂಡು ನಡೆಯುತ್ತಿದ್ದಾರೆಂದು ಚರಿತ್ರಾರ್ಹವಾಗಿದೆ. ಹಿಂದೂದೇಶದ ಪ್ರಕೃತಸ್ಥಿತಿಯಲ್ಲಿ ಇದು ಅಪೂರ್ವ. ಮೈಸೂರಿನ ಪುಣ್ಯ. ರಾರಾಜಿಸುತ್ತಿದ್ದ ರಾಜವೈಭವವನ್ನು ತೃಣವಾಗಿ ಎಣಿಸಿ ಲೋಕಸಂಗ್ರ ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು.

> ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
> ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೨೧॥

ಏಕೆಂದರೆ ಶ್ರೇಷ್ಠಪುರುಷರು ಯಾವ ಯಾವ ರೀತಿ ನಡೆಯುವರೋ ಅದನ್ನೆ ನೋಡಿ ಇತರರೂ ಆಚರಿಸುವರು. ಅವರು ಯಾವ ಪ್ರಮಾಣವನ್ನು ಅಂಗೀಕರಿಸುವರೋ ಇತರರೂ ಆ ಪ್ರಮಾಣವನ್ನೇ ನಂಬುತ್ತಾರೆ. ಆದುದರಿಂದ ಆ ಶ್ರೇಷ್ಠಪುರುಷರ ಮೇಲೆ ದ್ವಿಗುಣ ಭಾರ ಬಿದ್ದಂತಾಗಿದೆ. ಮನೆಯಲ್ಲಿ ದೊಡ್ಡವರು ಏನು ಮಾಡುವರೋ ಮಕ್ಕಳು ಅದನ್ನೇ ನೋಡಿ ಕಲಿಯುವರು, ಅನುಸರಿಸುವರು. ದೈವಭಕ್ತಿಯುಳ್ಳ ಮನೆಯಲ್ಲಿ ಬೆಳೆದ ಮಕ್ಕಳು ಸದಾ ದೇವಪೂಜೆ, ಅತಿಥಿಸತ್ಕಾರಗಳನ್ನು ನೋಡಿ ಅವನ್ನೇ ಕಲಿವುವು, ಧರ್ಮಭೀರುಗಳ ಮನೆಯಲ್ಲಿ, ಸ್ವೇಚ್ಛಾ ಆಹಾರವಿಹಾರಿಗಳ ಮನೆಯಲ್ಲಿ ಬೆಳೆದ ಮಕ್ಕಳು ಅವನ್ನೆ ಅಭ್ಯಾಸಿಸುವುವು. ಕಪಿಯಂತೆ ಮಕ್ಕಳೂ ಅಣಕಿಸುವುದೂ, ಅನುಸರಿಸುವುದೂ ಬುದ್ಧಿಗುಣ. ದೊಡ್ಡವರೂ ಮಕ್ಕಳಂತೆಯೇ ತಮಗಿಂತ ಮೇಲ್ತರಗತಿಯಲ್ಲಿರುವ ಶ್ರೇಷ್ಠರು ಎಂತು ಮಾಡುತ್ತಾರೋ ಅಂತೇ ತಾವೂ ಮಾಡಬೇಕೆಂದು ಅಪೇಕ್ಷಿಸುವರು, ಪ್ರಯತ್ನಿಸುವರು. "ಬೀಜಾಪುರದಲ್ಲಿ ಇಜಾರ

ಹಾಕುವವರು ಹಜಾರು ಜನ" ಎಂಬ ಗಾದೆ ಬೀಜಾಪುರದ ಸುಲ್ತಾನರ ಕಾಲದಲ್ಲಿ ಹುಟ್ಟಿರಬೇಕು. ಕಾಲಾನುಗುಣವಾಗಿ ಇಹದಭಿವೃದ್ಧಿಗೆ ಸಹಾಯವಾಗಿ ಮೇಲಿನ ಪುರುಷರಾದ ಮುಸಲ್ಮಾನರ ಪೋಷಾಕನ್ನೇ ಹಿಂದೂಗಳೂ ಧರಿಸುತ್ತಿದ್ದುದರಿಂದ ಈ ತಮಾಷೆ ಗಾದೆ ಬಂದಿರಬೇಕು. ಪ್ರಸ್ತುತಃ ಹೈದರಾಬಾದಿನಲ್ಲಿ ಎಲ್ಲರೂ ಮೇಲಿನ ನವಾಬರಂತೆ, ನಡೆ ನುಡಿ ವಸ್ತ್ರ ಭೂಷಣಾದಿಗಳನ್ನ ಅಣಕಿಸಿ ಧರಿಸಿ ತಿರುಗುವ ಹೇರಳ ಜನವನ್ನು ನಾವು ನೋಡಿದ್ದೇವೆ. ಆದುದರಿಂದ ಶ್ರೇಷ್ಠ ಪುರುಷರು ಯಾವಾಗಲೂ ಎಚ್ಚರಿಕೆಯಿಂದಿರುತ್ತಾರೆ. ತಮಗಾಗಿ ಏನು ಬೇಕಿಲ್ಲವಾದರೂ, ತಾವು ಕರ್ತವ್ಯವಿಮುಖರಾಗಿ ಕೂತರೆ ಅದನ್ನೆ ಇತರರು ಅನುಸರಿಸಾರೆಂದು ತಾವು ಯಾವಾಗಲೂ ಲೋಕಸಂಗ್ರಹ ಕಾರ್ಯದಲ್ಲಿ ಆಸಕ್ತರಾಗಿರುತ್ತಾರೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥

ಆದುದರಿಂದ ಸರ್ವಸ್ವಾಮಿಯಾದ ಶ್ರೀಕೃಷ್ಣ ಪರಮಾತ್ಮನು ಕೂಡ ತನಗೇನೂ ಬೇಕಿಲ್ಲವಾದರೂ, ತಾನು ಮಾಡಬೇಕಾದ ಕರ್ತವ್ಯವೇನೂ ಇಲ್ಲವಾದರೂ, ಮೂರು ಲೋಕಗಳಲ್ಲಿಯೂ ಕಿಂಚಿತ್ತಾದರೂ ಕರ್ಮಾರ್ಥವಿಲ್ಲವಾದರೂ, ಸಕಲ ವೈಭವಗಳೂ ಉಳ್ಳ ಸ್ವಾಮಿಗೆ ಇನ್ನು ಪಡೆವುದಾದರೂ ಏನುಂಟು! ಆದರೂ ತಾನು ಕರ್ಮವನ್ನು ಮಾಡುತ್ತಲೇ ಇರುವನು. ಏಕೆಂದರೆ ಸ್ವಾಮಿಯೇ ಕರ್ಮಮಾಡದೆ ಸುಮ್ಮನೆ ಆಲಸ್ಯವಾಗಿ ಕೂತುಬಿಟ್ಟರೆ, ಕರ್ಮಾಧಿಕಾರಿಗಳೂ, ಇತರ ಜನಗಳೂ, ಕೂಡ ಎಲ್ಲ ವಿಧದಲ್ಲೂ ಸ್ವಾಮಿಯ ಮಾರ್ಗವನ್ನೇ ಅನುಸರಿಸುವರು. ರಾಜರು ಅದೂ ಆ ಕಾಲದಲ್ಲಿ ಆದರ್ಶಪುರುಷರು "ನಾವಿಷ್ಣು ಪೃಥಿವೀಪತಿಃ" ಎಂಬುದನ್ನು 'ವಿಷ್ಣುವಿನ ಅಂಶವಿಲ್ಲದೆ ನೃಪನಾಗುವದಿಲ್ಲ' ವೆಂದು, ಆ ಕಾಲದಲ್ಲಿ ಜನರು ಇನ್ನೂ ದೃಢವಾಗಿ ನಂಬಿದ್ದರು. ಆತನು ಮಾಡುವದೆಲ್ಲ ಧರ್ಮ ಕರ್ಮ. ಆತನೇ ಆಲಸ್ಯವನ್ನು ಬಿಟ್ಟು ಕರ್ಮ ಮಾಡದಿದ್ದರೇಂತು? ರಾಜ್ಯಪರಿಪಾಲನಾಭಾರ, ಸ್ವಕರ್ಮ, ನಿತ್ಯನೈಮಿತ್ತಿಕ ಕರ್ಮ, ಧರ್ಮಪರಮಾರ್ಥಕರ್ಮ, ಎಲ್ಲ ಎಷ್ಟೋ ಮಾಡುವುದಿವೆ. ಆಲಸ್ಯವಿಲ್ಲದೆ ಸದಾ ಅವುಗಳಲ್ಲಿ ನಿರತರಾಗಿರುತ್ತಾರೆ.

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥

ಇಲ್ಲವಾದರೆ ಈ ರಾಜರ ಮೇಲ್ಪಂಕ್ತಿಯಿಂದ ಕರ್ಮ ಮಾಡದೆ, ಅವರನ್ನು ನೋಡಿ ಅನುಸರಿಸಿದವರ ನಾಶಕ್ಕೆ ಕಾರಣವಾದಂತಾಯಿತು. ತಾನೂ ಕೆಟ್ಟು ದಲ್ಲದೆ ಪರರನ್ನು ಕೆಡಿಸಿದಂತಾಯಿತು. ಜನರು ಮಾಡುವ ಸ್ವಧರ್ಮತ್ಯಾಗ, ವರ್ಣಸಂಕರ ಮೊದಲಾದ ದೋಷಗಳಿಗೆ ರಾಜನೇ ಕಾರಣನಾಗುವನು.

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।
ಸಂಕರಸ್ಯ ಚ ಕರ್ತಾಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥೨೪॥

ಪ್ರಜಾಪಾಲನೆಯ ಅಂಗವಾಗಿ, ಪ್ರಜೆಗಳಿಗೆ ಆದರ್ಶಪುರುಷನಾಗಿ, ಅವರಿಗೆ ಮೇಲ್ಪಂಕ್ತಿಗಾಗಿ ಸತ್ಕರ್ಮಗಳನ್ನು ರಾಜನು (ಶ್ರೀಕೃಷ್ಣ) ಮಾಡುತ್ತಲೇ ಇರಬೇಕು.

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥೨೫॥

ಕರ್ತವ್ಯಾಭಿಮಾನಿಯು ಅಜ್ಞಾನದಿಂದ ಫಲಾಪೇಕ್ಷೆಯಿಂದ ಯಾವ ಆಸಕ್ತಿ ಅಭಿಮಾನದಿಂದ ಕೆಲಸ ಮಾಡುವನೋ, ಹಾಗೆಯೇ ಪ್ರಾಜ್ಞನು, ಕರ್ತವ್ಯಾಭಿ ಮಾನ ಬಿಟ್ಟರೂ, ಲೋಕಸಂಗ್ರಹಕ್ಕಾಗಿ, ಸತ್ಕರ್ಮಗಳನ್ನು ನಿಷ್ಕಾಮನೆಯಿಂದ ಅದೇ ಆಸಕ್ತಿಯಲ್ಲಿ ಆಚರಿಸಬೇಕು. ಕರ್ಮ ಮಾಡುವುದರಲ್ಲಿ ಪ್ರಾಜ್ಞನಿಗೆ ಕೂಡ ಕರ್ತೃತ್ವಾಭಿಮಾನಿಯ ಆಸಕ್ತಿ ಇರಬೇಕು. ಶ್ರದ್ಧೆಯಿಂದ ಚೆನ್ನಾಗಿ ಮಾಡ ಬೇಕು. ಆದರೆ ಫಲಾಭಿಮಾನ ಮಾತ್ರ ಇರಬಾರದು. ತಾನು ಕರ್ತೃವೆಂಬ ದೃಷ್ಟಿಯೂ ಬರಬಾರದು. ಅಪೇಕ್ಷೆ ಏನೂ ಇಲ್ಲದೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಬೇಕು.

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥೨೬॥

ನಿಸ್ಸಂಗಕರ್ಮಿಗಳು, ಸಂಗಿಕರ್ಮಿಗಳಲ್ಲಿ ಕೂಡ ಕರ್ಮಾಸಕ್ತಿ ತಪ್ಪಿಸಬಾರದು. ವಿದ್ವಾನನು ಕೂಡ ಯುಕ್ತರೀತಿಯಲ್ಲಿ ಅವರೊಡನೆ ಸರ್ವಕರ್ಮವನ್ನೂ ಮಾಡ ಬೇಕು. ಯಾರೂ ಕರ್ಮ ಬಿಡಕೂಡದು. ಇವನ ಕರ್ಮದಿಂದ, ಇವನೂ ಜೊತೆಯಲ್ಲಿ (ಸಮಾಚರನ್) ಕರ್ಮಮಾಡುವುದರಿಂದ ಅವರಿಗೂ ಪ್ರೋತ್ಸಾಹ. ಇದರಿಂದ ಸರ್ವ ಕರ್ಮಗಳಲ್ಲಿನ ಶ್ರೇಷ್ಠತೆ ವ್ಯಕ್ತವಾಗುತ್ತದೆ. ಯಾವ

ಕರ್ಮವೂ ಚಿಕ್ಕದಲ್ಲ. ಯಾವುದೂ ದೊಡ್ಡದಲ್ಲ. ಯಾವ ಕರ್ಮಿಯೂ ಮೇಲಿನವನಲ್ಲ. ಎಲ್ಲಾ ಕರ್ಮಗಳೂ ನಿತ್ಯಾನಿತ್ಯ ಕರ್ಮಗಳೂ ಶ್ರೇಷ್ಠವಾದವು. ಯಾವ ಯಾವ ಕರ್ಮಗಳು ಲೋಕವನ್ನು ಸಂರಕ್ಷಿಸಿ ಕಾಪಾಡಲು ಸಹಾಯಕ ವಾಗಿವೆಯೋ ಎಲ್ಲಾ ನಿಷ್ಕಾಮಕರ್ಮಗಳೂ ಶ್ರೇಷ್ಠವಾದವುಗಳೇ. ಎಲ್ಲಾ ಸಹಾಯವಾಗಿ ಸಮಗ್ರಕರ್ಮ (Cosmic action) ವಾಗಿ ಪರಿಣಮಿಸುತ್ತದೆ. ಎಲ್ಲರೂ ತಮ್ಮ ತಮ್ಮ ಕರ್ಮಗಳನ್ನು ತಮ್ಮ ಸ್ಥಾನದಲ್ಲಿ ನಿಷ್ಠೆಯಿಂದ ಕರ್ಮ ಫಲದ ದೃಷ್ಟಿಯಿಲ್ಲದೆ ಮಾಡುತ್ತ ಬರಬೇಕು. ಆಗ ಲೋಕಸಂಗ್ರಹಕರ್ಮವು ತಾನಾಗಿ ಜರಗುತ್ತದೆ. ತಾನು ಲೋಕೋದ್ಧಾರಕ್ಕಾಗಿ ಸಹಾಯಕಕರ್ಮ ಮಾಡುತ್ತೇನೆಂಬ ಅಹಂಭಾವ ಬರಬಾರದು. ತಾನಲ್ಲ, ಕೋಟ್ಯಂತರ ಜನ ನಷ್ಟವಾಗಿ, ಕರ್ಮಮಾಡುವುದು ನಿಂತರೂ ಲೋಕ ನಿಲ್ಲುವುದಿಲ್ಲ. ಕ್ವೆಟ್ಟಾ ಭೂಕಂಪದಲ್ಲಿ ದೊಡ್ಡ ಪ್ರವಾಹ ಬಿರುಗಾಳಿ ವಿಪತ್ತುಗಳಲ್ಲಿ ಲಕ್ಷಾಂತರ ಜನ ಕ್ಷಣದಲ್ಲಿ ನಶಿಸಿಹೋದವರೂ, ಅವರಿಲ್ಲದೆ ಅವರ ಕರ್ಮ ನಿಂತುದರಿಂದ ಲೋಕ ನಿಲ್ಲಲಿಲ್ಲ. ಲೋಕಸಂಗ್ರಹ ಕಾರ್ಯವನ್ನು ಪರಮಾತ್ಮನೇ ಹೊತ್ತಿದ್ದಾನೆ. ಆ ಕಾರ್ಯವನ್ನು ತಾನು ಹೊತ್ತಿದ್ದೇನೆಂದು ಭಾವಿಸುವ ಮನುಷ್ಯನು ಗೋಪುರದ ಕೆಳಗಿನ ವಿಗ್ರಹವು ಗೋಪುರವನ್ನು ತಾನು ತನ್ನ ಹೆಗಲಿನ ಮೇಲೆ ಹೊತ್ತಿರುವು ದಾಗಿ ಭಾವಿಸುವಂತೆ. ನಮ್ಮ ಹೊರೆಯನ್ನು ಕೂಡ ಆತನೆ ಹೊತ್ತಿದ್ದಾನೆ— ನಮ್ಮ ಹೊರೆಯನ್ನು ನಾವು ಪ್ರಯಾಣಮಾಡುತ್ತಿರುವ ಗಾಡಿಯಲ್ಲಿಡದೆ ನಮ್ಮ ತಲೆಯ ಮೇಲೆಯೇ ಹೊತ್ತುಕೊಂಡು ಕೂತು ವ್ಯಥೆ ಪಟ್ಟರೆ ತಪ್ಪಾರದು? ನಾವು ಜೀವನದಲ್ಲಿ ಪ್ರವಾಸಮಾಡುವ ಪ್ರಯಾಣಿಕರಂತೆ; ನಮ್ಮ ಕರ್ಮ ವಾಸನಾ ಹೊರೆಯೇ ನಮ್ಮ ಗಂಟುಮೂಟೆ. ನಾವು ನಮ್ಮ ಸೇರುವ ಸ್ಥಾನಕ್ಕೆ ಟಿಕೆಟ್ ತೆಗೆದು ಕೂತಿದ್ದೇವೆ. ಜೊತೆಯ ಪ್ರಯಾಣಿಕರೊಡನೆ ವ್ಯವಹರಿಸು ತ್ತಿದ್ದೇವೆ. ಪ್ರಯಾಣದಲ್ಲಿ ರೈಲು ಬದಲಾಯಿಸಬೇಕಾಗಿ ಬಂದರೆ, ನಮ್ಮ ಗಂಟುಮೂಟೆಗಳನ್ನೂ ನಾವು ಈ ಗಾಡಿಯ ಪ್ರಯಾಣದಲ್ಲಿ ಶೇಖರಿಸಿದವನ್ನೂ ಹೊತ್ತು ಇನ್ನೊಂದು ಗಾಡಿಗೆ ಹತ್ತುತ್ತೇವೆಯೇ ಹೊರತು, ಗಾಡಿಯಾದರೂ ತಪ್ಪಬಹುದೇ ಹೊರತು, ನಮ್ಮ ಗಂಟನ್ನು ಬಿಡಲಾರೆವು. ಹೋಗುವಾಗ ಎಷ್ಟೋ ಆಪ್ತರಂತೆ ಜೊತೆಯ ಪ್ರಯಾಣಿಕರನ್ನು ಬೀಳ್ಕೊಟ್ಟು ಇಳಿಯುತ್ತೇವೆ. ರೈಲುಗಳು ನಡೆಯುತ್ತವೆ. ಪ್ರಯಾಣ ಸಾಗುತ್ತದೆ, ನಡೆದೇ ನಡೆಯುತ್ತದೆ.

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥

ಪ್ರಕೃತಿಕಾರ್ಯವಾದ ಇಂದ್ರಿಯಗಳಿಂದಾಗುವ ಎಲ್ಲ ಕಾರ್ಯಗಳನ್ನೂ ಅಹಂಕಾರದಿಂದ, ವಿವೇಕವಿಲ್ಲದೆ, ನಾನೇ ಮಾಡುವವನೆಂಬುದಾಗಿ ಮೂಢಾತ್ಮನು ಭಾವಿಸುತ್ತಾನೆ. ತಾನೂ ಈ ಪ್ರಪಂಚದ ಮಹಾಯಂತ್ರದಲ್ಲಿ ತನ್ನ ಸ್ಥಾನದಲ್ಲಿ ತಿರುಗುವ ಒಂದು ಸಣ್ಣ ಚಕ್ರ. ತಿರುಗಲು ಸಹಾಯಕವಾದ ಒಂದು ಸಣ್ಣ ಮೊಳೆ. ನನ್ನ ಕೆಲಸ ನನ್ನ ಸ್ಥಾನದಲ್ಲಿ ಆ ಯಂತ್ರಚಲನೆಯಲ್ಲಿ ನಡೆಯುತ್ತಾ ಇದೆ. ನನ್ನಿಂದ ಆ ಕೆಲಸ ನಿರ್ವಹಿಸಲು ಸಾಧ್ಯವಿಲ್ಲವಾದರೆ ನನ್ನನ್ನು ತೆಗೆದು ಬೇರೆಯವನನ್ನು, ಒಂದು ಸವೆದ ಚಕ್ರ, ನಿಷ್ಪ್ರಯೋಜನವಾದ ಮೊಳೆ ಅಳ್ಳಕವಾಗಿದ್ದರೆ ತೆಗೆದು ಬೇರೆಯೊಂದನ್ನು ಆ ಜಾಗದಲ್ಲಿ ಸೇರಿಸುವಂತೆ, ಆ ಜಾಗದಲ್ಲಿ ನಿಯಮಿಸುತ್ತಾನೆ. ಈ ಮಹಾಯಂತ್ರ ನಡೆಯುತ್ತಲೇ ಇರಬೇಕು.

ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥೨೮॥

ನಿಲ್ಲಲಾಗದು ಎಂಬ ಭಾವನೆ ಬಂದು ವಿನಯದಿಂದ ತಾನು ಮಾಡುವ ಕೆಲಸವೆಲ್ಲವೂ ಪ್ರಕೃತಿ ಗುಣದಿಂದ ಯಥಾರ್ಥ ಕರ್ಮಗಳೆಲ್ಲಸಗಿದೆ ಎಂಬ ಜ್ಞಾನವನ್ನು ಹೊಂದಿ, ಶ್ರೋತ್ರಾದಿ ಇಂದ್ರಿಯಗಳು ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸುತ್ತಿವೆಯೆಂದು, ತಾನು ಕರ್ತೃವೆಂಬ ಅಭಿಮಾನವನ್ನು ಜ್ಞಾನಿಯು ಬಿಡುತ್ತಾನೆ. ಆಗ ಸೇವಾಭಾವನೆ. ತನ್ನ ಕರ್ಮದಿಂದ ಈ ಅಗಾಧವಾದ ಲೋಕಸಂಗ್ರಹವನ್ನು ಕಿಂಚಿತ್ತು ಸೇವೆ ನಡೆದೀತೆಂಬ ದೀನ ಭಾವನೆಯಿಂದ ಕೆಲಸ ಮಾಡುತ್ತಾನೆ. ಈ ಭಾವನೆ ಬಂದರೆ ಕರ್ಮದ ಹಿಂಸೆ ತಪ್ಪುವುದು. ಸಿಟ್ಟು ಬಂದಾಗ ಒಬ್ಬ ಮೂಕ, ಒಬ್ಬ ವಾಚಾಳಿ; ಎರಡೂ ಸಿಟ್ಟಿನ ರೀತಿಯೇ! ಒಬ್ಬ ಸಿಟ್ಟು ನುಂಗಿಕೊಂಡು ದುರದುರನೆ ನೋಡಿ ಸುಮ್ಮನಿದ್ದುಬಿಡುತ್ತಾನೆ. ಮತ್ತೊಬ್ಬ ಸಿಟ್ಟಿನ ಆವೇಶದಲ್ಲಿ ಹುಚ್ಚುಹುಚ್ಚಾಗಿ ಬೈದು ರೇಗಿ ಹಾರಾಡುತ್ತಾನೆ. ಮಾತಾಡದಿರುವುದರಿಂದ ಆಗುವ ಪ್ರಚಂಡ ಫಲ, ಬೈದು ಹಾರಾಡುವುದರಿಂದಾಗುವುದೆ?

ಅತಿ ವೇಗವಾಗಿ ತಿರುಗುವ ಯಂತ್ರ ಸ್ಥಿರವಾಗಿ ನಿಂತಂತೆ ಕಾಣುತ್ತೆ, ತಿರುಗುತ್ತಲೇ ಇಲ್ಲವೆಂದು ಭಾಸವಾಗುತ್ತೆ. ಬುದ್ಧನಿದ್ದಂತೆ, ಪ್ರಚಂಡಯೋಗ

ಸಮಾಧಿಯಲ್ಲಿ ಲೀನವಾಗಿದ್ದರೂ ಏನೂ ಮಾಡದವನಂತೆ ಸ್ತಬ್ಧವಾಗಿ ಕುಳಿತಿರುತ್ತಾನೆ. ಏನೂ ಮಾಡದೆಯೇ ಎಲ್ಲವನ್ನೂ ಮಾಡಿದಂತೆ, ಎಲ್ಲಾ ಮಾಡಿಯೂ, ಏನೂ ಮಾಡದಂತೆ! ಎಂಥ ಕಲ್ಪನೆ!

ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನವಿಚಾಲಯೇತ್ ॥೨೯॥

ಪ್ರಕೃತಿಕಾರ್ಯವಾದ ವಿಷಯಗಳಿಂದ ಅವಿವೇಕ ಹೊಂದಿದವನು ದೇಹೇಂದ್ರಿಯಗಳಿಂದಾಗುವ ವ್ಯವಹಾರಗಳಲ್ಲಿ ಭಾಗಿಯಾಗುವನು. ಜ್ಞಾನಿಯಾದವನು ತಾನು ಮಾಡುವ ಶುಭಕಾರ್ಯಗಳಲ್ಲಿ ಅಶ್ರದ್ಧೆಯನ್ನುಂಟುಮಾಡಬಾರದು. ಅವರವರ ಅಂತಸ್ಥಿನಲ್ಲಿ ಅವರವರ ಶ್ರದ್ಧೆಯಂತೆ ಅವರವರು ಶುಭಕಾರ್ಯಗಳನ್ನೆಸಗುತ್ತಿರುವುದರಿಂದ ಶುಭಕಾರ್ಯಗಳಲ್ಲಿ ಹೆಚ್ಚುಕಡಮೆ ಏನೂ ಇಲ್ಲ. ಅವುಗಳಲ್ಲಿ ಅಸಡ್ಡೆಬರುವಂತೆ ಮಾಡಬಾರದು.

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥೩೦॥

ಪರಮಾತ್ಮನಲ್ಲಿಯೆ ಚಿತ್ತವುಳ್ಳವನಾಗಿ ಶುಭಾಶುಭ ಕರ್ಮಗಳನ್ನೆಲ್ಲ ಪರಮೇಶ್ವರನಲ್ಲಿ ಅರ್ಪಿಸಿ ಆಶಾರಹಿತನಾಗಿ ಮಮಕಾರರಹಿತನಾಗಿ, ಜ್ವರಬಿಟ್ಟು (ವಿಗತ) ಜ್ವರ ಶೋಕಮೋಹಾದಿಗಳಿಲ್ಲದೆ ಧರ್ಮಾನುಷ್ಠಾನಬುದ್ಧಿಯಿಂದ ಯುದ್ಧವನ್ನು ಮಾಡು ಎಂದು ಅರ್ಜುನನಿಗೆ ಆಜ್ಞಾಪಿಸಿದರು. ಶೋಕ ಮೋಹಾದಿಗಳು ಬಂದು ಜ್ವರ. ಈಗ ಅರ್ಜುನನಿಗೆ ವ್ಯಾಪಿಸಿರುವ "ಕುತಸ್ತ್ವಾ ಕಶ್ಮಲಮಿದಂ" "ಕ್ಷುದ್ರಂ ಹೃದಯ ದೌರ್ಬಲ್ಯಂ" ಎಲ್ಲಾ ಈ ಜ್ವರದಿಂದಲೇ. "ವಿಗತ" ವಾದರೆ, ಈ ಜ್ವರ ಗತಹೋದರೆ, ಆಗ "ನಿರ್ಮಮ ನಿರಾಶೀಃ" ಆಗುತ್ತಾನೆ. ಈಗ ಬಂದಿರುವ ಜ್ವರತಾಪವಾದರೂ ಎದುರು ಕಕ್ಷಿಯವರು "ಮಮ" ಜ್ವರವೊಂದು ಮಸುಕಿದೆ. ಮಮತ್ವದ ಹಿಂದೆ ಆಸೆಯಿರುತ್ತದೆ. ಈ ಜ್ವರ ಹೋಗಲಾಡಿಸಲೇ ಶ್ರೀಕೃಷ್ಣ ಇಷ್ಟು ಉಪದೇಶಾಮೃತವನ್ನು ಹೊಯ್ದುದು.

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥೩೧॥

ಈಗ ತನ್ನ ಬಾಯಿಂದಲೇ ಪರಮಾತ್ಮ ಬಯಲಿಗೆ ಬಂದ. "ನಿತ್ಯಮನುತಿಷ್ಠಂತಿ ಮಾನವಾಃ, ಯೇ ಮೇ ಮತಮಿದಂ" ನಿತ್ಯವೂ ಮನುಷ್ಯರು (ಪ್ರತಿಯೊಬ್ಬನೂ)

ಮೇಲೆ ಹೇಳಿದ ಈ ನನ್ನ ಅಭಿಪ್ರಾಯವನ್ನು (ಮತ) ಶ್ರದ್ಧೆಯಿಂದಲೂ ಅಸೂಯಾರಹಿತರಾಗಿಯೂ ಅನುಸರಿಸುವರೋ ಅವರು ಕರ್ಮಬಂಧನದಿಂದ ಬಿಡುಗಡೆ ಹೊಂದುವರು. ನಿಮಿತ್ತಮಾತ್ರವಾಗಿ ಅರ್ಜುನನ್ನಿಟ್ಟುಕೊಂಡು ಸ್ವಾಮಿ ಮಾನವವರ್ಗಕ್ಕೆಲ್ಲ ಉಪದೇಶ ಮಾಡಿ ತನ್ನ ಮತವನ್ನು ಹೊರಗೆಡಹಿದ್ದಾನೆ.

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ತೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥೩೨॥

ನನ್ನ ಈ ಮತವನ್ನು ಯಾರು ತಪ್ಪೆಂದು ತಿಳಿದು ಅನುಷ್ಠಾನ ಮಾಡುವುದಿಲ್ಲವೋ ಅಂಥವರು ಎಲ್ಲಾ ವಿವೇಕದಿಂದ ಮೂಢರಾಗಿ, ನಷ್ಟಚೇತನರಾಗಿ ಇರುವರು.

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥

ಸ್ವಭಾವವನ್ನನುಸರಿಸಿ ಎಲ್ಲಾ ವ್ಯವಹಾರಗಳನ್ನೂ ಮಾಡುವನು. ಭೂತಗಳೆಲ್ಲವೂ ಪ್ರಕೃತಿಯನ್ನನುಸರಿಸಿವೆ. ನಿಗ್ರಹವೇನು ಮಾಡೀತು?

ಗುಪ್ತ "Confidential" ಎಂದು ಒಬ್ಬ ಅಧಿಕಾರಿಯು ಗುರುತುಹಚ್ಚಿ ಒಂದು ಕಾಗದ ಕಳುಹಿಸಿದರೆ, ಅದರಲ್ಲೇನಿದೆಯೋ ಎಂದು ಓದಿ ತಿಳಿಯಲೇ ಬೇಕೆಂಬ ಕಾತರ ಗುಮಾಸ್ತೆಗೆ. ಓದಿಯೇ ನೋಡಿಯಾನು. 'ಓದಬೇಡಿ' ಎಂದು ಮೇಲೆ ಬರೆದು ಕೆಳಗಡೆ ಪ್ರಕಟಣೆ ಹಚ್ಚಿದರೆ, ಅಥವಾ ಅಚ್ಚಿಸಿದರೆ, ಓದಿಯೇ ನೋಡಿಬಿಡೋಣವೆಂದು ಎಲ್ಲಾ ಜನ ಓದಿಬಿಡುತ್ತಾರೆ. ನಿಗ್ರಹವೇನು ಮಾಡೀತು?

ಅಂತೇ ಮನಸ್ಸಿಗೆ ಬೇಡವೆಂದು ಹೇಳಿದ ಕಡೆಯೇ ಚಪಲದೃಷ್ಟಿ, ಶೀಘ್ರ ಓಟ. ತೆರೆಮರೆಯಲ್ಲೇನಿದೆಯೋ ಎಂದು ಓರೆಮಾಡಿಯಾದರೂ ಇಣಕಿ ನೋಡಲಾಸಕ್ತಿ. ಸುಮ್ಮನೆ ಹಾಗೆ ನಿಗ್ರಹ ಮಾಡುವ ಬದಲು, ಸಗುಣಪೂಜೆಯಲ್ಲೋ ಪರಾರ್ಥಸಕಲ ಕಲ್ಯಾಣದಲ್ಲೋ, ಸೇವಾಸಂಪತ್ತಿನಲ್ಲೋ ಎಲ್ಲ ಇಂದ್ರಿಯಗಳಿಗೂ ಕೆಲಸ ಹೊಂದಿಸಿಕೊಟ್ಟು, ಮನಸ್ಸಿಗೆ ನಿಗ್ರಹವಿಲ್ಲದೆ, ಎಲ್ಲಿ ಬೇಕಾದರೂ ಹೋಗೆಂದರೂ, ಎಲ್ಲೂ ಹೋಗಲಾರದೆ, ಆ ಸೇವಾಕ್ಷೇತ್ರದಲ್ಲೇ ವಿಹರಿಸೀತು. ಏಕಾಗ್ರವಾದೀತು.

ಸೂಫಿ ಒಂದೆಡೆ ಹೇಳಿದ್ದಾನೆ: "My worry over my work is my

disease." ನನ್ನ ಕೆಲಸದ ಮೇಲಿನ ಆಸೆಯ—ಪರದಾಟ ಪೇಚಾಟ—ನನ್ನ ರೋಗ. ನನ್ನದು ಎಂದು ಹಚ್ಚಿಕೊಂಡು ಕೆಲಸಕ್ಕೆ ಗುಲಾಮವಾಗುವುದು. ಇದು ಆಯಿತು, ಇನ್ನೇನಿದೆ ಮಾಡುವುದು ಎಂದು ಹಚ್ಚಿಕೊಳ್ಳುವುದೇ ಉಪದ್ರ. ನಾನು ಮಾಡಿದೆ, ನನ್ನದು ಎನ್ನುವ ಭಾವನೆಯಿಂದ ಅದರಲ್ಲಿ ಆಸೆ. ಒಂದು ಬೆಂಕಿಯಲ್ಲಿ ನೂರಾರು ಚಿತ್ರಪಟಗಳು ಪ್ರದರ್ಶಿಸಿದುವು ಸುಟ್ಟು ಹೋಯಿತು. ನನ್ನದೊಂದು ಸುಂದರ ಪಠ ಅದರಲ್ಲಿ ಸುಟ್ಟುಹೋಯಿತಲ್ಲಾ ಎಂದು ವ್ಯಥೆ. ಅದರಂತೆ ಇದ್ದುವು, ಅದಕ್ಕಿಂತ ಚೆನ್ನಾಗಿದ್ದು ಬಹುಮಾನ ಬಂದವು ಸುಟ್ಟುಹೋದವು, ಅದಕ್ಕಾಗಿ ನನಗೆ ವ್ಯಥೆಯಿಲ್ಲ. ನನ್ನ ಪಟ ಸುಟ್ಟು ಹೋಯಿತಲ್ಲಾ ಎನ್ನುವ ವ್ಯಥೆ. ಒಂದಾವರ್ತಿ ಒಂದು ಪಾಠಶಾಲೆಗೆ ಮಕ್ಕಳಿಗೆ ಪಾಠ ನಡೆಯುತ್ತಿದ್ದಾಗ ಬೆಂಕಿ ಬಿದ್ದಿದೆ ಎನ್ನುವ ವರ್ತಮಾನ ಬಂತು. ತತ್ಕ್ಷಣ ತಂದೆ ತಾಯಿಗಳು "ಓ ನನ್ನ ಕಂದಾ" ಎಂದು ಎದೆ ಬಡಿದುಕೊಂಡು ಆ ಕಡೆ ಓಡಿದರು. ಅಲ್ಲಿಗೆ ಓಡಿ ಬರುತ್ತಿದ್ದ ತಂದೆಯೊಬ್ಬನಿಗೆ "ನಿಮ್ಮ ಮಗ ಸುಖವಾಗಿ ಬದುಕಿದ್ದಾನೆ, ಹೊರಗೆ ಬಂದ" ಎಂದ ತತ್‌ಕ್ಷಣವೇ "ಸಧ್ಯ ಬದುಕಿದೆಯಾ ನನ್ನ ಕಂದಾ" ಅಂತ ಒಡನೆ ಹರ್ಷಗೊಳ್ಳುತ್ತಾನೆ. ಇತರರು ಹೇಗಿದ್ದಾರೆನ್ನುವುದು ಕೂಡ ಗಮನಕ್ಕೆ ಬರುವುದಿಲ್ಲ. ತನ್ನದು ಎನ್ನುವುದೇ ಮೂರು ಲೋಕ. ಮೈದಾನದಲ್ಲಿ ಮಗು ಆಡುತ್ತಾ ಬಿದ್ದು ಅತ್ತಾಗ, ಯಾರಾದರೂ ಕೇಳಿದರೆ, ದಾಯಿ ಕೂಡ "ನನ್ನ ಮಗು" ಎಂದು ಹೇಳುತ್ತಾಳೆ. "ನನ್ನ ಕಂದಾ ಅಳಬೇಡ"ವೆಂದು ಆ ಮಗುವನ್ನು ಎತ್ತಿ ಸುದಾರಿಸುತ್ತಾಳೆ. ಮನೆಗೆ ಆಟವಾಡಿದ ಮೇಲೆ ಎತ್ತಿ ತರುತ್ತಲೆ, ಯಜಮಾನ ಕಾರಣಾಂತರದಿಂದ ದಾಯಿಯನ್ನು ಸಂಬಳ ಕೊಟ್ಟು ಇಟ್ಟುಕೊಳ್ಳುವ ಚೈತನ್ಯವಿಲ್ಲದೆ ಕೆಲಸ ಬಿಟ್ಟು ಹೋಗೆನ್ನುತ್ತಾನೆ. ಆಗ ಆಕೆ ಮಗುವನ್ನು ಅದರ ತಂದೆತಾಯಿಗೊಪ್ಪಿಸಿ ನಿಶ್ಚಿಂತೆಯಿಂದ ಹೋಗಿಬಿಡುವುದಿಲ್ಲವೆ! ಅಂತೆಯೇ ದೇವರು ಮಕ್ಕಳನ್ನು ನಮಗೆ ಸಾಕಲು ಕೊಟ್ಟಿರುವನೆಂದೂ, ನಾವು ಅವರ ದಾಯಿಯಂತೆಯೂ ಭಾವಿಸಿ ಸ್ವಂತ ಮಕ್ಕಳನ್ನೂ ಕೂಡ ಕಂಡು ಪೋಷಿಸಬೇಕು. ಯಾರ ಮಕ್ಕಳೋ? ಅಕ್ಕರೆಯಿಂದ ಸಾಕಿ ಸಲಹಿದ ಮಕ್ಕಳು ರೆಕ್ಕೆ ಬಲಿತ ಮೇಲೆ ಎಷ್ಟು ಜನ ತಂದೆ ತಾಯಿರನ್ನು ಅನಾದರದಿಂದ ಕಂಡಿಲ್ಲ, ಹೀಯಾಳಿಸಿ ನೋಡಿಲ್ಲ. ಮುಂದೆ ನನ್ನನ್ನು ಸಲಹುತ್ತಾನೆ ಎನ್ನುವ ಭಾವನೆಯಿಂದ, ಫಲಾಪೇಕ್ಷೆಯಿಂದ ಸಾಕಿ

ದವರ ಆಸೆ ನಿರಾಶೆಯಲ್ಲವೆ "ನಿರಾಶೀಃ, ನಿರ್ಮಮೋ ಭೂತ್ವಾ" ಎಂದು ಸ್ವಾಮಿಯದಕ್ಕೇ ಹೇಳಿರುವುದು. ಪ್ರಕೃತಿಯನ್ನು ಭೂತಗಳು ಅನುಸರಿಸುವುವು, ಅವರವರ ಸ್ವಭಾನುಗುಣವಾಗಿ ನಡೆವರು. ನಿಗ್ರಹವೇನು ಮಾಡೀತು?

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥೩೪॥

ಪ್ರತಿಯೊಂದು ಇಂದ್ರಿಯಗಳಲ್ಲೂ ರಾಗದ್ವೇಷ ಇದ್ದೇ ಇರುವುದು. ಒಂದು ಕೊಳದಲ್ಲಿ ಮೇಲೆ ನೋಡಿದರೆ ನೀರು ನಿರ್ಮಲ. ಒಂದು ಕಲ್ಲೆಸೆಯಿರಿ. ಒಳಗಿನ ಹೊಲಸು ಮೇಲೆ ಬರುತ್ತೆ. ಮನಸೂ ಹಾಗೆಯೇ. ರಾಗವೇನು ಹೊರಗಿನಿಂದ ಬಂತೆ? ಒಳಗೇ ಅಡಗಿ ಅದು ಇತ್ತು. ಇರದಿದ್ದರೆ ಹೊರಗೆ ಬಾರದಲ್ಲ! ಒಳಗಿದ್ದುದು ನಿರ್ಮಲವಾಗಬೇಕು. ಬರಿ ಮೇಲಿನ ತಿಳಿಜಲವಲ್ಲ. ಕೊಳವೇ ಶುದ್ಧವಾಗಬೇಕು. ವಿವೇಕಿಯಾದವನು ಅವುಗಳಿಗೆ ವಶನಾಗಬಾರದು. ಈ ರಾಗದ್ವೇಷಗಳೇ ಅವನಿಗೆ ಶತ್ರುಗಳು. ನಮ್ಮಲ್ಲಿ ವಾಸಿಸುವ ಶಕ್ತಿ ವಾಸುದೇವ ಶಕ್ತಿ, ಈಶಶಕ್ತಿಯ ಅಂಶ. ಅನಂತ ಸರ್ವವ್ಯಾಪಕ ಶಕ್ತಿಯ ಅಂಶ. ನಾವು ವಿವೇಕದಿಂದ ಆ ರಾಗದ್ವೇಷಗಳನ್ನು ಎದುರಿಸಿ ನಿಂತರೆ ಎಷ್ಟು ಶಕ್ತಿ ಅಗತ್ಯವೋ ಅಷ್ಟು ಶಕ್ತಿ ದೊರೆಯುತ್ತದೆ. ನಿಗ್ರಹದ ಮೇಲೆ ಆಗ್ರಹ ಬೇಡ. ಆಗ್ರಹದ ಮೇಲೆ ನಿಗ್ರಹವಿರಲಿ.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥

ಪರಧರ್ಮವನ್ನು ಅನುಷ್ಠಾನ ಮಾಡುವುದಕ್ಕಿಂತಲೂ ಸ್ವಧರ್ಮವೇ ಶ್ರೇಯೋ ಸಾಧನವು. ಸ್ವಧರ್ಮಪ್ರವೃತ್ತಿಯಲ್ಲಿಯೇ ಮೃತಿ ಹೊಂದಿದರೂ ಶ್ರೇಯಸ್ಸೇ. ಪರಧರ್ಮವು ಭಯವನ್ನುಂಟುಮಾಡುವುದು. ಸ್ವಾಭಾವಿಕವಾಗಿ ಹುಟ್ಟುಗುಣಕ್ಕನುಗುಣವಾಗಿ ಬಂದಿರುವ ಧರ್ಮವು ಮಾಡಲು ಸುಲಭ.

ಕರ್ಮ ಸಹಜವಾಗಿಬಿಟ್ಟರೆ ಅದರ ಭಾರ ತಿಳಿಯುವುದಿಲ್ಲ. ಕರ್ಮ ಅಕರ್ಮವಾಗುತ್ತೆ, ಆನಂದಮಯವಾಗುತ್ತೆ. ಒಬ್ಬ ಈಜು ಕಲಿತು ಸಹಜವಾಗಿ ಈಜಲು ಬಂದುಬಿಟ್ಟರೆ ಈಜಿನಲ್ಲಿ ಆಯಾಸವಿಲ್ಲ. ಆನಂದವಾಗುತ್ತೆ. ಮಗು ನಡೆವುದು ಕಲಿತು, ಎದ್ದು ಬಿದ್ದು ಅಭ್ಯಾಸಿಸಿದ ಮೇಲೆ, ನಡೆ ಸಹಜವಾದಾಗ ಆಯಾಸವಿಲ್ಲ. ನಡೆಯುಲ್ಲೇ ಆನಂದ. ಅವರವರ ಸ್ವಧರ್ಮವನ್ನು

ಅವರವರು ಮಾಡುತ್ತ ಹೋದರೆ ಲೋಕಸಂಗ್ರಹವೂ ಸರಿಯಾಗಿ ನಡೆಯುತ್ತದೆ. ಅದನ್ನು ಬಿಟ್ಟು ಒಬ್ಬರ ಕೆಲಸಕ್ಕೆ ಮತ್ತೊಬ್ಬರು ತಲೆ ಹಾಕೊಂಡರೆ, ಒಬ್ಬರಿಗೊಬ್ಬರಿಗೆ ಅಸಮಾಧಾನ, ಅಸೂಯೆಗೂ ಕಾರಣ. ಒಬ್ಬರಿಗೊಬ್ಬರಿಗೆ ಪೋಟಾಪೋಟಿಯಿಂದ ಭಯಾನಕ. ಇದು ಸ್ವಧರ್ಮವಾದ ಯುದ್ಧವನ್ನು ಮಾಡಲು ಅರ್ಜುನನಿಗೆ ಉತ್ಸಾಹಕ್ಕಾಗಿ ಸ್ವಧರ್ಮ ಶ್ರೇಯಸ್ಸನ್ನು ಒತ್ತಿ ಹೇಳಿದೆ. "ಪ್ರಕೃತಿಂ ಯಾಂತಿ ಭೂತಾನಿ, ನಿಗ್ರಹಃ ಕಿಂ ಕರಿಷ್ಯತಿ" ಎನ್ನುವುದು ಎಷ್ಟೋ ಜನಕ್ಕೆ, ನನಗೂ ಅರ್ಥವಾಗದಿದ್ದಂತೆ, ಅರ್ಜುನನಿಗೂ ಅರ್ಥವಾಗಲಿಲ್ಲ. ಸವಾಲು ಹಾಕಿದ:

> ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।
> ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥

"ಪಾಪವನ್ನು ಮಾಡಬೇಕೆಂಬ ಇಚ್ಛೆಯಿಲ್ಲದಿದ್ದರೂ, ಈ ಮನುಷ್ಯನು ಬಲಾತ್ಕಾರದಿಂದ ಪ್ರೇರಿಸಲ್ಪಟ್ಟವನಂತೆ ಯಾರ ಪ್ರೇರಣೆಯಿಂದ ಪಾಪವನ್ನಾಚರಿಸುತ್ತಾನೆ?" ಇದು ತನಗೂ ಅನ್ವಯಿಸುತ್ತದೆ. ಯುದ್ಧವಿಮುಖನಾಗಿ ಕರ್ತವ್ಯದೂರನಾಗಬೇಕೆಂಬ ಇಷ್ಟವಿಲ್ಲದಿದ್ದರೂ, ತಾನು ಯಾರ ಪ್ರೇರಣೆಯಿಂದ ಈ ರೀತಿ ಮೋಹಗೊಂಡು ಯುದ್ಧ ಮಾಡುವುದಿಲ್ಲವೆಂದು ಧನುಸ್ಸನ್ನು ಬಿಟ್ಟು (ವಿಸೃಜ್ಯ ಸಶರಂ ಚಾಪಂ) ಕಲುಷಿತಮಾನಸನಾಗಿ ರಥದಲ್ಲಿ ಕುಳಿತುದು? ತಿಳಿವು ಉದಯವಾಗುತ್ತಿದ್ದಂತಿದೆ ಅರ್ಜುನನಿಗೆ. ಭಗವಂತ ಬಿಡಿಸಿ ಹೇಳುತ್ತಾನೆ:

> ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
> ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥೩೭॥

ಶ್ರೇಯೋಮಾರ್ಗಕ್ಕೆ (ವಿದ್ಯೆಗೆ) ತಿಳಿವಳಿಕೆಗೆ ವೈರಿಗಳಾಗಿರುವ ಭೋಗಗಳಿಂದ ತೃಪ್ತಿಪಡಿಸಲಸಮಳವಾದ ಮಹಾಪಾಪಿಯಾದ ಕಾಮವೇ, ಕ್ರೋಧವೇ, ರಜೋಗುಣದಿಂದುತ್ಪತ್ತಿಯಾದ ಈ ಹಗೆಗಳೇ. ಪ್ರಜಾಪತಿಯ ಪುತ್ರರಾದ ದೇವ, ಮಾನವ, ಅಸುರರು ತಂದೆಯಾದ ಪ್ರಜಾಪತಿಯಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸಮಾಡಿದ ಮೇಲೆ, ಅನುಗ್ರಹದಿಂದ ಕೊನೆಯ ಸಂದೇಶ ಕೊಡಬೇಕೆಂದು ಕೇಳಿಕೊಂಡಾಗ ಪ್ರಜಾಪತಿಯು ಮೂವರಿಗೂ "ದ" "ದ" "ದ" ಎಂದು ಉಪದೇಶಿಸಿದನು. ಸಕಾಮಿಗಳಾದ ದೇವಗುಣಸಂಭೂತರಾದವರು "ದ" ಎಂದರೆ "ದಮಾ" ಎಂದರೆ "ನಿಗ್ರಹ" ಸಂಯಮಿಯಾಗಿರುವುದೆಂದು ಅರ್ಥ

ಮಾಡಿಕೊಂಡರು. ರಜೋಗುಣ ಪ್ರಧಾನರಾದ (ಲೋಭಿಗಳಾದ) ಮಾನವರು "ದ" ಎಂದರೆ "ದಾನ"ವೆಂದು ಅರ್ಥಮಾಡಿಕೊಂಡರು. ತಮೋಗುಣಪ್ರಧಾನ ರಾದ ಅಸುರರು "ದ" ಎಂದರೆ "ದಯಾ" ಎಂದು ಅರ್ಥಮಾಡಿಕೊಂಡರು. ಶ್ರೀ ಶಂಕರರು ತಮ್ಮ ಭಾಷ್ಯದಲ್ಲಿ (ಬೃ. ೭. ೨ ಮು) ಈ ಉಪದೇಶವು ಈ ಮೂರು ಗುಣ ಪ್ರಧಾನವುಳ್ಳ ಮೂರು ತರಹ ಮಾನವರಿಗೆ ಬೇಕಾಗಿದೆ ಯೆಂದೂ, ಈ ಮೂರನ್ನೂ ಅವರವರ ಗುಣಪ್ರಾಧಾನ್ಯದ ಮೇಲೆ ಅವಕ್ಕೆ ಲಗತ್ತಾಗುವ ಉಪದೇಶದ ಮೇಲೆ ಹೆಚ್ಚಿನ ಅನುಸರಣೆ ಮಾಡಬೇಕೆಂದೂ, ಮಾನವ ವರ್ಗಕ್ಕೆ ಪ್ರಜಾಪತಿಯ ಉಪದೇಶವೆಂದೂ ಹೇಳಿರುವರು. ಅಂತೇ ಇಲ್ಲಿಯೂ "ಕಾಮ, ರಜಸ್ಸು ಕ್ರೋಧ"ಗಳು ಮನುಷ್ಯನಿಗೆ ನಿತ್ಯವೈರಿಗಳಾಗಿ ಅಧರ್ಮ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವುವು ಎಂದೂ ಮುಂದೆ (೧೬ ಅ. ೨೧ ಶ್ಲೋಕದಲ್ಲಿ) "ಕಾಮ, ಲೋಭ, ಕ್ರೋಧವು ತ್ರಿವಿಧ ನರಕದ್ವಾರ, ಅದನ್ನು ತ್ಯಜಿಸಬೇಕೆಂದು ಭಗವಂತನು ಗೀತೆಯಲ್ಲಿ ಉಪದೇಶಿಸಿರುವನು. ಅರ್ಜುನನು ಕೇಳಿದ ಪ್ರಶ್ನೆಗೆ, ಅಧರ್ಮ ಮಾರ್ಗದಲ್ಲಿಚ್ಛೆಯಿಲ್ಲದಿದ್ದರೂ ಪ್ರವರ್ತಿ ಸುವಂತೆ ಮಾಡುವ ಗುಣತ್ರಯವಿಭಾಗದ ಮಾನವರ ತ್ರಿವೈರಿಗಳನ್ನು ಬಿಡ ಬೇಕೆಂದೂ ಭಗವಂತನು ಹೇಳಿರುವುದಕ್ಕೆ ಬೃಹದಾರಣ್ಯಕೋಪನಿಷತ್ತಿನ ಪ್ರಜಾ ಪತಿಯ ಉಪದೇಶವು ಸಕಲ ಮಾನವವರ್ಗಕ್ಕೂ ಅತ್ಯಗತ್ಯವಾಗಿದೆ. ಮಾನವ ನಲ್ಲಿ ಕಾಮ ಕ್ರೋಧ ಲೋಭಗಳಿಲ್ಲದವನಿಲ್ಲವೆಂದೇ ಹೇಳಬಹುದು. ಕೊಂಚ ಒಂದು ಕಡಮೆ, ಒಂದು ಹೆಚ್ಚಿರಬಹುದೇ ಹೊರತು ಮೂರನ್ನೂ ಗೆದ್ದು ಲೇಶ ಮಾತ್ರವಿಲ್ಲದವನಾದರೆ ಅವಮಾನವನಲ್ಲ "ತತ್ರ ಬ್ರಹ್ಮ ಸಮಶ್ನುತೇ" ಎನ್ನು ವಂತೆ ಆಗಲೆ ಬ್ರಹ್ಮಸಮಾನನಾಗಿಬಿಡುವನು. ಆದುದರಿಂದ ಮಾನವರೆಲ್ಲ, ಈ ಮೂರು ವೈರಿಗಳನ್ನು ಗೆಲ್ಲಲು ದಮ (ಸಂಯಮ), ದಾನ (ಲೋಭ ಬಿಟ್ಟು ಪರರಿಗೆ ಕೊಡುವುದು), ದಯಾ (ಕ್ರೋಧ ಬಂದಾಗ ದಯೆ ತೋರಿಸುವುದನ್ನು) ಅಭ್ಯಸಿಸಬೇಕು.

ಹಾವುಗಳು ವಿಷಜಂತುಗಳೆಂದು ಸಾಧಾರಣೋಕ್ತಿ ಇದ್ದರೂ, ಶಾಸ್ತ್ರಪ್ರಕಾರ ಶೇಕಡ ತೊಂಬತ್ತಕ್ಕೆ ವಿಷವೇ ಇಲ್ಲವಂತೆ. ನಾವು ಹಾವುಗಳೆಂದು ಹೆದರಿದರೂ, ವಿಷಜಂತುಗಳಾದ ಹಾವುಗಳಲ್ಲ. ಆದರೆ ಸದ್ಭಾವದವನೆಂದೂ, ದೇವಾಂಶ ನೆಂದೂ ಬೊಗಳಿಕೊಳ್ಳುವ ಮಾನವರಾದ ನಮ್ಮ ವಿಷಯದಲ್ಲಿ ಅದೇ ಹೇಳ

ಲಾಗುತ್ತದೆಯೆ? ಎದೆ ಮುಟ್ಟಿಕೊಂಡು ಹೇಳಿ. ನಮ್ಮಲ್ಲಿ ನಾವೇ ನೋಡಿ ಕೊಳ್ಳೋಣ. ಕಾಮ, ಕ್ರೋಧ, ಲೋಭಗಳೆಂಬ ವಿಷ ನಮ್ಮಲ್ಲಿ ಸಾಧಾರಣ ವಾಗಿ ತುಂಬಿದೆ. 'ಒಂದು ಜಾತಿಗೆ ವಿಷವು ಪುಚ್ಛದಲ್ಲಿಹುದು, ಮತ್ತೊಂದು ಜಾತಿಗೆ ದಂತದಲ್ಲಿಹುದು . . ." ಇತ್ಯಾದಿ ಹೇಳುವ ನಮ್ಮ ಕನ್ನಡ ಪದ್ಯದ ಪ್ರಕಾರ ಮಾನವನಿಗೆ ಶರೀರವೆಲ್ಲಾ, ದೇಹವೆಲ್ಲಾ ವಿಷವು. ಅದೇ ಆ ಕಾಮ, ಕ್ರೋಧ, ರಜೋಗುಣಗಳ ಆವೇಶ, ಅತಿಕ್ರಮ ಅದನ್ನು ನಾಶಮಾಡಲು ಪ್ರಯತ್ನಿಸಬೇಕು. ಹಲ್ಲು ತೆಗೆದು (ವಿಷದಂತವನ್ನು) ನಿರುಪದ್ರವವನ್ನಾಗಿ ಸರ್ಪವನ್ನು ಮಾಡುವಂತೆ ವಿಷ ಹೋಗದಿದ್ದರೂ, ಅದರ ಪ್ರಯೋಗಕ್ಕೆ ಆಸ್ಪದ ವಾಗದಂತೆ ದಮ, ದಯಾ, ದಾನಗಳನ್ನು ಅಭ್ಯಸಿಸಬೇಕು. ಕಾಮ, ಕ್ರೋಧ, ರಜ ಅಥವಾ ಕಾಮ, ಕ್ರೋಧ, ಲೋಭ ಎಂದು ಹೇಳಿರುವ ಮೂರು ಗುಣ ಗಳನ್ನು ಸರ್ವರೂ ತ್ಯಜಿಸಬೇಕಾದರೂ ಅದೇ ಸರಪಣಿಯಲ್ಲಿ ಈ ಮೂರು ಗುಣಗಳೂ, ಮೂರು ಧರ್ಮ ವರ್ಣದವರಿಗೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಹೆಚ್ಚು ಶತ್ರುಗಳು. ಬ್ರಾಹ್ಮಣನಿಗೆ ಕಾಮ ಆ ಮೂರರ ಪೈಕಿ ಹೆಚ್ಚು ವೈರಿ. ಬಡ ಬ್ರಾಹ್ಮಣನ ಕೋಪ ಕೇಳುವವರ್ಯ್ಯಾರು? ಅವನ ದವಡೆಗೇ ಮೃತ್ಯು. ಅವನಿಗೆ ಲೋಭಕ್ಕವಕಾಶವೇ ಇಲ್ಲ. ಇದ್ದರೆ ತಾನೆ ಲೋಭ. ಅವನು ಆದ್ದ ರಿಂದ ಕಾಮ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕು. ಯಾವುದನ್ನೂ ಆಶಿಸ ಬಾರದು. ಕಾಮಿನಿ, ಕಾಂಚನಗಳಿಂದ ದೂರವಿರಬೇಕು. ಹೆಣ್ಣು, ಹೊನ್ನು, ಹೊಲ, (ಭೂಮಿ) ಈ ಆಸೆಗೆ ಬಿದ್ದರೆ ಅವನ ಬ್ರಾಹ್ಮಣ್ಯಕ್ಕೆ ಬಂತು ಸಂಚ ಕಾರ. ಅದರ ಸಾಧನೆಯಲ್ಲಿ ಬ್ರಹ್ಮನನ್ನರಸುವುವನ್ನು ಮರೆವನು. ಕ್ಷತ್ರಿಯ ನಿಗೆ ಕಾಮ, ಲೋಭಗಳಿಗಿಂತ, ಕ್ರೋಧವು ಹೆಚ್ಚು ವೈರಿ. ರಾಜನಿಗೆ ಕೋಪ ಬಂದರೆ ಗತಿಯೇನು? ಬಲಿಷ್ಠನಾದ ಯೋಧನು ಕೋಪಿಸಿದರೆ ಎದುರಾಳಿಗೆ ಮೃತ್ಯು. ಆದುದರಿಂದ ಕ್ಷತ್ರಿಯ ಕೋಪ ಬಾರದಂತೆ ಎಚ್ಚರಿಕೆಯಿಂದಿರಬೇಕು. ವೈಶ್ಯನಿಗೆ ಲೋಭ ಮಹಾಶತ್ರು, ಮೋಸಕ್ಕೆ ಮಾರ್ಗ. ಅವನ ವಾಣಿಜ್ಯ ವ್ಯವ ಹಾರದಲ್ಲಿ ಲೋಭ ಬಂದರೆ, ಹಣದಾಸೆಯಿಂದ ಸತ್ಯಚ್ಯುತನಾಗುವನು. ಈ ತ್ರಿವರ್ಣದವರೂ ದಮ, ದಯಾ, ದಾನಗಳನ್ನು ಅಭ್ಯಾಸಮಾಡಬೇಕು, ಹೆಚ್ಚಿನ ದಾಗಿ. ವಾಲ್ಮೀಕಿ ರಾಮಾಯಣದಲ್ಲಿ ರಾಮರಾಜ್ಯವನ್ನು ವರ್ಣಿಸುವಾಗ ವೈಶ್ಯರು ಲೋಭವಿಲ್ಲದಿದ್ದರು ಎಂದು ಹೇಳಿದ್ದಾರೆ ಮಹಾಕವಿ.

ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥೩೮॥

ಅಗ್ನಿಯನ್ನು ಹೊಗೆಯೂ, ದರ್ಪಣವನ್ನು ಧೂಳೂ, ಗರ್ಭವನ್ನು ಕೋಶದ ಪರೆಯೂ ಆವರಿಸಿದಂತೆ ಈ ಜ್ಞಾನವನ್ನು ಈ ಮೂರು ವೈರಿಗಳೂ ಆವರಿಸಿರುವುವು.

"ಆಶಾಯಾಯೇದಾಸಸ್ತೇ ದಾಸಾಃ ಸರ್ವಲೋಕಸ್ಯ ।
ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಾಃ"

ಎಂದು ಬೃಹನ್ನಾರದ ಪುರಾಣದಲ್ಲಿ ಹೇಳಿರುವಂತೆ ಈ ಆಸೆಯು, ಕಾಮವು ನಮ್ಮನ್ನು ಸರ್ವಲೋಕದಾಸರನ್ನಾಗಿ ಮಾಡುತ್ತೆ. ಪ್ರತಿಯೊಂದು ಕಾಂಕ್ಷೆಯೂ, ಪ್ರತಿಯೊಂದು ಸ್ವಾರ್ಥಪ್ರಯತ್ನವೂ ನಮ್ಮ ನಮ್ಮನ್ನು ಬಂಧಿಸುವ ಸಂಕೋಲೆ. ಸರಪಣಿಯ ಒಂದು ಕುಣಿಕೆಯನ್ನು ಕಿತ್ತೆಸೆಯುತ್ತ, ಇದೇ ರೀತಿ ಮಾಡುತ್ತ, ಒಂದೊಂದು ಕುಣಿಕೆ ಸವೆಯುತ್ತ ನಾವು ಬಂಧವಿಮುಕ್ತರಾಗುತ್ತೇವೆ.

ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥೩೯॥

ಇದಕ್ಕೆ ಪ್ರತಿಬಂಧಕವಾಗಿ, ಜ್ಞಾನಿಗಳಿಗೆ ನಿತ್ಯವೈರಿಯಾಗಿಯೂ, ತೃಪ್ತಿಪಡಿಸಲಸದಳವಾಗಿಯೂ, ಅಗ್ನಿಪ್ರಾಯವಾಗಿಯೂ ಇರುವ ಕಾಮರೂಪವಾದ ಮೋಹವು ಜ್ಞಾನವನ್ನು ಆಚ್ಛಾದಿಸಿದೆ. ದೀಪವು ಉರಿದು ಸುಟ್ಟುಹೋಗುವುದೇ, ಉರಿಯುತ್ತ ಕ್ಷೀಣಿಸುವುದೇ ಅದರ ಜೀವನ.

ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥

ಈ ಕಾಮಕ್ಕೆ ಇಂದ್ರಿಯ, ಮನಸ್ಸು, ಬುದ್ಧಿ ಆಶ್ರಯಸ್ಥಾನವೆಂಬುದಾಗಿ ಜ್ಞಾನಿಗಳಿಂದ ಹೇಳಲ್ಪಟ್ಟಿದೆ. ಈ ಕಾಮವು ಇವನ್ನಾಶ್ರಯಿಸಿ, ದೇಹಿಯಾದ ಆತ್ಮನನ್ನು ಮೋಹಗೊಳಿಸಿ ನಾಶಪಡಿಸುವುದು.

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥

ಆದುದರಿಂದ ನೀನು ಮೊದಲು ಇಂದ್ರಿಯಗಳನ್ನು ಜಯಿಸಿ (ನಿಗ್ರಹಿಸಿ), ಜ್ಞಾನವಿಜ್ಞಾನಗಳನ್ನು ನಾಶಮಾಡುವಂತಹ ಪಾಪಿಯಾದ ಈ ಕಾಮವನ್ನು ನಾಶಮಾಡು.

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥೪೨॥

ಈ ಸ್ಥೂಲಕ್ಕಿಂತ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು ಶ್ರೇಷ್ಠವು. ಇಂದ್ರಿಯಗಳಿಗಿಂತ ಮನಸ್ಸು ಶ್ರೇಷ್ಠವು. ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವು. ಬುದ್ಧಿಗಿಂತ ಯಾವುದು ಶ್ರೇಷ್ಠವಾಗಿದೆಯೋ ಅದೇ ಆತ್ಮವಸ್ತುವೆಂದು ಶ್ರುತಿಗಳು ಹೇಳುವುವು.

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥

ಎಲ್ಲಕ್ಕೂ ಉತ್ಕೃಷ್ಟವಾದ ಆತ್ಮನನ್ನು ತಿಳಿದು ವಿವೇಕಬುದ್ಧಿಯಿಂದ ಮನಸ್ಸನ್ನು ವಶಪಡಿಸಿ ದುರ್ಜಯವಾದ ಕಾಮರೂಪವಾದ ಶತ್ರುವನ್ನು ನಾಶಪಡಿಸು ಎಂದು ಮಹಾಬಾಹುವಾದ ಅರ್ಜುನನಿಗೆ ಕರ್ಮಸೂಕ್ಷ್ಮವು ಕಾಮವನ್ನು ಸದೆಬಡಿವುದರಲ್ಲಿದೆ ಎಂದು ಪರಮಾತ್ಮನು ಉಪದೇಶಿಸಿದನು. ಈ ದುರ್ಜಯನಾದ ಶತ್ರುವನ್ನು ಗೆಲ್ಲುವುದಕ್ಕೆ ಮಹಾಬಾಹುವೇ ಆಗಬೇಕಲ್ಲವೆ? ಆದರೆ ಈ ಕಾಮನನ್ನು ಗೆಲ್ಲುವದೆಂತು?

ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಹಿ ವರ್ಧತೇ ।

ಎಂಬ ವಾಕ್ಯದಂತೆ, ಕಾಮವನ್ನು ಭೋಗಿಸಿಬಿಟ್ಟು ಶಮನ ಮಾಡುವುದು ಸಾಧ್ಯವಿಲ್ಲ. ಕಾಮವು ತೃಪ್ತಿಯಾಗುವುದಿಲ್ಲ, ಉಪಭೋಗದಿಂದ ಕಾಮವು ಹೋಗುವುದಿಲ್ಲ. ತೃಪ್ತಿಪಡಿಸಲು, ತುಪ್ಪ ಹಾಕಿದ ಅಗ್ನಿಯು ಪ್ರಜ್ವಲಿಸುವಂತೆ ಕಾಮವನ್ನು ಭೋಗಿಸಿದಷ್ಟೂ ಕಾಮವು ಅಧಿಕವಾಗುವುದು. ಇದಕ್ಕುಪಾಯವೇನು? ಕಾಮಿಸಿದ ಪದಾರ್ಥಗಳ ಭೋಗಿಸುವ ಆಸೆಯನ್ನೇ ಬಿಡುವುದು. ತುಪ್ಪ ಹಾಕದೆ ಬಿಟ್ಟರೆ ಅಗ್ನಿ ತಾನೇ ಶಮನವಾಗುವುದು. ಇದೇ ಭೋಗತ್ಯಾಗ. ಭೋಗೇಚ್ಛೆ ಮನದಿಂದ ಬಿಡಬೇಕು. ಇದಕ್ಕಾಗಿಯೇ ಕಠೋಪನಿಷತ್ತಿನಲ್ಲಿ ಎರಡು ಕಡೆ ಬರುವ

"ಇಂದ್ರಿಯೇಭ್ಯಃ ಪರಾಹ್ಯಾರ್ಥಾ, ಅರ್ಥೇಭ್ಯಶ್ಚ ಪರಂ ಮನಃ ।
ಇಂದ್ರಿಯೇಭ್ಯಃ ಪರಂ ಮನ್ಯೋ ಮನಸಸ್ಸತ್ವಮುತ್ತಮಃ ।
ಸತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ ॥

ಶ್ಲೋಕಾರ್ಥದಿಂದಲೇ ಶರೀರ–> ಇಂದ್ರಿಯ–> ಮನ–> ಬುದ್ಧಿ–>

ಆತ್ಮ ಶ್ರೇಷ್ಠವೆಂದು ಉಲ್ಲೇಖಿಸಿ, ಉಪಭೋಗದ ಚಾಪಲ್ಯವುಳ್ಳ ಇಂದ್ರಿಯ ಗಳನ್ನು ಮನಸ್ಸು ನಿಗ್ರಹ ಮಾಡಬೇಕು. ಮನಸ್ಸು ಆ ಕಡೆ ಕಾಮವಾಸನೆ ಗಳಿಗೆ ಹೋಗದಂತೆ ಬುದ್ಧಿ ಮನಸ್ಸಿಗೆ ಬುದ್ಧಿವಾದ ಹೇಳಬೇಕು. ಆಗ ಆತ್ಮ ಆತ್ಮನಲ್ಲಿ ಸ್ಥಿರವಾಗಿರುತ್ತೆ. ಇಲ್ಲವಾದರೆ—

"ಆಯುಃ ಪಲ್ಲವಕೋಣಾಗ್ರಲಂಬಾಂಬುಕಣಭಂಗುರಂ ।
ಉನ್ಮತ್ತ ಇವ ಸಂತ್ಯಜ್ಯ ಯಾತ್ಯಕಾಂಡೇ ಶರೀರಕಂ
ವಿಷಯಾಶೀವಿಷಾಸಂಗಪರಿಜರ್ಝರಚೇತಸಾಂ
ಅಪ್ರೌಢಾತ್ಮ ವಿವೇಕಾನಾಮಾಯುರಾಯಾಸಕಾರಣಂ

—ಮಹೋಪನಿಷತ್.

ಎಲೆಯ ತುದಿಯಲ್ಲಿ ಜೋಲಾಡುತ್ತಿರುವ ನೀರಿನ ಹನಿಯಂತೆ ಕ್ಷಣಭಂಗುರ ವಾದ ಆಯುಷ್ಯವೆಲ್ಲ ಅಪ್ರೌಢನೂ ಅವಿವೇಕಿಯೂ ಆದವನಿಗೆ ಆಯಾಸಕ್ಕೆ ಕಾರಣವು. ಉನ್ಮತ್ತನಾಗಿ ವಿಷಯಕಾಂಕ್ಷೆಯಿಂದ ವಿಷಯಸುಖ ಸೇವನೆ ಗಾಗಿ ತನ್ನ ಚೈತನ್ಯವನ್ನೆಲ್ಲ ಹಾಳುಮಾಡಿಕೊಳ್ಳುವನು. ಮೋಹಜಾಲಕ್ಕೆ ಸಿಲುಕದೆ ತ್ಯಾಗಮಾಡಬೇಕು. ನಾನು ಅನುಭವಿಸಬೇಕೆಂಬ ಕಾಂಕ್ಷೆಯಿಂದ, ನನ್ನ ಉಪಭೋಗವಸ್ತುಗಳೆಂಬ ಕಾಮವಾಸನೆ ಹತ್ತಿ ಚಪಲಜ್ವರವು ಹೆಚ್ಚು ವುದು. ಇದಕ್ಕಾಗಿಯೇ ಕಾಮವಾಸನೆಯ ಪಶುವೃತ್ತಿಯ ಚಂಚಲಚಿತ್ತವನ್ನು ಜ್ಞಾನದಿಂದ ಪರಿವರ್ತಿಸಬೇಕು. ಮನಸ್ಸು ಮಧ್ಯದಲ್ಲಿದೆ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಂದ ದೇಹಕ್ಕೆ ಒಂದೆಡೆ ಅಂಟಿಕೊಂಡಿದೆ, ಬುದ್ಧಿಯಿಂದ ಅಂತರಾತ್ಮನಿಗೆ ಅಂಟಿಕೊಂಡಿದೆ. ಕರ್ಮ ಮಾಡುವಾಗ ಮನಸ್ಸು ಇಂದ್ರಿಯ ಗಳ ಮೂಲಕ ದೇಹದೊಡನೆ ಸೇರಿಸಿದರೆ, ತಾನು ತನ್ನದೆಂಬ ಕಾಮ್ಯಕರ್ಮ ವಾಯಿತು. ಕರ್ಮ ಮಾಡುವಾಗ ಮನಸ್ಸು ಬುದ್ಧಿಯಿಂದ ನಿಯಮಿತವಾಗಿ ಆತ್ಮನ ಕಡೆ ವಾಲಿದರೆ ನಿಷ್ಕಾಮಕರ್ಮವಾಯಿತು. ಸರಕಾರವು ಸ್ಥಿರವಾಗಿ ರುವ ತನಕ ಒಂದೇ ಬೆಲೆಯ ಕಾಗದದ ನೋಟಿಗೂ ನಾಣ್ಯಕ್ಕೂ ಸಮನಾದ ಬೆಲೆಯಿದೆ. ಸರಕಾರ ಬದಲಾವಣೆಯಾದರೆ ನೋಟಿಗೆ ಕುರುಡು ಕಾಸಿನ ಬೆಲೆಯಿಲ್ಲ. ನಾಣ್ಯಕ್ಕಾದರೋ ಅದರ ಲೋಹದ ಬೆಲೆಯಾದರೂ ಇದ್ದೇ ಇದೆ. ಕರ್ಮತ್ಯಾಗಕ್ಕೂ ಕರ್ಮಯೋಗಕ್ಕೂ ಅಂತೇ ಎರಡು ಕಡೆಯೂ

ಕರ್ಮಯೋಗ / ಜ್ಞಾನ+ಕರ್ಮ } = { ಕರ್ಮತ್ಯಾಗ / ಜ್ಞಾನ+ಕರ್ಮಾಭಾವ

ಎರಡು ಕಡೆಯಿಂದಲೂ ಜ್ಞಾನವನ್ನು ತೆಗೆದುಹಾಕಿಬಿಟ್ಟರೆ ಉಳಿವ ಕರ್ಮ ಮತ್ತು ಕರ್ಮಾಭಾವಗಳಲ್ಲಿ ಕರ್ಮಾಭಾವಕ್ಕಿಂತ ಕರ್ಮವೇ ಶ್ರೇಷ್ಠವಾಗುವು ದೆಂದು ಸಾಧಕನಿಗೆ ತುಲನೆಮಾಡಿ ಹೇಳಿದುದು ಪರಮಾತ್ಮ.

ಕರೋತೀ ತಿ ಕರ್ಮಃ—ಮಾಡುವುದು ಕರ್ಮ. ಇದು ಪ್ರಕೃತಿಧರ್ಮದಂತೆ ಮನಸ್ಸು ನಿರ್ಧರ ಮಾಡುವುದು. ಕರ್ತವ್ಯಂ ಇತಿ ಕಾರ್ಯಂ=ಮಾಡಬೇಕಾದ್ದು ಕಾರ್ಯ. ಇದು ಬುದ್ಧಿಯ ನಿಷ್ಕರ್ಷೆಯಂತೆ ಮತಿಯು ನಿರ್ಧರಿಸುವುದು. ಕರ್ಮ ಮಾಡುವಾಗ ಕಾರ್ಯಾಕಾರ್ಯ ವಿವೇಚನೆಯನ್ನು ಬುದ್ಧಿಯು ನಿಶ್ಚಯ ಮಾಡು ತ್ತದೆ. ತೋರಿದಂತೆಯೇ ಮಾಡಿಬಿಡುವುದು ಸರಿಯಲ್ಲ. ಮಾಡತಕ್ಕುದೇ, ಮಾಡಬೇಕಾದುದೇ ಎಂದು ನಿಶ್ಚಯಿಸಿ ಕಾರ್ಯವನ್ನು ಮಾಡಬೇಕು. ಅಕಾರ್ಯ ವಾಗಿಹೋಯಿತು ಎಂದು ಅನಂತರ ಪಶ್ಚಾತ್ತಾಪಪಡಬಾರದು.

ದೇವನನ್ನು ಕಾಣಬೇಕಾದರೆ ಜ್ಞಾನಿಯ ಗುಹೆಯಲ್ಲೇ ಅಲ್ಲ, ಭಕ್ತನ ಗುಡಿ ಯಲ್ಲೇ ಅಲ್ಲ. ಕಾರ್ಮಿಕನ ಕಾರ್ಯಕ್ಷೇತ್ರದಲ್ಲೂ ದೇವ ಪ್ರತ್ಯಕ್ಷನಾಗಿದ್ದಾನೆ. ನೇಗಿಲು ಹಿಡಿದು ದುಡಿವವನ ಹೊಲದಲ್ಲಿ, ಕಬ್ಬಿಣವನ್ನು ಹದಮಾಡಲು ಕುಟ್ಟು ತ್ತಿರುವವನ ಕುಲುಮೆಯಲ್ಲಿ, ಹಸಿದು ಬರುವ ಹಸುಳೆಯರಿಗೆಂದು ಊಟ ಸಿದ್ಧಮಾಡುತ್ತಿರುವ ಪಾಕಶಾಲೆಯಲ್ಲಿ, ಎಲ್ಲೆಲ್ಲಿ ಕರ್ಮದ ಫಲವನ್ನು ಇತರರು ಭೋಗಿಸಲಿ ಎಂದು ಕೆಲಸ ಮಾಡುತ್ತಿರುವರೋ ಅಲ್ಲೆಲ್ಲ ಮನಸ್ಸಿನಲ್ಲಿ ದೇವನನ್ನು ಕಾಣಬಹುದು. ಯಾವನು ಒಂದು ತೆನೆ ಬಿಡುವ ಕಡೆ ಎರಡು ತೆನೆ ಬಿಡುವಂತೆ ದುಡಿಯುತ್ತಾನೋ ಅವನಿಗೆ ಅವನ ಕರ್ಮದಲ್ಲೇ ದೇವ ಪ್ರತ್ಯಕ್ಷ. ಯಾವ ಕೆಲಸವಾಗಲಿ, ಯಾವ ಸಂಪಾದನೆಯಾಗಲಿ, ಯಾರೂ ತನಗೆಂದೇ ದುಡಿಯುತ್ತಿಲ್ಲ. ಮೂವತ್ತು ರೂಪಾಯಿ ತರುವ ಗುಮಾಸ್ತನಾದರೂ ನಶ್ಯಕ್ಕೆ ಎಂಟಾಣೆಯನ್ನಿಟ್ಟುಕೊಂಡು ಮಿಕ್ಕ ೨೯॥ ರೂಪಾಯಿಯನ್ನು ತನ್ನ ಸಹ ವರ್ತಿಯ ಕೈಗೆ ತಂದು ಹಾಕುತ್ತಾನೆ—ಮನೆಖರ್ಚಿಗೆಂದು—ಹೆಂಡತಿ ಮಕ್ಕಳು ಊಟಮಾಡಲೆಂದು. ತಾನೂ ಅದರಲ್ಲಿ ಭಾಗಿಯಾಗುತ್ತಾನೆ. ಅವನು ಮಾಡು ವುದು ನಿಷ್ಕಾಮಕರ್ಮವಲ್ಲದೆ ಮತ್ತೇನು ? ಆದರೆ ಅದನ್ನವನು ಮನಃಪೂರ್ವಕ ಮಾಡಬೇಕು. ತಾನು ದುಡಿಯುತ್ತೇನೆ, ತಾನು ಸಂಪಾದಿಸುತ್ತೇನೆ, ತಾನು ಸಲಹುತ್ತೇನೆ ಎನ್ನುವ ಭಾವವನ್ನು ಬಿಡಬೇಕು. ನಾವು ಹೊರಗಿನ ಸಹಾಯ ಮಾಡುವಾಗ ಕೂಡ, ಭಿಕ್ಷುಕನಿಗೆ ಭಿಕ್ಷೆ ಕೊಡುವಾಗ ಕೂಡ, ನಾವು ಕೊಟ್ಟೆ

ವೆಂಬ ಅಹಂ ಇರಬಾರದು. ಪರಮಾತ್ಮನೆ ಆ ರೂಪದಲ್ಲಿ ಬಂದು, ಭಿಕ್ಷೆ ಸ್ವೀಕರಿಸಿ, ಭಿಕ್ಷೆ ಕೊಡಲು ಆಸ್ಪದಕೊಟ್ಟು, ಭಿಕ್ಷೆ ಕೊಟ್ಟದ್ದರಿಂದ ನಾನು ಪವಿತ್ರನಾಗಲು ಅವಕಾಶ ಕೊಟ್ಟುದಕ್ಕಾಗಿ ಪರಮಾತ್ಮಸ್ವರೂಪನಾದ ಭಿಕ್ಷುಕ ನಿಗೆ ಕೃತಜ್ಞನಾಗಿರಬೇಕು. ಕೊಡಲು ನಾ ಯಾರು? ನನ್ನದೇನು? ಕೊಟ್ಟ ಕಾಸಿನಲ್ಲಿ ಅವ ಕುಬೇರನಾಗಲಿಲ್ಲ, ನಾ ದರಿದ್ರನಾಗಲಿಲ್ಲ. ನಮ್ಮ ದುಡಿಮೆಯ ಫಲ ಉಣುವವರೆಲ್ಲ ನಮ್ಮ ಆತ್ಮಸ್ವರೂಪರೇ. ನನ್ನ ಕರ್ಮಫಲ ಸತ್ಫಲವಾಗಿ ಆ ರೂಪವಾಗಿ ಭಗವಂತನ ಪೂಜೆಯಾಯಿತಲ್ಲಾ ಎಂದು ನಮ್ಮ ದುಡಿಮೆಯ ಬದುಕಿನಲ್ಲಿ ನಾವು ಭಗವಂತನನ್ನು ಕಾಣಬೇಕು. ನಾವು ಮಾಡುವ ಕರ್ಮ ಫಲತ್ಯಾಗದಿಂದಲೇ, ಆ ಫಲದ ಅಧಿಕಾರ ನನ್ನ ಸ್ವಾರ್ಥಕ್ಕಿಲ್ಲವೆಂದೂ, ಲೋಕೋಪಕಾರಕ್ಕೆಂಬ ಭಾವನೆಯಿಂದಲೇ ಪ್ರತಿಕರ್ಮವೂ ಯಜ್ಞ (Sacrifice) ಆಗುವುದು. ನಮ್ಮ ಕೈ ಕೆಲಸದಲ್ಲಿದ್ದರೂ, ಈ ಭಾವನೆಯಿಂದ ಮನಸ್ಸು ಪರ ಮಾತ್ಮನಲ್ಲಿರಬೇಕು. ಆಗ ಕರ್ಮಬಂಧನ ಕಳಚುತ್ತೆ.

ತಿಳಿದು ಮಾಡಲಿ, ತಿಳಿಯದೆ ಮಾಡಲಿ, ತಿಳಿವಳಿಕೆಯಿಲ್ಲದೆ ಮಾಡಲಿ, ಕರ್ಮ ಫಲವು ತ್ರಿರೂಪವಾಗಿದೆ. ಯಾವ ಮನುಷ್ಯನ ಚಿತ್‌ಶಕ್ತಿಯು ಚೇತನರೂಪ ವಾಗಿ ಪ್ರವಹಿಸಿದರೂ ಆ ಕಾರ್ಯಫಲವು ತ್ರಿವಿಧ:—

(೧) ಚಿತ್‌ಸಂಕಲ್ಪದಿಂದಾಗುವ ಫಲ ಬೇರೆ.

(೨) ಶಕ್ತಿಯಿಂದ ಜೀವನದಿಂದಿರುವ ದೇವಸಂಕಲ್ಪದಿಂದಾಗುವ ಫಲ ಬೇರೆ.

(೩) ಚೇತನದಿಂದ ದೇವತೆಗಳಾಚೆಗಿರುವ ಮಹತ್‌ತತ್ವದ ವಿಜೃಂಭಣವು ಪ್ರಕಟವಾಗುವುದರ ಫಲ ಬೇರೆ.

ಇದನ್ನು ತಿಳಿದು ಸ್ವಸಂಕಲ್ಪ ಬಿಟ್ಟು, ದೇವಸಂಕಲ್ಪಕ್ಕೆ ಪೂರ್ಣ ಸಮ್ಮತಿಯಿಂದ ತಲೆಬಾಗಿ, ಮಹತ್ವದ ವಿಜೃಂಭಣದಲ್ಲೇ ಎಲ್ಲ ಫಲವೂ ಪ್ರಕಟವಾಗಲೆಂದು ಸ್ವಾರ್ಥಫಲತ್ಯಾಗ ಮಾಡುವುದೇ ಕರ್ಮದ ಮರ್ಮ.

ಈ "ಕರ್ಮಬಂಧವು" ಏಳು ವಿಭಕ್ತಿಗಳಲ್ಲೂ ಬಂಧಿಸಿದೆ:—

I. ಕರ್ಮ ಏವ ಬಂಧಃ = ಕರ್ಮಬಂಧಃ = ಕರ್ಮವೇ ಬಂಧ. "is"

II. ಕರ್ಮ ಬಧ್ನಾತೀತಿ ಕರ್ಮಬಂಧಃ = ಕರ್ಮದ ದೆಸೆಯಿಂದ ಬಂಧ "with"

III. ಕರ್ಮಣಾ ಭದ್ಯತೇ ಇತಿ ಕರ್ಮಬಂಧಃ = ಕರ್ಮದಿಂದ ಬಂಧ "by"

IV. ಕರ್ಮಣೇ ಬಂಧ ಕರ್ಮಬಂಧಃ - ಕರ್ಮಕ್ಕಾಗಿ ಬಂಧ "for"
V. ಕರ್ಮಣೋ ಬಂಧ ಕರ್ಮಬಂಧಃ - ಕರ್ಮದಿಂದ ಬಂಧ "from"
VI. ಕರ್ಮಣ್ಯೋ ಬಂಧ = ಕರ್ಮಬಂಧಃ = ಕರ್ಮಪ್ಪೇ ಬಂಧ "of"
VII. ಕರ್ಮಣೀ ಬಂಧ = ಕರ್ಮಬಂಧಃ = ಕರ್ಮದಲ್ಲಿ ಬಂಧ "in"

1 2 3 4 5 6 7
(Bondage is, with, by, for, from, of and in, Karma)

ಈ ಏಳುಸುತ್ತಿನ ಕೋಟೆಯಂತಿರುವ ಬಂಧನವನ್ನು ಕಳಚಿಕೊಳ್ಳಬೇಕಾದರೆ ಕರ್ಮಫಲತ್ಯಾಗವೊಂದೇ ಮಂತ್ರ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಕರ್ಮಯೋಗವೆನ್ನುವ ಮೂರನೆಯ ಅಧ್ಯಾಯ ಸಮಾಪ್ತಿ

# ನಾಲ್ಕನೆಯ ಅಧ್ಯಾಯ: ಜ್ಞಾನಯೋಗ

## ಬ್ರಹ್ಮಾರ್ಪಣಯೋಗ; ಜ್ಞಾನಕರ್ಮಸಂನ್ಯಾಸಯೋಗ. ಇತರ ಬಾಧೆಯಿಲ್ಲದೆ, ಬುದ್ಧಿಪೂರ್ವಕವಾಗಿ ಭಕ್ತಿ ಶ್ರದ್ಧಾದೃಷ್ಟಿ ಕರ್ಮನಿಷ್ಠೆ

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇऽಬ್ರವೀತ್ ॥೧॥

ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥

ಸ ಏವಾಯಂ ಮಯಾ ತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋऽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥೩॥

"ಈ ರಹಸ್ಯವನ್ನು, ಕರ್ಮವನ್ನು ಯಾವ ದೃಷ್ಟಿಯಿಂದ ಮಾಡಬೇಕೆಂಬ ತತ್ತ್ವವನ್ನು, ಬಹು ಪುರಾತನವಾದ, ನಷ್ಟವಾಗಿದ್ದ ಈ ಕರ್ಮಯೋಗವನ್ನು ಪರಂಪರೆಯಾಗಿ ಸೂರ್ಯನಿಂದ ಬಂದುದನ್ನು, ರಾಜರ್ಷಿಗಳಾದ ಸೂರ್ಯವಂಶ ಚಕ್ರವರ್ತಿಗಳು ಅನುಷ್ಠಿಸುತ್ತಿದ್ದ ಈ ರಹಸ್ಯವೂ ಉತ್ತಮಕಾರಣವೂ ಆದ ಯೋಗವನ್ನು ನನ್ನ ಭಕ್ತನೂ ಸಖನೂ ಆದ ನಿನಗೆ ಹೇಳಿದ್ದೇನೆ" ಎಂದನು ಪರಮಾತ್ಮ. ಕರಾರುವಾಕು ನಿತ್ಯಕರ್ಮವನ್ನು ತಪ್ಪದೆ ಸೃಷ್ಟಿಯಾದಿಯಿಂದ ನಡಸುತ್ತಿರುವ ಸೂರ್ಯನಾದಿ, ಪರಮಾತ್ಮನ ಉಪದೇಶದಿಂದ ಪಡೆದ ಈ ಕರ್ಮ ರಹಸ್ಯವನ್ನು ಉಪದೇಶಿಸಲು ಸೂರ್ಯನಿಗಲ್ಲದೆ ಇನ್ನಾರಿಗೆ ಉಂಟು ಹಕ್ಕು! ಕರ್ಮರಹಸ್ಯ ತಿಳಿದ ಸೂರ್ಯನ ತೊಡಕು ಸಮಸ್ಯೆಯಾದರೂ ನೋಡಿ: ರಥಕ್ಕಾದರೋ ಒಂದೇ ಚಕ್ರ; ಪಥವಾದರೋ ದಿಕ್ಕುದಿವಾಣವಿಲ್ಲದ ನಿರ್ವಾಣ, ಆಕಾಶ ಮಾರ್ಗ; ಕುದುರೆಗಳಾದರೋ ಏಳು; ಸಿಕ್ಕಿದೆಡೆಗೆಳೆಯದಂತೆ ಅವನ್ನು ಕಟ್ಟಿರುವ ಲಗಾಮಾದರೋ ಹಾವು; ಸಾರಥಿಯಾದರೋ ಸಾಮರ್ಥ್ಯದಿಂದ ತಡೆದಾನೆಂದರೆ, ಕಾಲಿಲ್ಲದವ; ಆದರೂ ಈ ಉಪಕರಣಗಳ ತೊಂದರೆಗಳನ್ನೆಲ್ಲ ಜಯಿಸಿ ಸೂರ್ಯನು ದಿನದಿನವೂ ಕರಾರುವಾಕು ತನ್ನ ಪಥವನ್ನು ಎಷ್ಟು ನಿಯಮದಿಂದ ಚರಿಸುವನು! ಎಷ್ಟು ಉಪಕಾರ ಮಾಡುವನು! ಚಾ ಚು ತಪ್ಪದೆ ಸರ್ವ

ಜೀವಿಗಳಿಗೂ, ಸೂರ್ಯಮಂಡಲ ಸರ್ವಕ್ಕೂ ಎಂತು, ಅದರಲ್ಲೂ ಪೃಥ್ವಿಗೆ ಸಹಾಯಕನು! ಪರಮಾತ್ಮನ ಕರ್ಮಸಂಕಲ್ಪ ತಿಳಿದು, ಆ ರಹಸ್ಯ ತಿಳಿದ ಸೂರ್ಯನೇ ಕರ್ಮಮರ್ಮವನ್ನು ಉಪದೇಶಪಡೆದು ಪರಂಪರೆಯಾಗಿ ಉಪದೇಶಿಸಿರುವನಲ್ಲದೆ, ಕಾರ್ಯತಃ ಕಾರ್ಯವಾವ ರೀತಿ ಮಾಡಬೇಕೆಂದು ತೋರಿಸುತ್ತಿರುವನು ದಿನವೂ.

ಆದರ್ಶ ಕರ್ಮಯೋಗಿ ಸೂರ್ಯಭಗವಾನ್, ಸಕಲ ಸೃಷ್ಟಿಕಲ್ಯಾಣಕ್ಕಾಗಿ ಚಾಚು ತಪ್ಪದೆ ಪ್ರತಿನಿತ್ಯವೂ ಫಲಾಪೇಕ್ಷೆಯಿಲ್ಲದೆ ಕಾಲಕ್ಕೆ ಸರಿಯಾಗಿ ಯಾವಾಗಲೂ ತನ್ನ ಕರ್ಮವನ್ನೆಸಗುತ್ತಿರುವನು. ಅವನ ವಂಶಿಕರಾದ ರಾಜರು ಈ ಕರ್ಮಮರ್ಮವನ್ನರಿತು ಆಚರಿಸುತ್ತಿದ್ದರು. ಅದನ್ನೆ "ಭಕ್ತನೂ ಮಿತ್ರನೂ" ಆದ ಅರ್ಜುನನಿಗೆ ಈಗ ಪರಮಾತ್ಮ ಉಪದೇಶಿಸುತ್ತಿರುವುದು. ಭಕ್ತನಲ್ಲಿ "ಸಖ್ಯ"ವೊಂದು ನಿಕಟಸಂಬಂಧ ಸಲಿಗೆ ಮತ್ತು ವಿಶ್ವಾಸವನ್ನು ಕಲ್ಪಿಸುವ ಮಿತ್ರಪ್ರೀತಿ. ಈ ಭಕ್ತಿಯಲ್ಲಿ ಸ್ನೇಹದಲ್ಲಿ ಕಡಮೆ ಹೆಚ್ಚಿಲ್ಲದ ಪಾತ್ರಗಳಲ್ಲಿ ಏನು ಬೇಕಾದರೂ ಮುಚ್ಚುಮರೆಯಿಲ್ಲದೆ ಹೇಳಬಹುದು. ಸ್ನೇಹಿತನ ಹಿತವಚನಗಳು ಹಿಡಿಯುತ್ತವೆ, ಆಪ್ತವಾಗುತ್ತವೆ. ಸ್ನೇಹಭಾವದಿಂದ ಹೇಳುವ ಉಪದೇಶದಲ್ಲಿ ಬಲೋದ್ಬಂಧವಿಲ್ಲ, ಸರಳತೆಯುಂಟು. ಕೊನೆಗೆ ಶ್ರೀಕೃಷ್ಣನೇ ಹೇಳಿರುವಂತೆ "ಹೇಳುವುದೆಲ್ಲ ಹೇಳಿದ್ದೇನೆ, ಇಷ್ಟವಿದ್ದರೆ ಸ್ವೀಕರಿಸು. ಇಲ್ಲವಾದರೆ ಬಿಡು" ಎನ್ನುವ ಭಾವ ಉಂಟು. ಸ್ನೇಹಿತನ ಆಪ್ತವಚನಗಳಲ್ಲಿ ಪಥ್ಯವುಂಟು. ಸ್ನೇಹಭಾವದಿಂದ ಆಡಿದ ಮಾತಿನಲ್ಲಿ ಇನ್ನಾವ ಅರ್ಥವನ್ನೂ ಇಡದೆ ನಮ್ಮ ಹಿತವನ್ನೇ ಭಾವಿಸುವೆವು.

ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥

ಆ ಸ್ನೇಹಸಲಿಗೆಯಿಂದಲೇ ಕೇಳುತ್ತಾನೆ ಅರ್ಜುನ, ತನ್ನ ಸಂಶಯದ ಪರಿಹಾರವನ್ನು: "ನೀನು ಈಗ ಹುಟ್ಟಿದೆ. ಸೂರ್ಯ ಪರಂ ಜನ್ಮ—ಆದಿ ಇಲ್ಲದವನು. ನೀನು ಅವನಿಗೆ ಹೇಗೆ ಹೇಳಿದೆ? ತಿಳಿವ ಬಗೆ?" ಇದೇ ಇರಬೇಕು ಅರ್ಜುನನ ಮನಸ್ಸಿನಲ್ಲಿ—ಮುಂದೆ ಕ್ಷಮೆಬೇಡುವಾಗ ಹೀಗೆ ಪರಿಹಾಸ್ಯದಿಂದ ಸ್ನೇಹಸಲಿಗೆಯಲ್ಲಿ "ಬಿಡೋ, ನೀ ನನ್ನ ಜೊತೆಯವನು, ಕಣ್ಮುಂದಿನವನು, ಏನು ಬೊಗಳೆ ಬಿಡುತ್ತಿ?" ಎಂದು ಕೇಳಿದ ಅಪರಾಧಕ್ಕಾಗಿ, ಧ್ಯಾನಪರವಶನಾಗಿ, ವಿಶ್ವರೂಪ ದರ್ಶನವನ್ನು ತೋರಿದ ಸ್ವಾಮಿಯ ಅಗಾಧ ಮಹಿಮೆಯನ್ನು ದಿವ್ಯ ಚಕ್ಷುಸ್ಸಿ

ನಿಂದ ನೋಡಿ ಸ್ತೋತ್ರಮಾಡುತ್ತ, ನಮಸ್ಕಾರವನ್ನು ದಶದಿಕ್ಕುಗಳಲ್ಲೂ ಸಲ್ಲಿಸುತ್ತ "ಸಖೇತಿ ಮತ್ವಾಪ್ರಸಭಂ ಯದುಕ್ತಂ . . . " (೧೧ ಅ ೪೧-೪೨ ಶ್ಲೋ.) ಎಂದು ಕ್ಷಮಾಭಿಕ್ಷೆ ಬೇಡಿರಬೇಕು. ಆ ಸರಳತೆ ಸ್ವಭಾವವಾಗಿ ಬಿಟ್ಟಿತು. ಈ ಅವಹೇಳನದ ಅನುಮಾನ ಸ್ನೇಹಿತನು ಹೊರಗೆಡಹಿದುದು, ಪರಮಾತ್ಮನನ್ನು ಚುಚ್ಚಿ ಎಬ್ಬಿಸಿ ತನ್ನ ಸ್ವಪ್ರತಿಷ್ಠೆಯನ್ನು ಮರೆಯಿಲ್ಲದೆ ಬಿಚ್ಚಿ ಹೇಳಿಕೊಂಡು ಜ್ಞಾನಕಾಂಡಕ್ಕೆ ಪೀಠಿಕೆಯಾಯ್ತು. (ಅ ೪. ಶ್ಲೋ ೨) "ನ ತ್ವಂ ವೇತ್ಥ ಪರಂತಪ" ನಾನು ಬಲ್ಲೆ. ಇದೇ ಜ್ಞಾನಕಾಂಡ, ತನ್ನನ್ನು ತಾನು ತಿಳಿದಿರುವುದೇ ಆತ್ಮದರ್ಶನ. ಇದು ರಾಮಾಯಣದ "ಅಹಂ ವೆದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ . . . ." ಎಂದು ವಿಶ್ವಾಮಿತ್ರರು, ಶ್ರೀರಾಮರ ತಂದೆಗೆ ಹೇಳುವ ಶ್ಲೋಕ ಜ್ಞಾಪಕ ತರುತ್ತದೆ. ಆತ್ಮಶಕ್ತಿಯನ್ನು ತಿಳಿದ ಋಷಿಗಳು ಧೈರ್ಯದಿಂದ ತಂದೆಗೆ ಹೇಳುತ್ತಾರೆ: "ನಿನ್ನ ಮಗನ ಸತ್ತ್ವ ನಿನಗೇ ಗೊತ್ತಿಲ್ಲ. ಈ ಎಂಟು ವರ್ಷದ ಬಾಲಕ ಕೈಲಾಗದವ ನೆಂದು ತಿಳಿದಿದ್ದೀಯೆ" ಎಂದು. "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಅಂತೇ ಎದುರು ಕಾಣುವ ಪರಮಾತ್ಮ ಕೃಷ್ಣಮೂರ್ತಿ ಎಷ್ಟೋ ದಿನದಿಂದ ಜೊತೆಗಾರನಾಗಿ ಎದುರು ನಲಿಯುತ್ತಿದ್ದರೂ ಅವನ "ಸತ್ಯಪರಾಕ್ರಮ" ಇನ್ನೂ ಅರ್ಜುನನಿಗೆ ಅರಿವಾಗಿಲ್ಲ. ರಾಮಾವತಾರದಲ್ಲಾದರೋ, ರಾಮನು ನರನಾಗಿಯೇ ಬಾಳಿದ. ಪರಮಾತ್ಮನೇ ಲೀಲೆಯಿಂದ ಅವತರಿಸಿದರೂ ನರನ ಕಷ್ಟಸುಖಗಳಲ್ಲಿ ಮಾನವಧರ್ಮದಿಂದಲೇ ಅದಕ್ಕೆ ಕಟ್ಟುಬಿದ್ದು, ಸತ್ಯದಿಂದಲೇ ಎಂತು ಜೀವನದಲ್ಲಿ ವರ್ತಿಸಿ ಎಂತಹ ಕಷ್ಟಗಳನ್ನಾದರೂ ಎದುರಿಸಬಹುದೆಂದು ತೋರಿಸಲು, ಅಮಾನುಷಲೀಲೆಗಳೇ ಇಲ್ಲದೆ ಮನುಷ್ಯ ಶಕ್ತಿ ಪ್ರತಿಭೆಗಳಲ್ಲೇ ಸಿಕ್ಕಿ ಒದ್ದಾಡಿದ ಮಾನವ ಪ್ರಾಣಿಯಂತೆ ಪರಮಾತ್ಮ ತಾನೂ ಒದ್ದಾಡಿದ. ಎಲ್ಲಿಯವರೆಗೆಂದರೆ "ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯ ಪರಾಕ್ರಮಂ" ಎನ್ನುವುದು ಶ್ರೀರಾಮನಿಗೇ ವೇದ್ಯವಾಗಿತ್ತೋ ಇಲ್ಲವೋ ಎನ್ನುವ ವರೆಗೆ. ಆತನ ಕಷ್ಟ, ಸಂತಾಪ, ಪ್ರಲಾಪಗಳನ್ನು ರಾಮಾಯಣದಲ್ಲಿ ಓದಿದವರಿಗೆ, ಎಷ್ಟು ಕಷ್ಟ ಇಹತಾಪತ್ರಯಪಡುತ್ತಾನೆ ಪರಮಾತ್ಮ ಎಂದು ಕಸಿಕರವೇ ಆಗುವುದು.

ರಾವಣ ವಧೆಯಾಗಿ, ಸೀತಾತ್ಯಾಗಮಾಡಿದಾಗ ಆ ಮಹಾಲಕ್ಷ್ಮಿಯು ನಿಷ್ಕಳಂಕಳೆಂದೂ, ಅವಳ ನಿಜಸ್ವರೂಪ ವಿವರಣೆಯಲ್ಲಿ "ಸೀತೆಯೇ ಲಕ್ಷ್ಮಿ,

ನೀನು ಮಹಾವಿಷ್ಣು ಭಗವಾನ್. ನೀನು ರಾವಣವಧೆಗೋಸ್ಕರ ಮಾತ್ರ ಮನುಷ್ಯನಾಗಿದ್ದೀಯಷ್ಟೆ" ಎಂದು ಮಹೇಶ್ವರನು ಶ್ರೀರಾಮರಿಗೆ ಹೇಳಿದಾಗ ಶ್ರೀರಾಮರು "ನಾನು ದಶರಥ ಪುತ್ರ, ಕೇವಲ ಮನುಷ್ಯಮಾತ್ರದವನು, ಎಂದು ನಂಬಿದ್ದೇನೆ. ನನ್ನನ್ನು ಏಕೆ ದೇವದೇವನೆಂದು ಸ್ತುತಿಸುತ್ತೀರಿ? ನನ್ನ ನಿಜ ಸ್ವರೂಪವನ್ನು ನೀನಾದರೂ ಹೇಳು, ಬ್ರಹ್ಮದೇವ" ಎಂದು ನೆರೆದಿದ್ದ ದೇವಗಣ ಗಳ ಮುಂದಾಳುವಾದ ಬ್ರಹ್ಮನನ್ನು ರಾಮನೇ ಕೇಳುವನು.

ರಾವಣವಧೆಗೆ ಪೂರ್ವದಲ್ಲಿಯೂ, ಮನುಷ್ಯಮಾತ್ರದವನಂತೆ, ಮನುಷ್ಯ ಪ್ರಯತ್ನದಿಂದ, ಮಾನುಷಪ್ರಯೋಗಗಳಿಂದ ಮಾತ್ರ, ಆತನನ್ನು ಸಂಹರಿಸುವ ಚಿಂತನೆಯನ್ನೇ ಮಾಡುತ್ತಿರುವಾಗ ಅಗಸ್ತ್ಯಋಷಿಗಳಿಂದಾದ ದಿವ್ಯ "ಆದಿತ್ಯ ಹೃದಯ" ಮಂತ್ರೋಪದೇಶವನ್ನು ತ್ರಿಪಠಣ ಮಾಡಿ, ತ್ರಿಶುದ್ಧಿಗಾಗಿ ಮೂರಾ ವರ್ತಿ ಆಚಮನ ಮಾಡಿ, ವೀರನಾಗಿ, ಏಕಚಿತ್ತದಿಂದ ಶ್ರೀ ಸೂರ್ಯದೇವಪ್ರಸಾದ ದಿಂದಲೇ, ಮಾನವಧರ್ಮದಿಂದಲೇ ರಾವಣಸಂಹಾರವನ್ನು ಮಾಡುವನು. ಆದುದರಿಂದಲೇ ಶ್ರೀರಾಮರ "ಉತ್ತರರಾಮಚರಿತ"ವನ್ನು ಬರೆದ ಭವಭೂತಿಯು "ಮಹಾವೀರಚರಿತ" ವೆಂಬ ಚರಿತ್ರೆಯನ್ನು ಬರೆದಿದ್ದನ್ನು, "ಈ ಚರಿತ್ರಾರ್ಹ ಪುರುಷನಾದ ಮಹಾವೀರನಾರು?" ಎಂದು ಕೇಳಲು, "ಶ್ರೀರಾಮರಲ್ಲದೆ, ಶ್ರೀ ರಾಮರ ಮುಂದೆ ಇನ್ನಾರು ಮಹಾವೀರರಿದ್ದಾರೆ? ಶ್ರೀ ರಾಮರೇ ಏಕೈಕ ಮಹಾವೀರ. ಅದೇ ಮಹಾವೀರಚರಿತ, ಶ್ರೀರಾಮಚರಿತ" ಎಂದು; ಎಲ್ಲಾ ಮಹಾಕಾವ್ಯಗಳಿಗೂ, ಕವಿ ಪ್ರತಿಭೆಗಳಿಗೂ ಉಗಮಸ್ಥಾನವಾದ, ಶಾಂತಿ ಸ್ಥಾನವಾದ, ಪರಮಾವಧಿಸ್ಥಾನವಾದ ರಾಮನಾಮಸ್ತುತಿಯನ್ನು ಪ್ರಶಂಸಿಸಿದ ನಂತೆ. ಶ್ರೀ ಕಾಳಿದಾಸ ಮಹಾಕವಿ ಕೂಡ ತನ್ನ "ರಘುವಂಶ" ಕಾವ್ಯ ಶ್ಲಾಘನೆಯನ್ನೊಪ್ಪಿಕೊಳ್ಳದೆ, "ನನ್ನ ನಾಟಕಕಾವ್ಯಪ್ರತಿಭೆ, ಶ್ರೀರಾಮ ಪ್ರಸಂಗಗಳನ್ನೇಕೆ ಸ್ತುತಿಸುತ್ತೀರಿ? ಭವಭೂತಿ ಕವಿಶ್ರೇಷ್ಠನು ಉತ್ತರರಾಮ ಚರಿತ್ರೆಯಲ್ಲಿ ನನಗಿಂತ ಮುಂದೆ ಹೋಗಿಬಿಟ್ಟಿದ್ದಾನೆ. ದಿವ್ಯವಾಗಿ ಶ್ರೀರಾಮ ಗುಣಕಥನಗಾನಮಾಡಿದ್ದಾನೆ" ಎಂದು ಮೆಚ್ಚಿ ಒಪ್ಪಿಕೊಂಡನಂತೆ. ಅಂಥಾ ಶ್ರೀರಾಮರು ಕೂಡ ತಾನು ದೇವದೇವನೆಂಬರಿವಿಲ್ಲದವನಾದ. ಇದು ಮಾನವ ನಾಗಿಯೇ ಎಷ್ಟು ಸತ್ಯಧರ್ಮಪರಾಕ್ರಮವನ್ನು ಸಾಧಿಸಬಹುದೆಂದು ತೋರಲಿರ ಬಹುದು. ಇನ್ನು ಮಾನವನಿಗಿಂತ ಕೆಳದರ್ಜೆಯವರಲ್ಲಿ ಕೂಡ ಸಹಾನುಭೂತಿ

ಯಿಂದ ಮಿಲನವಾಗಿ, ಎಲ್ಲರಲ್ಲಿಯೂ ಕನಿಕರದಿಂದ ತನ್ನ ಸರ್ವಾಂತರ್ಯಾಮಿತ್ವ ವನ್ನು ತೋರಿದ. ಅಂತೇ ಜೀವಿಸಿದ ಕಷ್ಟದಲ್ಲಿ, ಅಂತೇ ಕೊನೆಗೊಂಡ ಕಷ್ಟದಲ್ಲಿ. ಆದರೆ ಶ್ರೀಕೃಷ್ಣಾವತಾರದಲ್ಲಾದರೋ ಪರಮಾತ್ಮ ಆ ರಾಮಾವತಾರದಲ್ಲಿ ಪಟ್ಟ ಕಷ್ಟಗಳಿಗೆ ಈ ಕೃಷ್ಣಾವತಾರದಲ್ಲಿ ಪರಿಹಾರಪಡೆಯಲೋ ಎಂಬಂತೆ, ತಾನು ದೇವಾವತಾರವೆಂಬುದನ್ನೂ ಸ್ವಯಂ ದೇವನೆಂಬುದನ್ನೂ ಮಗುವಾಗಿ ದ್ದಾಗಿನಿಂದಲೂ ಮರೆಯಲಿಲ್ಲ. "ಆ" ಎಂದು ಬಾಯಿಬಿಟ್ಟು ಅತ್ತಾಗಲೇ ಮೂಲೋಕವನ್ನೂ ತನ್ನ ಬಾಯಲ್ಲಿ ತನ್ನ ತಾಯಿಗೆ ತೋರಿಸಿದ. ಅಷ್ಟೇಕೆ, ಹುಟ್ಟಿದೊಡನೆ ಕಂಸನು ಕತ್ತಿಯಿಂದ ಛೇದಿಸಲು ಮಗುವನ್ನರಸುವ ಮೊದಲೇ ತಾನು ಬೇರೆ ದತ್ತು ತಂದೆತಾಯಿಯರ ಮನೆಗೆ ಹೋಗುವ ಮೊದಲೇ ಕಾರಾ ಗೃಹದಲ್ಲೇ ಚತುರ್ಬಾಹು, ಶಂಖ ಚಕ್ರ ಗದಾ ಭೂಷಣನಾಗಿ, ಪೀತಾಂಬರ ಧಾರಿಯಾಗಿ ತನ್ನ ದೇವತ್ವವನ್ನು ನಿಜ ತಂದೆತಾಯಿಯರಿಗೆ ತೋರಿದ. ಕೃಷ್ಣಾವ ತಾರ ಪೂರ್ತ ತಾನು ದೇವದೇವನೆಂಬುದು ಮರೆತಂತೆಯೇ ಕಾಣೆ ಸ್ವಾಮಿ. ರಾಮಾವತಾರದ ಕಷ್ಟ, ಪ್ರಲಾಪಗಳೆಲ್ಲಿ? ಕೃಷ್ಣಾವತಾರದ ಲೀಲೆ ಸಂತೋಷ ಗಳೆಲ್ಲಿ? ಏಕಪತ್ನೀವ್ರತಸ್ಥನಾಗಿ, ಪಿತೃವಾಕ್ಯ ಪರಿಪಾಲನೆಗಾಗಿ ಘೋರಾರಣ್ಯ ವಾಸವೆಲ್ಲಿ? ಗೋಪೀವೃಂದದಲ್ಲಿ ರಾಸಕ್ರೀಡೆಯಾಡುತ್ತ ಬೃಂದಾವನದ ನಲಿ ವೆಲ್ಲಿ? ತನ್ನ ಮಹತ್ತ್ವವನ್ನು ತಾನು ಮರೆಯದೆ ದೇವಲೀಲೆಯಲ್ಲಿ ದೇವಸುಖ ಸಂಪತ್ತನ್ನು ಅನುಭವಿಸಿಯೇಬಿಟ್ಟ. ಇಹದಲ್ಲಿ ಮಾನವನಾಗಿ ಅವತರಿಸಿಯೂ, ಸ್ವಾಮಿ, ಕೃಷ್ಣಾವತಾರದಲ್ಲಿ ತಾನು ದೇವದೇವನೆಂಬ ಎಚ್ಚರವನ್ನು ಕ್ಷಣವೂ ಬಿಟ್ಟಂತೆ ಕಾಣೆ ಶ್ರೀಕೃಷ್ಣ ಸ್ವಾಮಿ.

> ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
> ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥
>
> ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
> ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥

ಬಿಚ್ಚಿ ತನ್ನ ಪ್ರತಿಭೆಯನ್ನು ತತ್‌ಕ್ಷಣವೇ ಹೇಳುತ್ತಾನೆ: "ನಾನು ಜನ್ಮರಹಿ ತನು, ಅವ್ಯಯನು, ಸಮಸ್ತ ಪ್ರಾಣಿಗಳಿಗೆ ನಿಯಾಮಕನು, ಪ್ರಕೃತಿ ಸ್ವಾಮಿಯು, ಅಚಿಂತ್ಯೈಶ್ವರ್ಯ ಸ್ವಯಂಮಾಯೆಯಿಂದಲೇ ಜನ್ಮಹೊಂದುವವನು" ಎಂದು ವಾಕ್ಚಿತ್ರದಿಂದಲೇ ವಿಶ್ವರೂಪದರ್ಶನವನ್ನು ಕೊಟ್ಟ ಮಹಾಸ್ವಾಮಿಯನ್ನು

ಕಾಣಲು, ಅರ್ಜುನನಿಗೆ ಆಗ್ಯೆ ಇನ್ನೂ ದಿವ್ಯಚಕ್ಷುಸ್ಸು ದಯಪಾಲಿಸಿರ ಲಿಲ್ಲ ಸ್ವಾಮಿ.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥೭॥

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥

ಈ ಜನ್ಮವನ್ನು ಹೊಂದುವ ಲೀಲಾನಾಟಕವಾದರೂ ಏತಕ್ಕೆ? ಯಾವ ಯಾವಾಗ ಧರ್ಮಕ್ಷಯೆ ಉಂಟಾಗುವುದೋ ಮತ್ತು ಅಧರ್ಮವು ವೃದ್ಧಿಯಾಗು ತ್ತೆಯೋ ಆಗ "ತದಾ ಆತ್ಮಾನಂ ಸೃಜಾಮ್ಯಹಂ" ತಾನೇ ತಾನಾಗಿ ಸೃಷ್ಟಿ ಯಾಗಿ ಸಾಧುಗಳ ರಕ್ಷಣೆಗೂ ದುಷ್ಟರ ವಿನಾಶಕ್ಕಾಗಿಯೂ ಯುಗಯುಗದಲ್ಲಿ ಅವತಾರ ಮಾಡುತ್ತೇನೆ ಎಂದು ಅಭಯಹಸ್ತವನ್ನಿತ್ತಿದ್ದಾನೆ ಮಹಾಸ್ವಾಮಿ. "ಸಂಹಾರಾರ್ಥಂ ಚ ಶತ್ರೂಣಾಂ ರಕ್ಷಣಾಯ ಚ ಸಂಸ್ಥಿತಃ ಕೃಪಾರ್ಥೇ ಸರ್ವ ಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಂ" ಎಂದು ಕೃಷ್ಣೋಪನಿಷತ್ತಿನಲ್ಲಿ ಅವತಾರಧರ್ಮಮರ್ಮವನ್ನು ಪರಮಾತ್ಮನು ಹೇಳಿದ್ದಾನೆ. ಈ ಅಭಯಹಸ್ತ ಯಾವಾಗಲೂ ಇದ್ದೇ ಇದೆ. "ಯೋಗಕ್ಷೇಮಂ ವಹಾಮ್ಯಹಂ" "ಮದ್ಭಕ್ತಾ ಯಾಂತಿ ಮಾಮಪಿ" "ನ ಮೇ ಭಕ್ತಃ ಪ್ರಣಶ್ಯತಿ" "ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಂ" "ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರ ಸಾಗರಾತ್" "ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯ ಯಮ್" ಇವೇ ಮೊಲಾದ ಅಭಯಹಸ್ತದ ಆಸರೆಗಳು ಸರ್ವದಾ ಇದ್ದರೂ, ವಿಪರೀತ ಕಾಲವಾಗಿ, ವಿಪರೀತ ಪರೀಕ್ಷಾಸಮಯ ಬಂದಾಗ, ಧರ್ಮವು ತಾನೇ ನಿಲ್ಲದಾಗ, ಧರ್ಮಾವತಾರ. ಸಾಮಾನ್ಯವಾಗಿ ಒಂದು ಅನ್ಯಾಯವು ನಮ್ಮೆದುರು ನಡೆಯುತ್ತಿದ್ದಾಗ—ಒಂದು ಮಗುವನ್ನು ಒಬ್ಬನು ಹೊಡೆಯುತ್ತಲೋ, ಒಬ್ಬ ಹೆಂಗಸಿಗೆ ಅವಮಾನ ಮಾಡುತ್ತಲೋ, ಒಂದು ಮೂಕಪ್ರಾಣಿಯನ್ನು ಹಿಂಸಿಸು ತ್ತಲೋ, ಒಂದು ನಿಸ್ಸಹಾಯಕ ಪ್ರಾಣಿಯು ಕಷ್ಟಕ್ಕೆ ಸಿಕ್ಕಿಯೋ ಇರುವ ದೃಶ್ಯ ಕಣ್ಣಿಗೆ ಬಿದ್ದರೆ ಯಃಕಶ್ಚಿತ್ ನಾವುಗಳೇ ಅನ್ಯಾಯವನ್ನು ತಡೆಗಟ್ಟಲು ಸಹಾಯ ಹೋಗುವಾಗ, ಈ ಪರಮದಯಾಳು, ಕರುಣಾಕರ ಮೂರ್ತಿ, ಆರ್ತ ರಕ್ಷಕ, ಧರ್ಮಸ್ವರೂಪನು, ದುಷ್ಕೃತ್ಯವು ಹೆಚ್ಚಿ ಸಜ್ಜನರು ಕಷ್ಟಪಡುತ್ತಿರುವಾಗ

ಸುಮ್ಮನೆ ಎಂತಿದ್ದಾನು? ಆಗ ಈ ಕಪಟನಾಟಕಸೂತ್ರಧಾರಿ ಕಟ್ಟಿದ ನಾಟಕ ದಲ್ಲಿ ಇಚ್ಛಾಮಾತ್ರದಿಂದ ಏನನ್ನು ಬೇಕಾದರೂ ಅನುಗ್ರಹಿಸಬಲ್ಲ ಸ್ವಾಮಿ. ಲೀಲಾನಾಟಕವಲ್ಲಿ ಆಗಿಂದಾಗ್ಯೆ ಮನುಷ್ಯರಿಗೆ ತನ್ನ ಮಹಿಮೆಯನ್ನು ತೋರಿ, ಧರ್ಮಸಂಸ್ಥಾಪನೆಮಾಡಲು ಸ್ವತಃ ನಿಲ್ಲುವನು.

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥೯॥

ಆ ಧರ್ಮಾವತಾರವಾಗುವ ಯುಗ, ದೇಶ, ಪ್ರಜಾವರ್ಗವೇ ಧನ್ಯರು. ಅದರಲ್ಲಿ ಯಾರು ಆ ದಿವ್ಯವಾದ ಜನ್ಮವನ್ನೂ ಧರ್ಮಸಂಸ್ಥಾಪನಾದಿರೂಪಕರ್ಮವನ್ನೂ ಯಥಾರ್ಥವಾಗಿ ತಿಳಿಯುವರೋ ಅವರು ದೇಹವನ್ನು ಬಿಟ್ಟು ಪುನರ್ಜನ್ಮ ವಿಲ್ಲದೆ ಪರಮಾತ್ಮನನ್ನೇ ಸೇರುವರು.

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥

ರಾಗ, ಭಯ, ಕ್ರೋಧರಹಿತರಾಗಿ, ಆತನಲ್ಲಿಯೇ ಚಿತ್ತ ಉಳ್ಳವರಾಗಿ, ಆತನನ್ನೇ ಆಶ್ರಯಿಸಿಕೊಂಡು ಜ್ಞಾನವೆಂಬ ತಪಸ್ಸಿನಿಂದ ನಿಷ್ಪಾಪರರಾಗಿ ಆತನ ಸ್ವರೂಪ ವನ್ನೇ ಹೊಂದುವರು.

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।
ಮಮ ವರ್ತ್ಮಾಽನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥

ಯಾರು ಯಾರು ಯಾವ ಯಾವ ಪ್ರಕಾರ ಭಜಿಸುವರೋ ಆಯಾ ಇಷ್ಟಾರ್ಥ ಪ್ರದಾನದಿಂದ ಅದೇ ರೀತಿ ಅನುಗ್ರಹಿಸುತ್ತಾನೆ ಪರಮಾತ್ಮ. ಮನುಷ್ಯರು ಸರ್ವ ವಿಧದಲ್ಲೂ ಆತನ ಮಾರ್ಗವನ್ನೇ ಅನುಸರಿಸುತ್ತಾರೆ. ಇದೇ ಈ ಅವ ತಾರಗಳ ಫಲ. ಬಾಯಿವೇದಾಂತದಿಂದ ಪುರಾಣದ ಬದನೆಕಾಯಿ ನಿಷಿದ್ಧ ದಂತೆ ಯಾರಿಗೂ ಏನೂ ಆಸಕ್ತಿ ಬರಲಾರದು. ಒಳ್ಳೆ ಕೊಬ್ಬಿ ಗುಂಡಾಗಿ ಬೆಳೆದ ಬದನೆಕಾಯಿಗೆ "ಉಡುಪಿಗುಳ್ಳ" ಎಂಬ ನಾಮವಿಟ್ಟು, ಶ್ರೇಷ್ಠತೆಯನ್ನು ಕಲ್ಪಿಸಿ, ನಿಷಿದ್ಧ ಬದನೆಕಾಯಿಯನ್ನು ಸೇವಿಸಲು ಪ್ರಯತ್ನಿಸುತ್ತಾರೆ. ಅದೇ ಅಷ್ಟಯತಿಗಳಿಗೆ ಶ್ರೇಷ್ಠವಾದಾಗ ಇತರ ಭಕ್ತರೂ "ಗುಳ್ಳ"ದ ಮೊಸರುಬಜ್ಜಿ ಭೋಗಿಸಲೂ ಅವಕಾಶವಾಗುತ್ತೆ. ಹಲ್ಲಿಲ್ಲದ ಗತವಯಸ್ಸಾದ ಮುದುಕರಿಗೂ ಚಪಲ ತೃಪ್ತಿಪಡಿಸಲು ಅವಕಾಶವಾಯ್ತು. ಆಡಿ ಹೇಳುವದಕ್ಕಿಂತಲೂ ಮಾಡಿ

ತೋರಿಸುವುದು ಒಳ್ಳೆಯದು. ಮಕ್ಕಳೇ ಅಲ್ಲ, ನಾವು ಮನುಷ್ಯರೆಲ್ಲರೂ ಕಪಿಗಳಂತೆ, ಮಾಡುವವರನ್ನು ನೋಡಿ, ಅಣಕಿಸುತ್ತ ಕಲಿಯುತ್ತೇವೆ. ದೃಷ್ಟಿಯಿಂದ ಕಲಿವ ಪಾಠ (Visual Education) ಸುಲಭ. ಕಣ್ಣೆದುರಿಗೆ ಕಟ್ಟಿದಂತೆ ಮೇಲ್ಪಂಕ್ತಿಯಾಗಿ ಮಹಾನುಭಾವ ನಮ್ಮ ತಂದೆಯೇ ಧರೆಗಿಳಿದು ಧರ್ಮಪಾಲನೆಗಾಗಿ ನಿಷ್ಕಾಮಕರ್ಮವನ್ನು ಮಾಡಿ ತೋರಿಸುತ್ತಿರುವಾಗ ಎಷ್ಟೋ ಜನಕ್ಕೆ ಒಳ್ಳೆಯ ನಡತೆ ಬಂದು ಸನ್ಮಾರ್ಗವರ್ತಿಗಳಾಗಲು ಅವಕಾಶವಾಗುತ್ತೆ. ಎಲ್ಲಕ್ಕಿಂತಲೂ ಸಂಗದ ಪರಿಣಾಮ ಹೆಚ್ಚು. "ಸರ್ವಸಮತ್ವಂ, ಸರ್ವಹಿತತ್ವಂ, ಸತ್ಸಂಗತ್ವಂ, ದೇಹಿ ವಿಭೋ ಮೇ" ಎಂದು ಒಬ್ಬ ಭಕ್ತ ಸರ್ವಸಮತ್ವ, ಹಿತತ್ವಗಳನ್ನು ಯಾಚಿಸಿ, ಎಲ್ಲಕ್ಕೂ ಮೇಲಾಗಿ ಸತ್‌ಸಂಗವನ್ನು ಕೊನೆಯದಾಗಿ ಕೋರಿದನು. ಆ ಸತ್ತೇ ಘನೀಭೂತವಾಗಿ, ಅವತಾರವಾಗಿ, ಧರೆಗಿಳಿದಿರುವಾಗ ಇಂತಹ ಸತ್ಸಂಗ, ಎಷ್ಟು ಜನಕ್ಕೆ ದೊರೆಯುತ್ತೆ? ಆತನ ಸನ್ನಿಧಿಯೇ ಸಾಲದೆ! ನಿರ್ಗುಣಬ್ರಹ್ಮನು ಸಗುಣನಾಗಿರುವನು!

> ನ ತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ ।
> ತಥಾಪಿ ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ ॥
>
> ಜಿತಂತೇಸ್ತೋತ್ರ. ಪ್ರ. ಭಾ. ೫.

ರೂಪಾಕಾರಗಳಿಲ್ಲದ ಪರಮಾತ್ಮನಾದರೂ ಭಕ್ತರಿಗಾಗಿ ಪುರುಷಾಕಾರವಾಗಿ, ಅವತಾರಗಳಲ್ಲಿ ತಾನೇ ಪ್ರಕಾಶಿಸುವನು.

> ಆಕಾರರೂಪಗುಣಯೋಗವಿವರ್ಜಿತೋಽಪಿ ।
> ಭಕ್ತಾನುಕಂಪನನಿಮಿತ್ತ ಗೃಹೀತಮೂರ್ತಿಃ ॥
> ಯಃ ಸರ್ವಗೋಪಿ ಕೃತ ಶೇಷ ಶರೀರ ಶಯ್ಯೋ ।
> ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧೋ ॥
>
> —ಶ್ರೀ ಬ್ರಹ್ಮಾನಂದರ ಶ್ರೀ ದೀನಬಂಧ್ವಷ್ಟಕ. ೬.

ದೀನಬಂಧುವು ಆಕಾರ, ರೂಪ, ಗುಣಯೋಗ ವಿವರ್ಜಿತನಾದರೂ, ಭಕ್ತನ ಮೇಲಿನ ಕರುಣೆ, ಅನುಕಂಪನದಿಂದ ತನ್ನಿಮಿತ್ತವಾಗಿ ಮೂರ್ತಿರೂಪವಾಗಿ, ಗೋಪೀಕೃತಶೇಷಶರೀರಶಯ್ಯೆಯಲ್ಲಿ ಭಕ್ತರಿಗಾಗಿ ದೃಗ್ಗೋಚರನಾಗುತ್ತಾನೆ. ಕಣ್ಣಿಗೆ ಕಾಣುವ ಅವತಾರ ತಾಳುತ್ತಾನೆ. ಮೇಘದಲ್ಲಿ ಆವಿರೂಪವಾಗಿರುವ, ಬಿದ್ದು ಹರಿಯುವ ನೀರು ಘನೀಭೂತವಾಗಿ ಮಂಜುಗಡ್ಡೆಯಾದಂತೆ, ಹರಿಯುವ

ಪ್ರವಾಹ ಭವಭಯದಲ್ಲಿ ಹರಿಯೇ ಆಸರೆಯಾಗಿ ಗಟ್ಟಿಯಾಗಿ ಎಡೆ ಸಿಕ್ಕುವುದು. ಸಂಸಾರಸಾಗರದಲ್ಲಿ ತಪಿಸುತ್ತಿರುವವರಿಗೆ ಆಸರೆಯಾಗಿ ಕಣ್ಣಿಗೆ ಕಾಣುವಂತೆ ಸಚ್ಚಿದಾನಂದ ಸ್ವರೂಪನೇ ಸಾಕ್ಷಾತ್ತಾಗಿ ಅವತರಿಸುವನು. ಇಚ್ಛಾಮಾತ್ರ ದಿಂದ ಲೀಲಾಜಾಲವಾಗಿ ಏನನ್ನು ಬೇಕಾದರೂ ಮಾಡಬಲ್ಲ ಸರ್ವಶಕ್ತನೇ ಸ್ವತಃ ತಾನೇ ಬಂದು ನಿಂತಾಗ ಏನು ತಾನೆ ಮಾಡಲಾರನು? ಇದು ಲೋಕ ಕಲ್ಯಾಣಕ್ಕಾಗಿ ಮಾನವನಿಗೆ ತನ್ನಿರವನ್ನು ಕಣ್ಮುಂದೆ ತೋರಿಸಲಾಗಿ, ತನ್ನಲ್ಲಿ ರುವ ಪರಮಾತ್ಮನನ್ನು ಹೊರಗೆ ನೋಡಲವಕಾಶಕ್ಕಾಗಿ ಈ ಅವತಾರಗಳು. ಮಾನವನೂ ತಾನಿರುವ ಬಂಧನಕಟ್ಟಿನಲ್ಲಿ, ಇಹದ ಇಕ್ಕಟ್ಟಿನಲ್ಲಿ ಎಲ್ಲಿ ಮೀರಿ, ಎಲ್ಲಿಯವರೆಗೆ ದೇವತ್ವಕ್ಕೆ ಏರಬಹುದೆಂದು ತೋರಿಸಲೇ ಈ ಅವತಾರಗಳು. ಇಳಿಯುವುದು ಮೇಲ್ಮಟ್ಟದಿಂದ, ಕೆಳಗಿರುವವರನ್ನು ಮೇಲ್ಮಟ್ಟಕ್ಕೆ ಎಳೆದು ಕೊಳ್ಳಲು, ಅಧೋಗತಿಗೆ ಇಳಿದು ಆಸರೆಯನ್ನು ಕಾಣದವರಿಗೆ ಅಮೃತಹಸ್ತ. "ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ, ಚೋರೈಃ ಪ್ರಭೋ ಬಲಭಿ ರಿಂದ್ರಿಯ ನಾಮಧೇಯ್ಯೈಃ ಮೋಹಾಂಧಕೂಪ ಕುಹರೇ ವಿನಿಪಾತಿತಸ್ಯ ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ" ಎಂಬ ಶಂಕರರ ಸ್ತುತಿಯಂತೆ ಮೋಹಾನ್ಧಕಾರದ ಕೂಪದಲ್ಲಿ ಬಿದ್ದು, ಗತಿ ಇಲ್ಲದೆ ಒದ್ದಾಡುತ್ತಿರುವ ಕುರುಡ ಹೃದವಿವೇಕಿಗಳಿಗೆ ಅವಲಂಬನಹಸ್ತ ಕೊಡಲು ಈ ಅವತಾರಗಳು. ಅವತರಿ ಸಿದ ಪರಮಾತ್ಮನು ಸೂತ್ರಧಾರಿಯಾಗಿ ನಾಟಕವನ್ನು ಸರಿಯಾಗಿ ಸಾಗಿಸು ವನು. ತಾನೇ ಮುಖ್ಯಪಾತ್ರದಲ್ಲಿ ನಿಂತು ನಿರ್ವಹಿಸುವನು. ಕೃಷ್ಣಾವತಾರ ದಂತೆ, ರಾಮಾವತಾರದಂತೆ, ಚಕ್ರವರ್ತಿಯಾಗಿಯೂ, ಅನಂತರ ಭಿಕ್ಷುವಾ ಗಿಯೂ ಎರಡು ಪಾತ್ರಗಳಲ್ಲಿ ನಟನವಾಡಿ ನಿರ್ವಾಣವನ್ನು ತೋರುವನು, ಬುದ್ಧಾವತಾರದಂತೆ. ಏಕೆಂದರೆ "ಮನುಷ್ಯಾಃ ಸರ್ವಶಃ ಮಮ ವರ್ತ್ಮಾನು ವರ್ತಂತೇ."

> ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
> ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥೧೨॥

ಆದರೂ ಮನುಷ್ಯರು ಕಾಮಿಗಳಾಗಿ ಲೋಕದಲ್ಲಿ ಕರ್ಮಫಲವನ್ನಪೇಕ್ಷಿಸಿ, ಇಹದೇವತೆಗಳನ್ನಾರಾಧಿಸುತ್ತಾರೆ. ಏಕೆಂದರೆ ಕರ್ಮಜನ್ಯವಾದ ಸಿದ್ಧಿಯು ಮನುಷ್ಯಲೋಕದಲ್ಲಿ ಶೀಘ್ರದಲ್ಲೇ ಆಗುವುದು. ನಮ್ಮ ಜನ್ಮಭೂಮಿ ಕರ್ಮ

ಭೂಮಿ. ಇಹಲೋಕದಲ್ಲಿಯೇ, ಮನುಷ್ಯಜನ್ಮದಲ್ಲಿಯೇ ಕರ್ಮಮಾಡ ಲವಕಾಶ. ಈ ಲೋಕದಲ್ಲಿಯೇ ಕರ್ಮಮಾಡಿ ಸಿದ್ಧತೆ ಪಡೆದು ಪರಿಪೂರ್ಣ ನಾಗಲವಕಾಶ. ಮಾನವನಾಗಿ ಹುಟ್ಟಿದರೇ ತರಪೇತಿಗೆ ಅವಕಾಶ, ಕರ್ಮ ಮಾಡಲು ಕ್ಷೇತ್ರ. ಕರ್ಮಧರ್ಮಾಚರಣೆಗೆ ಕೇಂದ್ರ. ದ್ವಂದ್ವಗಳಿಗೆ ಸಿಲುಕಿ, ಮಧ್ಯಮಾರ್ಗಾವಲಂಬಿಯಾಗಿ ತೇರ್ಗಡೆಯಾಗಲು ಜಾಗ. ಹೀಗಿರುವ ಇಹದ ಮಾನವಜನ್ಮದಲ್ಲಿ ನಮ್ಮ ಈ ಪಾವನಪೃಥ್ವಿಯಲ್ಲಿ ಅವತರಿಸಲು ದೇವತೆಗಳು ಕೂಡ ಬಾಯಿಬಿಡುತ್ತಾರಂತೆ. ಈ ರೀತಿಯ ಅವಕಾಶ ನಮ್ಮ ಭೂಲೋಕವನ್ನು ಬಿಟ್ಟರೆ ಇನ್ನಾವ ಲೋಕದಲ್ಲೂ ಸಿಗಲಾರದು. ಇಲ್ಲಿ ಕರ್ಮಸಿದ್ಧಿಯಾದಂತೆ, ಕರ್ಮಫಲಜನ್ಯವಾದಂತೆ ಇನ್ನೆಲ್ಲೂ ಸಾಧ್ಯವಿಲ್ಲ. ಮಾನವನು ದೇವಾಂಶ. ದೇವನೇ ಆಗಲು ಪ್ರಯತ್ನಿಸಬಹುದು. ದೇವಕಾರ್ಯವನ್ನೇ ಇಹದಲ್ಲೆಸಗಿ, ಇಹ ವನ್ನೇ ದೇವಲೋಕವನ್ನಾಗಿ ಮಾಡಿ, ಇಹಪರಗಳೆರಡನ್ನೂ ಸಾಧಿಸಬಹುದು. ಈ ಸದವಕಾಶ ಸಿಕ್ಕಿರುವ ಮಾನುಷಜನ್ಮವನ್ನು ವ್ಯರ್ಥ ಮಾಡಿಕೊಳ್ಳಬಹುದೆ? ಜನ್ಮಸಾರ್ಥಕ ಮಾಡಿಕೊಳ್ಳಲು ಮನುಷ್ಯನು ಕಣ್ತೆರೆದಿರಬೇಕು. ಸತ್ಕರ್ಮ ನಿರತನಾಗಿರಬೇಕು. ಫಲತ್ಯಾಗಿಯಾಗಿ, ಲೋಕಕಲ್ಯಾಣಾಪೇಕ್ಷಿಯಾಗಬೇಕು. ಮಹದಾತ್ಮನಲ್ಲಿ ತಾನೂ ಕಿಂಚಿತ್‌ಸೇವೆ ಸಲ್ಲಿಸುವ ಆಸ್ಪದ ದೊರೆತಿರುವ ಈ ಮಾನವಜನ್ಮವನ್ನು ಈ ಕರ್ಮಭೂಮಿಯಲ್ಲಿ ವ್ಯರ್ಥಮಾಡಬಾರದು. ಲೋಕ ಕಲ್ಯಾಣವಾದರೆ ಅದರಲ್ಲಿ ಸೇರಿರುವ ತನಗೂ ಕಲ್ಯಾಣವಾಗಿಯೇ ಆಗುತ್ತದೆ. ಲೋಕಶಾಂತಿಯಾದರೆ ಆತ್ಮಶಾಂತಿ ಸ್ವಯಂಸಿದ್ಧ.

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥೧೩॥

ಗುಣಕರ್ಮಾನುಸಾರ ನಾಲ್ಕು ವರ್ಣಗಳನ್ನೂ ನಾನು ಸೃಷ್ಟಿಸಿದೆನು. ನಾನು ಸೃಷ್ಟಿಗೆಈ ರೀತಿಯಲ್ಲಿ ಕರ್ತನಾದರೂ, ನಾನು ಅಕರ್ತನೆಂದೂ, ಅವ್ಯಯನೆಂದೂ ತಿಳಿ. ಗುಣವಿಭಾಗವಾಗಿ ಬುದ್ಧಿ, ಭಾವ, ಕಾರ್ಮಿಕ, ಮತ್ತು ಸೇವಾಗುಣ ಗಳನ್ನನುಸರಿಸಿ ಬುದ್ಧಿವಾದವನ್ನು ಹೇಳುವುದಕ್ಕೂ, ಭಾವನಾಪರರು ರಾಜ ಕಾರ್ಯ ನಿರ್ವಹಿಸಿ ರಕ್ಷಣಾಕಾರ್ಯಕ್ಕೂ, ಕಾರ್ಮಿಕರು ವಾಣಿಜ್ಯವ್ಯವಹಾರಗಳಿಗೂ, ಸೇವಾಗುಣವುಳ್ಳವರು ಕೃಷಿ ಗೋರಕ್ಷಣೆ ಬೆಳೆಗಳ ಅಭಿವೃದ್ಧಿಗೂ ನಿಯಮಿತ ರಾದರು.

| ಗುಣವಿಭಾಗ. | ಕರ್ಮವಿಭಾಗ. | ಚತುರ್ವರ್ಣ. |
|---|---|---|
| 1. Intelligence<br>ಬುದ್ಧಿ | Advice<br>ಸುಮಂತ್ರ | Brahmin<br>ಬ್ರಾಹ್ಮಣ |
| 2. Emotion<br>ಭಾವ | Administration<br>ರಾಜಕಾರ್ಯ | Kshatriya<br>ಕ್ಷತ್ರಿಯ |
| 3. Industry<br>ಕಾರ್ಮಿಕ | Artisan<br>ಕುಶಲವೃತ್ತಿ | Vaisya<br>ವೈಶ್ಯ |
| 4. Service<br>ಸೇವಾ | Agriculture<br>ಕೃಷಿಗೋರಕ್ಷಣೆ | Sudra<br>ಶೂದ್ರ |

ಒಬ್ಬ ತಂದೆಗೆ ಸಮನಾಗಿ ಹುಟ್ಟಿದ ಭೇದವಿಲ್ಲದ ನಾಲ್ವರು ಮಕ್ಕಳು ಅವರವರ ಗುಣಚಾತುರ್ಯದ ಪ್ರಕಾರ ಜೀವನಮಾರ್ಗಕ್ಕೆ ಅವರವರ ಕರ್ಮವೆಸಗುತ್ತ ವೃತ್ತಿ ನಡಸುವರು. ಒಬ್ಬ ಓದಿ ವಿದ್ಯಾಗುರುವಾಗಿ ಪಾಠ ಹೇಳುವನು. ಎರಡನೆಯವನು ದೃಢನಾಗಿ ಸೇನೆಗೆ ದಳಪತಿಯಾಗುವನು. ಮೂರನೆಯವ ಯುಕ್ತಿವಂತನಾಗಿ ತನ್ನ ಕುಶಲಬುದ್ಧಿಯಿಂದ ವಾಣಿಜ್ಯವ್ಯಾಪಾರವೃತ್ತಿಯನ್ನೆಸಗುವನು. ನಾಲ್ಕನೆಯವ ಪಿತ್ರಾರ್ಜಿತವಾದ ಭೂಮಿಯನ್ನು ಬೇಸಾಯ ಮಾಡುತ್ತ ಕೃಷಿಗೋರಕ್ಷಣೆಯಲ್ಲಿರುವನು. ಇವರೆಲ್ಲರೂ ಒಂದೇ ಸಂಸಾರದಲ್ಲಿರಲಾರರೆ? ಇವರಲ್ಲಿ ತಂದೆಗೆ ಮಕ್ಕಳೆಂಬ ಮಮತೆ ವಿನಾ ಅವರ ಕಸುಬನ್ನನುಸರಿಸಿ ಭೇದವುಂಟೆ? ಎಲ್ಲಾ ಅಂಗಗಳೂ ಶರೀರಕ್ಕೆ ಅಗತ್ಯ, ಎಲ್ಲಾ ಸಮನೆ. ಎಲ್ಲದರ ಅವಿಚ್ಛಿನ್ನಸೇವೆಯಿಂದಲೇ ಶರೀರಯಾತ್ರೆ ನಡೆಯುವುದು. ಆ ಆ ಅಂಗಗಳು ಆ ಆ ಕಾಲಗಳಲ್ಲಿ ಅವುಗಳ ಕೆಲಸ ಮಾಡಬೇಕು. ಮೆದುಳು ಬುದ್ಧಿಯು ಅದರ ಕಾರ್ಯ ನಿರ್ವಹಿಸಬೇಕು. ರಕ್ಷಣಾಂಗಗಳು ಆಹಾರ, ವಾಯುಸೇವನೆಯ ಕಾರ್ಯ ನಡಸಬೇಕು. ಕಾರ್ಮಿಕ ಹೃದಯ ಚಲನಾಂಗಗಳು ಎಲ್ಲ ಅಂಗಗಳಿಗೂ ವ್ಯವಹಾರ ನಡಸಬೇಕು. ಕಲ್ಮಷನಿವಾರಣಾಂಗಗಳು ಕಲ್ಮಷಗಳನ್ನು ದೇಹದಿಂದ ಹೊರಗೆ ಹಾಕಬೇಕು. ಎಲ್ಲ ಕಾರ್ಯಗಳೂ ಮುಖ್ಯ. ಇವುಗಳಲ್ಲಿ ಯಾವುದು ತನ್ನ ಕಾರ್ಯವನ್ನೆಸಗದಿದ್ದರೂ ಶರೀರಕ್ಕೆ ಊನವೇ; ಅದರ ಅನರ್ಥವನ್ನು ಶರೀರಭಾಗಿಗಳಾಗಿ ಸರ್ವಾಂಗಗಳೂ ಅನುಭವಿಸಬೇಕು. ಇದೇ ಗುಣ ಕರ್ಮ ವಿಭಾಗ. ಈ ಪ್ರಪಂಚವು, ಆರ್ಯಜನಾಂಗವು ಸುಗಮವಾಗಿ ನಡೆಯ

ಬೇಕಾದರೆ, ಜನಾಂಗಸೇವೆ ಅವಿಚ್ಛಿನ್ನವಾಗಿ ನಡೆಯಬೇಕಾದರೆ, ಅವರವರ ಶಕ್ತ್ಯನುಸಾರವಾಗಿ ಅವರವರು ಕರ್ಮಮಾಡಲು ಚತುರ್ಭಾಗವಾಗಿ ಮುಖ್ಯ ವಿಂಗಡಮಾಡಿ, ಅವರವರ ಗುಣಶಕ್ತಿಗನುಸಾರವಾಗಿ ಕರ್ಮಾವಲಂಬಿಗಳಾಗಿದ್ದರೇ ಹೊರತು ಮೇಲು ಕೀಳೆಂಬುದಿಲ್ಲ. ಕೈ ಬೆರಳುಗಳೆಲ್ಲ ಒಂದೇ ಸಮನಲ್ಲ. ಒಂದೇ ಕೆಲಸವನ್ನು ಜೊತೆಯಾಗಿ ಮಾಡಬಲ್ಲವಾದರೂ, ಬೇರೆ ಬೇರೆ ಕೆಲಸಗಳನ್ನು ನಿರ್ವಹಿಸುವುವು. ಒಂದಕ್ಕೊಂದು ನೆರವಾಗುವುದು. ಸಮನಾಗಿ ಎಲ್ಲಾ ಒಂದಾಗಿ ಮುಷ್ಟಿ ಹಿಡಿದರೆ ವಜ್ರಮುಷ್ಟಿಯಲ್ಲವೆ? ಉಂಗುರವಿಡುವ ಬೆರಳಿಗಿಂತ ಅಮೂಲ್ಯವೆಂದು ಕಿರುಬೆರಳನ್ನು ಭಾವಿಸಲಾದೀತೆ? ತೋರಿಸುವ ಬೆರಳಿಗೆ ಸದೃಶವಲ್ಲವೆಂದು ಮಧ್ಯದ ಬೆಟ್ಟು ನಾಚಬೇಕೆ? ಎಲ್ಲಕ್ಕಿಂತಲೂ ಬಲಶಾಲಿ, ಎಲ್ಲರೊಡನೆಯೂ ಸಹಕರಿಸಬಲ್ಲ ಐದನೆಯ ಹೆಬ್ಬೆಟ್ಟು ದೂರವಾಗಿ ನಿಂತರೂ ಶ್ರೇಷ್ಠವಲ್ಲವೆ? ಒಂದೆರಡೆಂದು ಬೆರಳು ಮಡಿಸಿದಾಗ ಕಿರುಬೆರಳನ್ನೇ ಮೊದಲು ಮಡಿಸುವುದರಿಂದ ಕಿರುಗೆಲಸಗಳನ್ನು ಮಾಡುವವರೆ ಒಂದನೆಯವರೆಂದು ಭಾಸವಾಗುವುದಿಲ್ಲವೆ?

ಮಹಾಭಾರತದಲ್ಲಿ ಭೃಗು ಭಾರದ್ವಾಜ ಸಂವಾದವಿದೆ. ಎಲ್ಲರೂ ಮೊದಲು ಬ್ರಾಹ್ಮಣರಾಗಿಯೇ ಸೃಷ್ಟಿಯಾದರು. ಆದರೆ ಅವರವರ ಕರ್ಮದಿಂದ ಅವರು ಬೇರೆ ಬೇರೆ ವರ್ಣದವರಾದರು ಎಂದು ತಿಳಿಸಿದೆ. ಭೃಗು ಭಾರದ್ವಾಜರು ಸೃಷ್ಟಿಯ ಮೊದಲಿನವರು, ತ್ರೇತಾಯುಗದವರು. ಸ್ವಾಮಿಯು ತನ್ನ ಮಕ್ಕಳಲ್ಲಿ ಭೇದಭಾವವಿಲ್ಲದೆ ಸಮನಾಗಿ ಸೃಷ್ಟಿಸಿದ್ದಾನು. ಆದರೂ ವ್ಯವಹಾರದಲ್ಲಿ ಈ ಸಮತ್ವ ಸಾಧ್ಯವೆ? ಒಬ್ಬೊಬ್ಬರು ಒಂದೊಂದು ಕರ್ಮವೆಸಗಲು ಷುರುಮಾಡಿದರು. ಆ ಕರ್ಮದಂತೆ ಅವರ ಗುಣವಾಯಿತು. ಈ ವಿವಿಧ ಸೇವೆಯಿಂದ ಲೋಕಕಲ್ಯಾಣವೂ ಆಯಿತು. ಆ ಗುಣಕರ್ಮವಿಭಾಗದಂತೆ ವರ್ಣಭೇದ ಬೆಳೆಯಿತು. ಸೃಷ್ಟಿಸಿದ ದೇವನಿಗೆ ಅದರಿಂದೇನೂ ಭೇದವಿಲ್ಲವಷ್ಟೆ? ಸಮತ್ವ ದೃಷ್ಟಿಯ ವಿಪರೀತಭಾವನೆಯಿಂದ ನಾವು ಪ್ರಯತ್ನಿಸಿ ಒಂದುಗೂಡಿಸಿದರೂ ಅವರವರ ಗುಣಕರ್ಮದಿಂದ ಅವರು ಅವರವರ ಮಟ್ಟಕ್ಕೆ ಸೇರಿಯೇ ಸೇರುತ್ತಾರೆ. ಸಮತ್ತ್ವದ ಹೆಸರಿನಲ್ಲಿ ಕೆಳಗಿನ ಮಟ್ಟದವರನ್ನು ಮೇಲಿನ ಮಟ್ಟಕ್ಕೇರಿಸಲು ಅರ್ಹರನ್ನಾಗಿ ಮಾಡುವ ಪ್ರಯತ್ನ ಸ್ತುತ್ಯವಾಗಿವೆ. ಆದರೆ ಸಮತ್ವದ ಹೆಸರಿನಲ್ಲಿ ಮೇಲಿನ ದರ್ಜೆಯವರನ್ನು ಕೀಳು ದರ್ಜೆಗಿಳಿಸಿ, ಎಲ್ಲರನ್ನೂ ಒಂದೇ

ಬೆಲೆಯಿಂದ ಕಾಣುತ್ತೇವೆಂಬ ಪ್ರಯತ್ನ ಲೋಕಕಲ್ಯಾಣವೆ ? ಉತ್ತಮ ಕುಲ ದಲ್ಲಿ ಹುಟ್ಟಿದರೂ, ಚರ್ಮವ್ಯಾಪಾರವನ್ನೋ ಮದ್ಯದ ಅಂಗಡಿಯನ್ನೋ ಜೀವ ನೋಪಾಯಕ್ಕಾಗಿ ನಡಸಿಕೊಂಡು ಬಂದವನು ಕಾಲಕ್ರಮೇಣ ಆ ಕಸುಬಿನ ವರ್ಣಕಾಂತಿಯುಕ್ತನಾಗುತ್ತಾನೆ. ಕೀಳು ಕುಲೋತ್ಪನ್ನನೆಂದು ನಾವು ಭಾವಿ ಸಿರುವ ಒಬ್ಬ ಜೀತಗಾರನೂ, ತನ್ನ ವೃತ್ತಿಯ ಜೊತೆಯಲ್ಲಿ ಭಗವಚ್ಚಿಂತನೆ ಯನ್ನು ಸೇರಿಸಿ ದೇವಭಕ್ತಿಯಲ್ಲೇ ನಿರಂತರ ಕಾಲ ಹಾಕಿದರೆ ಬ್ರಹ್ಮಾನ್ವೇಷಣ ದಿಂದ ಕಾಲಾನುಕಾಲದಲ್ಲಿ ಬ್ರಾಹ್ಮಣತ್ವವನ್ನೇ ಪಡೆಯುತ್ತಾನೆ. ಪರಮಾತ್ಮನ ದೃಷ್ಟಿಯಲ್ಲಿ ಇಬ್ಬರೂ ಸಮನೆ. ಈ ಜಾತಿ ಕರ್ಮ ಮಾಡಿದವನು ಅವನಲ್ಲ. ಜಾತಿಯನ್ನು ಮಾಡಿಕೊಂಡವನು ಪ್ರತಿಯೊಬ್ಬನೂ ತಾನೇ. ಅವರವರ ಗುಣ ಕರ್ಮವೇ ಅವರವರ ಜಾತಿ. ಯಾವನಾದರೇನು ? ಅವನ ಗುಣ ದೊಡ್ಡ ದಾಗಿ, ಕರ್ಮ ಲೋಕಸಂಗ್ರಹಕ್ಕಾದರೆ ಅವನೇ ಉತ್ಕೃಷ್ಟನಲ್ಲವೆ ? ಅವರವರ ಕರ್ಮಸಂಗ್ರಹದ ಪ್ರಕಾರ, ಅವರವರ ವಾಸನೆಯ ಫಲದಿಂದ ಅವರವರ ಜಾತಿ ಯನ್ನು ಅವರವರೇ ಸೃಷ್ಟಿಸಿಕೊಳ್ಳುವರು. ಜಾತಿಗೆ ವರ್ಣವೆಂದು ಉಪ ಯೋಗಿಸಲ್ಪಟ್ಟಿದೆ. ವರ್ಣವೆಂದರೆ ಬಣ್ಣ. ಹುಟ್ಟುಬಣ್ಣವಲ್ಲದೆ ಕಟ್ಟುಬಣ್ಣ ಬರುತ್ತದೆಯೆ? ಕಪ್ಪು ಮುಖಕ್ಕೆ ಎಷ್ಟು ಬಣ್ಣ (ಪೌಡರ್) ಬಳಿದರೇನು ? ಅವರವರ ಗುಣಕರ್ಮಗಳಿಂದ ಅವರವರಿಗೆ ಬಣ್ಣ ಬಂದೇ ಬರುತ್ತದೆ. ಅನ್ನ ವಿಕ್ರಯವನ್ನೊ, ಸೇಂದಿ ಕಂಟ್ರಾಕ್ಟನ್ನೊ, ಸ್ತ್ರೀವ್ಯಾಪಾರವನ್ನೊ ಮಾಡುತ್ತಿರು ವವ ಉತ್ತಮ ಜಾತಿಯಲ್ಲಿ ಹುಟ್ಟಿದವನೆಂದು ಹೇಳಿಕೊಂಡರೂ ಆ ಕರ್ಮದಿಂದ ಹುಟ್ಟಿದ ವರ್ಣ ಮರೆ ಮಾಡಲಾಗುತ್ತದೆಯೆ ? "ತಸ್ಯ ಕರ್ತಾರಮಪಿ ಮಾಂ ವಿದ್ಧಿ" ಅವರನ್ನು ಸೃಷ್ಟಿಸಿದುದಕ್ಕೆ ತಾನು ಕರ್ತೃವಾದರೂ, ವಾಸ್ತವವಾಗಿ ತಾನು ಅಕರ್ತನೆಂದು ಸ್ವಾಮಿ ಹೇಳುವುದರ ಮರ್ಮವಿದೇ.

ಪ್ರಪಂಚದ ಎಲ್ಲಾ ಭಾಗಗಳಲ್ಲೂ, ಈ ಆಧುನಿಕ ರೀತಿಯಲ್ಲಿ ನಡೆಯು ತ್ತಿರುವ ವ್ಯವಹಾರದಲ್ಲೂ, ಈ ರೀತಿ ಗುಣಕರ್ಮವಿಭಾಗಗಳಿದ್ದೇ ಇವೆ. ಅವರವರ ಗುಣ, ಶಕ್ತಿಯ ಪ್ರಕಾರ ಅವರವರು ಕರ್ಮವನ್ನೆಸಗುತ್ತ ಭಾಗವಾಗಿ ದ್ದಾರೆ. ಒಂದು ಕರ್ಮವನ್ನು ಮಾಡುವವರು, ಅದೇ ಮಾಡುತ್ತ ಮಾಡುತ್ತ ನಿಪುಣರಾಗಿ, ಆ ಕರ್ಮಮರ್ಮವನ್ನೆಲ್ಲ, ಅದರ ಅಭಿವೃದ್ಧಿಯನ್ನೆಲ್ಲ ತಮ್ಮ ಮಕ್ಕಳಿಗೇ ಗೋಪ್ಯವಾಗಿ ಚೆನ್ನಾಗಿ ಹೇಳಿಕೊಟ್ಟು ಅಭ್ಯಾಸಮಾಡುತ್ತಾ ಆ

ವೃತ್ತಿಸೇವೆಯನ್ನೂ ಆ ವೃತ್ತಿಅಭಿವೃದ್ಧಿಯನ್ನೂ ಎಸಗುತ್ತ ಆ ವರ್ಣದವರಾಗಿದ್ದಾರೆ. ಇವತ್ತೊಂದು ನಾಳೆಯೊಂದು ಮಾಡುತ್ತಾ ಬಂದರೆ ತಿರುಪತಿ ಕ್ಷೌರವಾಗುತ್ತೆ. ಯಾವುದರಲ್ಲೂ ನಿಪುಣತೆಯಿಲ್ಲ, ಯಾವುದರಲ್ಲೂ ಫಲವಿಲ್ಲ. ಆದುದರಿಂದ ಈ ಗುಣಕರ್ಮವಿಭಾಗವಾದ ವರ್ಣಭೇದವು ನಮ್ಮ ಪೂರ್ವಿಕರ ಕುತಂತ್ರ ಸೃಷ್ಟಿಯೇನಲ್ಲ. ಇದು ಯಾವಾಗಲೂ, ಎಲ್ಲ ಕಡೆಯಲ್ಲೂ, ಸಮಾಜವೃದ್ಧಿಯ, ಸಮಾಜಸೇವೆಯ, ವೃತ್ತಿ ಅಭಿವೃದ್ಧಿಯ, ಕರ್ಮನಿಪುಣರ ಸೃಷ್ಟಿಯ ದೃಷ್ಟಿಯಿಂದ ಅಗತ್ಯವಾದುದು. ಆ ಕಾಲದಲ್ಲೂ ಆ ಬಿಗಿ ಕಟ್ಟಿನಲ್ಲೂ ಆ ನಿಯಮಗಳಲ್ಲೂ ಆ ಪ್ರತಿಭಾಶಾಲಿಗಳು ತಮ್ಮದೇ ವ್ಯಕ್ತಿತ್ವವನ್ನು ಸಾಧಿಸಿ, ತಮ್ಮ ಬಣ್ಣವನ್ನೇ ತೋರಿಸಿ, ವರ್ಣಭೇದದಿಂದ ಬೇರೆಯಾಗಲಿಲ್ಲವೆ? ವಿಶ್ವಾಮಿತ್ರರನ್ನು ತೆಗೆದುಕೊಳ್ಳಿ; ಕ್ಷಾತ್ರದಿಂದ ಬ್ರಾಹ್ಮಣ್ಯ ಸಾಧಿಸಿದರು. ಅವರೇ ಈಗಲೂ ಗಾಯತ್ರೀ ಮಂತ್ರಕ್ಕೆ ಋಷಿ. ಪರಶುರಾಮರನ್ನು ನೋಡಿ: ಬ್ರಾಹ್ಮಣರಾದರೂ ಕ್ಷಾತ್ರವೀರ್ಯ ತೋರಿದರು. ವ್ಯಕ್ತಿತ್ವ ಪ್ರತಿಭೆಯಿಂದ ಎಲ್ಲಾ ಕಾಲಗಳಲ್ಲೂ ಈ ಎಲ್ಲೆಗಳನ್ನು ಮಹಾವ್ಯಕ್ತಿಗಳು ದಾಟಿಯೇ ಇದ್ದಾರೆ.

> "ಭೇದಾಭೇದೌ ಸಪದಿ ಗಲಿಕಾ ಪುಣ್ಯಪಾಪೇ ವಿಶೀರ್ಣೇ।
> ಮಾಯಾಮೋಹಾ ಕ್ಷಯಮುಪಿಗತೌ ನಷ್ಟಸಂದೇಹವೃತ್ತೇಃ॥
> ಶಬ್ದಾತೀತಂ ತ್ರಿಗುಣರಹಿತಂ ಪ್ರಾಣ್ಯತಪ್ತಾವಬೋಧಂ।
> ನಿಸ್ತ್ರೈಗುಣ್ಯೇ ಪಥಿಂ ಚರಿತಃ ಕೋ ವಿಧಿಃ ಕೋ ನಿಷೇಧಃ॥

ಅಂಥವರಿಗೆ "ವಿಧಿಃ ಕೋ ನಿಷೇಧಃ" ಎಂದು ಶುಕರು ಹೇಳಿರುವಂತೆ, ತ್ರಿಗುಣಾತೀತರಿಗೆ ಕರ್ಮಮರ್ಮವನ್ನು ತಿಳಿದಿರುವವರಿಗೆ ವಿಧಿ ಯಾವುದು, ನಿಷೇಧವ್ಯಾವುದು? ಈ ವರ್ಣಭೇದದಲ್ಲಿ ಹೆಚ್ಚಾಗಿ ಈ ವಿಧಿನಿಷೇಧಗಳೇ ಜಾಸ್ತಿ. (Do's & Dont's) ಈ ಭೇದಗಳೆಲ್ಲ ತಿಳಿವಳಿಕೆ ಇಲ್ಲದೆ ಸ್ವಧರ್ಮ ಸ್ವಕರ್ಮ ವಿವೇಕವಿಲ್ಲದವರಿಗೆ ಧರ್ಮಕರ್ಮಗಳನ್ನು ಹೇಳಿಕೊಡಲಾಗಿ ಒಂದು ನೆಲೆ ಸಿಕ್ಕಿ ತತ್‌ರೂಪ, ದೇಶಸೇವೆ, ಸಮಾಜಸೇವೆ ಮಾಡಲು ಹಕ್ಕು ಸ್ಥಾಪಿತಕ್ಕಾಗಿ ಎಲ್ಲರೂ ಒಂದೇ ಮಾರ್ಗಾವಲಂಬಿಗಳಾಗಿ ಒಬ್ಬರಿಗೊಬ್ಬರು ಅಡಚಣೆಯಾಗಿ, ಒಬ್ಬರಿಗೊಬ್ಬರು ವಿರೋಧಿಗಳಾಗದಂತೆ ಎಲ್ಲರೂ ರಾಜಕೀಯಕ್ಕೆ ಧುಮುಕಿ, ರಾಜಕೀಯ ಪಟುಗಳಾಗಿ, ರಾಜಸದೃಶರಾಗಿ ಮೆರೆದು, ರಾಜ್ಯಭಾರ ಮಾಡ

ಬೇಕೆಂಬ ಭಾವನೆಯಿಂದ ಈಗ ಪ್ರಪಂಚದಲ್ಲಿ ಕೃಷಿವ್ಯವಸಾಯಗಳಿಗೇ ಜನ ವಿಲ್ಲ. ಗ್ರಾಮಗಳಲ್ಲಿ ನಿಂತು ಕೆಲಸಮಾಡಲು ತೃಪ್ತಿ ಹೇಗೆ ಬಂದೀತು?

ಬೆಳಗಾದರೆ ಹೋಟಲು ಕಾಫಿ ದೋಸೆ, ಸಾಯಂಕಾಲವಾದರೆ ಕುದಿತ, ಸಿನಿಮಾ, ನಟನಮಂದಿರ. ಅಂತರ್ಯದಲ್ಲಿ ಮಲಗಿ ನಿದ್ರಿಸಿ ಲೋಲರಾಗಿರ ಬೇಕೆಂಬಾಸೆಯೇ ಸರ್ವರಿಗೂ ಇರುವಾಗ, ಗುಣಕರ್ಮ ವಿಭಾಗವೆಲ್ಲಿ? ಕೃಷಿ ಕೈಗಾರಿಕೆಗಳಿಗೆ ಜನರ ಮನಸ್ಸು ಒಲಿಯದಿರುವಾಗ ಇನ್ನು ಸಿಷ್ಠರಾಗಿ ಶಿಕ್ಷಿತ ರಾಗಿ, ಕಟ್ಟಿನ ನಿಯಮಗಳಲ್ಲಿ ಸಿಲುಕಿ, ಸರ್ವದಾ "ಸರ್ವೇ ಜನಾಸ್ಸುಖಿನೋ ಭವಂತು, ಸಮಸ್ತ ಕಲ್ಯಾಣಾನಿ ಭವಂತು" ಎಂದು ಸ್ವಾರ್ಥವನ್ನು ಬಿಟ್ಟು ಪರಾರ್ಥಕ್ಕಾಗಿ ಯಜ್ಞದಲ್ಲಿ ನಿರತರಾಗಿ ಬ್ರಹ್ಮನಲ್ಲೇ ತಲ್ಲೀನರಾಗುವುದೆಂತು? ಈಗ ವರ್ಣವೆಲ್ಲಿಂದ ಬಂತಲೇ? ಮುಖ ಕ್ಷೌರ, ಸ್ನೋ ಹಚ್ಚಿಕೊಳ್ಳುವ ಮುಖ ವರ್ಣವೇ ವರ್ಣ. ಏನಿದ್ದರೂ ಅಂತರಂಗದಲ್ಲಿ ಶುದ್ಧರಾಗಿರುವವರು ಒಬ್ಬೊಬ್ಬ ಮಹಾತ್ಮರ ಸ್ವಚ್ಛವರ್ಣ ಮಾತ್ರ.

> ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ।
> ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥೧೪॥

ಕರ್ಮಫಲದಲ್ಲಿ ಇಚ್ಛೆ ಇಲ್ಲದ ಕಾರಣ ನನಗೆ ಕರ್ಮವು ಸ್ಪರ್ಶಮಾಡುವುದಿಲ್ಲ (ನ ಮಾಂ ಲಿಂಪಂತಿ), ಬದ್ಧನನ್ನಾಗಿ ಮಾಡುವುದಿಲ್ಲ. ಈ ರೀತಿಯಾದ ಪರಮಾತ್ಮನ ಇಂಗಿತವನ್ನು ಯಾವನು ತಿಳಿಯುತ್ತಾನೋ ಅವನು ಫಲೇಚ್ಛಾ ರಹಿತನಾಗಿ, ಕರ್ಮದಿಂದ ನಿರ್ಲಿಪ್ತನಾಗಿ, ಅವನು ಕರ್ಮದಿಂದ ಬದ್ಧನಾಗುವು ದಿಲ್ಲ. ಶಂಕರರು ದುರ್ಲಭವೆಂದು ಹಾಡಿರುವ ಮೂರರ ಪೈಕಿ ಮನುಷ್ಯತ್ವದ ಮಹತ್ತ್ವವನ್ನು, ಎಂತು ದೇವತೆಗಳು ಕೂಡ ಈ ಕರ್ಮಭೂಮಿಯಲ್ಲಿ ಮನುಷ್ಯ ರಾಗಿ ಹುಟ್ಟಲು ಹಾತೊರೆಯುತ್ತಾರೆಂದು ತಿಳಿದೆವು. ಮಾನುಷತ್ವಂ, ಮುಮು ಕ್ಷುತ್ವಂ—ಎರಡನೆಯದು. ಈ ಮೋಕ್ಷಾಕಾಂಕ್ಷೆಯು ಬಹಳ ಮಹತ್ತಾದುದು, ಇದು ಎಲ್ಲರಿಗೂ ಲಭಿಸದು, ಬಿಡುಗಡೆ ಹೊಂದಿ ಸ್ವತಂತ್ರನಾಗಬೇಕೆಂದು ಆಶಿಸುವವನೇ ಮುಮುಕ್ಷುವು. ಅವನೇ ಬಿಡುಗಡೆ ಹೊಂದಿ ಸ್ವತಂತ್ರನಾದುದು. ಪೂರ್ವದಲ್ಲಿ ಕೂಡ ಈ ರೀತಿ ತಿಳಿದು ನಿಷ್ಕಾಮಕರ್ಮವನ್ನು ಫಲಾಪೇಕ್ಷೆ ಯಿಲ್ಲದೆ ಪರಮಾತ್ಮನ ಮೇಲ್ಪಂಕ್ತಿಯನ್ನನುಸರಿಸಿ ಮಾಡಿಯೇ.

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥೧೫॥

ಪರಮಾತ್ಮನು ದೇವಪುರುಷನೆಂದೂ, ಅವನ ಲೀಲಾಕರ್ಮವನ್ನನುಸರಿಸಲು ಅಸದಳವೆಂದೂ ಭಾವಿಸುವನಾದರೆ, ನಿನ್ನಂತೆಯೇ ಇದ್ದ ಮನುಷ್ಯರು—ಮುಮುಕ್ಷುಗಳು ಪೂರ್ವದಲ್ಲಿ ಅನುಸರಿಸಿದ ಕರ್ಮಯೋಗವನ್ನಾದರೂ ನೀನು ಮಾಡು. ಪರಿಪೂರ್ಣನಾಗುತ್ತ ಆಗುತ್ತ ಮನುಷ್ಯನೇ ಆಗುತ್ತಾನೆ. ಪೂರ್ಣ ಗುಣಯುಕ್ತನಾಗುತ್ತ ಗುಣಾತೀತನಾಗುತ್ತಾನೆ. ಅಂತಹವರೇ ಮುಮುಕ್ಷು ಗಳು. ದೇವರ ಅವತಾರವೇ ಅಲ್ಲವಾದರೂ, ಅವನ ಹತ್ತಿರದವರು. ಈಗೆಲ್ಲಿ ಬಂತು ಈ ಮುಮುಕ್ಷುತ್ವ? ನಾಲ್ಕು ಯುಗಗಳ ಪೈಕಿ ಮೊದಲನೆಯ ಯುಗ ದಲ್ಲಿ ಇತ್ತಂತೆ ಚತುರ್ವಿಧ ಪುರುಷಾರ್ಥಗಳು: ಧರ್ಮಾರ್ಥ ಕಾಮಮೋಕ್ಷಗಳು. ಆ ಯುಗದಲ್ಲಿ ಮೋಕ್ಷದ ಮೇಲೆ ದೃಷ್ಟಿ. ಎರಡನೆಯ ಯುಗವಾದ ತ್ರೇತಾ ಯುಗದಲ್ಲಿ ಆ ಮೋಕ್ಷವೇ ಹಾರಿತು, ಧರ್ಮಾರ್ಥಕಾಮ ಮೂರೇ ಉಳಿದು ಕೊಂಡವು. ಮೋಕ್ಷಕಾಂಕ್ಷೆ ತಪ್ಪಿದರೂ ಧರ್ಮದ ಮೇಲೆಯೇ ದೃಷ್ಟಿ. ಮೂರ ನೆಯ ಯುಗವಾದ ದ್ವಾಪರದಲ್ಲಿ ಎರಡೇ ಉಳಿದುವು. ಧರ್ಮವೂ ಹಾರಿತು; ಅರ್ಥಕಾಮಗಳು ಉಳಿದರೂ ಅರ್ಥದ ಮೇಲಾದರೂ ದೃಷ್ಟಿಯಿತ್ತು. ನಾಲ್ಕ ನೆಯ ಯುಗವಾದ ಕಲಿಯುಗದಲ್ಲಿಯಾದರೋ ಧರ್ಮಾರ್ಥಮೋಕ್ಷೇಚ್ಛೆಗಳಾ ವುವೂ ಉಳಿಯದೆ, ಬರೀ ಕಾಮವೊಂದೇ ಉಳಿಯಿತು. ಅದರ ಮೇಲೇ ದೃಷ್ಟಿ. ಅದೇ ಕೊನೆಮೊದಲು. ಕಾಮಾತುರರಾಗಿ ಮೃಗಜೀವಿಗಳಂತಿರುವುದೇ ಅಂತ್ಯ ಧ್ಯೇಯವಾಗಿದೆ. ಆದುದರಿಂದ ದ್ವಾಪರದಲ್ಲಿ ಪರಮಾತ್ಮ ಹೇಳುತ್ತಾನೆ: "ಪೂರ್ವೈರಪಿ ಮುಮುಕ್ಷುಭಿಃ" ಎಂದು, ಆ ಪೂರ್ವದ ಅಪೂರ್ವಮುಮುಕ್ಷು ಗಳು "ಪೂರ್ವೈಃ ಪೂರ್ವತರಂ ಕೃತಂ" ಪೂರ್ಣವಾಗಿ ನಿಷ್ಕಾಮಕರ್ಮ ಪರ ಮಾತ್ಮನ ಮೇಲ್ಪಂಕ್ತಿಯಂತೆ ಮಾಡು. ತಸ್ಮಾತ್ "ಕುರು ಕರ್ಮೈವ" ಎಂದು ಅರ್ಜುನನಿಗೆ ಶ್ರೀಕೃಷ್ಣನು ಜ್ಞಾನೋಪದೇಶ ಮಾಡಿದನು.

ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯತ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧೬॥

ಹೇಳುವುದರಷ್ಟು ಸುಲಭವಲ್ಲ ಮಾಡುವುದು. ಕರ್ಮವೆಂದರೇನು? ಅಕರ್ಮ ವೆಂದರೇನು? ಎಂದು ತಿಳಿದವರು ಕೂಡ ಮೋಹಿತರಾಗಿದ್ದಾರೆ ಆದುದರಿಂದ

'ಯಜ್ಞಾರ್ಥಾತ್' ಸ್ವಾರ್ಥ ಬಿಟ್ಟು ಪರಾರ್ಥವಾದ ಶುಭರೂಪವಾಗಿ ಬಿಡುಗಡೆ ಹೊಂದುವ ಕರ್ಮಸ್ವರೂಪವನ್ನು ನಾನು ಹೇಳುತ್ತೇನೆಂದನು ಪರಮಾತ್ಮ.

ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥೧೭॥

ಕರ್ಮ, ಅಕರ್ಮ, ವಿಕರ್ಮಗಳ ಸ್ವರೂಪವನ್ನು ಯಥಾರ್ಥವಾಗಿ ತಿಳಿಯಬೇಕು. ಏಕೆಂದರೆ ಕರ್ಮದ ಗತಿ ಗಹನವಾದುದು. ಕರ್ಮವು ಎಲ್ಲಿ ಸಮಾಪ್ತಿ ಹೊಂದುತ್ತದೆ, ಯಾವ ರೀತಿ ಪರಿಣಮಿಸುತ್ತದೆ, ಅದರ ಗತಿಯು ಅಗಾಧ ವಾದುದು ಎಂಬ ಲಕ್ಷ್ಯದಿಂದ ಕರ್ಮಾಸಕ್ತವಾಗಬೇಕು. ಕರ್ಮಸ್ವರೂಪ, ಕರ್ಮಗತಿಯ ತಿಳಿವಳಿಕೆ ಬಹಳ ಮುಖ್ಯ. ಕರ್ಮಿಯು ಒಬ್ಬನೇ ಅಲ್ಲ. ಕರ್ಮ ಒಂದೇ ರೀತಿ ಪ್ರವಹಿಸುವುದಿಲ್ಲ. ಕರ್ಮಿಯು ಈ ಸೃಷ್ಟಿಮಹಾಸಾಗರ ದಲ್ಲಿ ಯತ್‌ಕಿಂಚಿತ್ ಆದರೂ, ಇವ ಮಾಡುವ ಕರ್ಮಗತಿ ಸೃಷ್ಟಿಮಹತ್ತಿ ನಲ್ಲಿ ಪೂರ್ತಿ ಹೊಂದುತ್ತದೆ. ಎಲ್ಲ ಕರ್ಮಿಗಳ ಕರ್ಮವೂ ಸೇರಿ, ಸಂಗ್ರಹ ಕರ್ಮವಾಗಿ ಸಮಷ್ಟಿಯಲ್ಲಿ ವ್ಯಕ್ತವಾಗುತ್ತದೆ. ವ್ಯಷ್ಟಿಕರ್ಮವು ಸಮಷ್ಟಿಯ ಕರ್ಮಫಲವಾಗಿ ಪರಿಣಮಿಸುತ್ತದೆ. ಸಮಷ್ಟಿ (Cosmic) ಹಿತಕ್ಕಾಗಿಯೇ ವ್ಯಷ್ಟಿಯ ವ್ಯಕ್ತಿಕರ್ಮ (Individual) ನಡೆಯಬೇಕು. ಒಂದು ವ್ಯಕ್ತಿಯ ಅಂತರ್ಗತ ಆಲೋಚನೆ ಕೂಡ, ಸೃಷ್ಟಿಯ ನಕ್ಷತ್ರದಿಂದ ನಕ್ಷತ್ರಕ್ಕೆ ತರಂಗ ರೂಪವಾಗಿ ಪ್ರವಹಿಸುವುದು. ಅಂದಮೇಲೆ ಕರ್ಮಗತಿ ಎಷ್ಟು ಅಗಾಧ ವಾದುದು! ಪ್ರತಿ ವ್ಯಕ್ತಿಯ ಮನೋವಾಕ್ಕಾಯಕರ್ಮಗಳು ಎಲ್ಲೋ, ಎಂತೋ, ಎಂದೋ, ಹೇಗೋ ಅಗೋಚರವಾಗಿ ಪರಿಣಮಿಸುವುವು. "ನಾನೊಂದು ಹಾಡು ಹಾಡಿದೆ, ವಾಯುವಿನೊಳಗೆ ಅಂತರ್ಧಾನವಾಗಿಬಿಟ್ಟು ಎಲ್ಲಿ ಹೋಯಿತೋ ನಾ ಕಾಣದಾದೆ. ನಾನೊಂದು ಬಾಣಬಿಟ್ಟೆ. ಅದು ಪೃಥ್ವಿ ಯಲ್ಲಿ ಎಲ್ಲಿ ಬಿತ್ತೋ ನನಗೆ ಗೋಚರವಾಗಲಿಲ್ಲ. ಎಷ್ಟೋ ದಿನಗಳನಂತರ ಒಬ್ಬರ ಬಾಯಲ್ಲಿ ಆ ಹಾಡು ಕೇಳಿದೆ. ಎಷ್ಟೋ ದಿನಾನಂತರ ಆ ಬಾಣ ಒಂದೆದೆಗೆ ನೆಟ್ಟದ್ದು ನೋಡಿದೆ" ಎಂದು ಹಾಡಿದ ಹಾಡಿನಲ್ಲಿ ಕರ್ಮದ ಅಗಾಧ ಗತಿ ಸೂಕ್ಷ್ಮವಾಗಿ ಕಾಣುವುದು.

ಕರ್ಮವೆಂಬುದು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಮಾಡುವುದು, ಮನ ಸ್ಸಿಗೆ ಸಂಬಂಧಿಸಿದುದು (action) ಪ್ರವೃತ್ತಿ. ಅಕರ್ಮವೆಂಬುದು (inaction)

ಆತ್ಮನಿಗೆ ಸಂಬಂಧಿಸಿದುದು—ನಿವೃತ್ತಿ. ಈ ದೇಹವೇನು ಕರ್ಮ ಮಾಡು ತ್ತಿದ್ದರೂ ನಿಸ್ಸಂಗಿಯಾಗಿ ಅಂತರಾತ್ಮನು ಅಕರ್ಮಿಯಾಗಿರುವನು. ವಿಕರ್ಮ ವೆನ್ನುವುದು (Reaction) ಪರಮಾತ್ಮನಿಗೆ, ಸಮಷ್ಟಿಗೆ, ಸಂಬಂಧಿಸಿದ್ದು. ಸಕಾಮಕರ್ಮ ನಿಷ್ಕಾಮಕರ್ಮಗಳೆರಡೂ ಸೇರಿತು.

ವಸ್ತುದರ್ಶನವಾಗುವುದಕ್ಕೆ ಮುಂಚೆ ಮಾಡುವ ಎಲ್ಲಾ ಅವಿದ್ಯೆಯ ಕರ್ಮ ಗಳಲ್ಲಿ ಪ್ರವೃತ್ತಿ ನಿವೃತ್ತಿಗಳೆರಡೂ ಸೇರಿವೆ. ಅವಿದ್ಯಾಕರ್ಮಗಳಲ್ಲಿ ತಾನು ಕರ್ತೃ ಎಂಬ ಭಾವನೆಯೂ ಬರುವುದು. ಇದೆಲ್ಲಾ ಅನಿತ್ಯಜ್ಞಾನದಲ್ಲಿ ಎಸ ಗುವ ಕರ್ಮಭಾವನೆ. ವಸ್ತುದರ್ಶನವಾದ ಮೇಲೆ ನಿತ್ಯಜ್ಞಾನ ಬಂದು, ಕರ್ತೃ ಭಾವವೇ ಲಯವಾದ ಮೇಲೆ ಇನ್ನು ಪ್ರವೃತ್ತಿ ಎಲ್ಲಿ? ಕರ್ಮವೆಲ್ಲಿ? ಅಕರ್ಮ ವೆಲ್ಲಿ? ಅಕರ್ಮವೆಂಬುದು ಕರ್ಮವನ್ನು ಪೂರ್ಣ ತ್ಯಾಗಮಾಡುವುದೆಂದಲ್ಲ. ಅಕರ್ಮವು "ಅಹಿಂಸೆ"ಯಂತೆ. "ಅಹಿಂಸಾವ್ರತ ಉಳ್ಳವನು ಪರರ ಮಾನ ಪ್ರಾಣರಕ್ಷಣೆಗಾಗಲಿ, ಅಶಕ್ತರ ಸಂರಕ್ಷಣೆಗಾಗಲಿ, ಸ್ವಪ್ರಾಣ ಮಾನ ಕಾಪಾಡ ಲಾಗಲಿ, ಶಸ್ತ್ರಾಸ್ತ್ರಗಳನ್ನು ಉಪಯೋಗಿಸಿ ಶತ್ರುವನ್ನೆದುರಿಸಿದರೆ ಕೂಡ ಅದು ಅಹಿಂಸೆಯಾಗಲಾರದು. ಅಗತ್ಯವಾಗಿ ಎಷ್ಟು ಹಿಂಸೆ ಎಸಗಬೇಕೋ ಅಷ್ಟೆ ಹಿಂಸೆ ಎಸಗಿ, ಅದರಿಂದ ಕೊಲೆ, ಹಿಂಸೆಯಾದರೂ ಅದು "ಅಹಿಂಸೆ"ಯೇ. ಹಾಗೆಯೇ ಅಕರ್ಮವೆಂದರೆ ದೇಹಧಾರಣೆಗಾಗಿ, ಪರೋಪಕಾರಕ್ಕಾಗಿ, ಈಶ್ವರ ಪ್ರೀತ್ಯರ್ಥವಾಗಿ ನಿಷ್ಕಾಮಕರ್ಮವನ್ನು, ಅಗತ್ಯವಾಗಿ ಬೇಕಾದ ಸತ್ಕರ್ಮವನ್ನೇ ಮಾತ್ರ ಎಸಗುತ್ತಿದ್ದರೂ ಅಕರ್ಮಿಯೇ. ಕರ್ಮವನ್ನೆಲ್ಲ ತ್ಯಜಿಸುವುದು, ಅಕರ್ಮವಲ್ಲ—ಕರ್ಮಸಂಗ ತ್ಯಾಜ್ಯ. ಅಕರ್ಮಕ್ಕೂ ನಿಷ್ಕಾಮಕರ್ಮಕ್ಕೂ ಭೇದವಿದೆ. ಇವು ಇಬ್ಬರು ಹೆಂಗಸರಂತೆ. ಒಬ್ಬಾಕೆಗೆ ಮಕ್ಕಳೇ ಇಲ್ಲ. ಇನ್ನೊ ಬ್ಬಾಕೆಯು ಮಕ್ಕಳನ್ನು ಹೆತ್ತು ಕಷ್ಟಸುಖಗಳನ್ನನುಭವಿಸಿ ಎಲ್ಲರನ್ನೂ ಕಳೆದು ಕೊಂಡು ಮಕ್ಕಳಿಲ್ಲದವಳಾಗಿದ್ದಾಳೆ. ಇಬ್ಬರೂ ಒಂದೇ ಎಂದು ಹೇಗೆ ಹೇಳ ಲಾಗುತ್ತದೆ? ಇಬ್ಬರಿಗೂ ಮಕ್ಕಳಿಲ್ಲವಾದರೂ ಈಗ ಮಕ್ಕಳೇ ಇಲ್ಲದಾಕೆಯು ಮಕ್ಕಳ ಕಾಂಕ್ಷೆಯಲ್ಲಿ 'ದೇವರೇ, ಒಂದಾದರೂ ಮಗುವನ್ನು ಎತ್ತಿ ಮುದ್ದಾ ಡಲು ಕೊಡು', ಎಂದು ಒಳಗೊಳಗೆ ಪ್ರಾರ್ಥಿಸಿರುತ್ತಾಳೆ. ಮಕ್ಕಳನ್ನು ಹೊತ್ತು ಹೆತ್ತು ಸುಖಕಷ್ಟಗಳನ್ನನುಭವಿಸಿ ಎಲ್ಲರನ್ನೂ ಕಳೆದುಕೊಂಡವಳು 'ಸಾಕುಮಾಡಪ್ಪ, ಇನ್ನು ಮಕ್ಕಳನ್ನು, ದೇವರೇ' ಎಂದು ಪ್ರಾರ್ಥಿಸುವಳು.

ಇವಳದು ಅಭಾವವೈರಾಗ್ಯವಲ್ಲ. ಅಂತೆಯೇ ಧನಿಕನಾಗಿದ್ದು ಪಾಪರಾಗಿರುವವನೂ ಹಣವನ್ನೇ ಕಾಣದೆ ಮೊದಲಿನಿಂದ ಪಾಪರಾಗಿದ್ದವನೂ ಒಂದೇ ಅಲ್ಲ. ಧನಿಕನಾಗಿದ್ದವನಿಗೆ ಸಂಪಾದನೆ, ಖರ್ಚು, ಹಣ ವಿನಿಯೋಗದ ಕಷ್ಟಸುಖಗಳೆಲ್ಲ ಗೊತ್ತು.

ಈ ಕರ್ಮಮರ್ಮವೂ ಕರ್ಮಗತಿಯೂ ಅಗಾಧವಾಗಿರುವುದರಿಂದ ಬುದ್ಧಿವಂತನಾಗಿ ಯೋಗಿಯು ಯುಕ್ತಕರ್ಮವನ್ನು ಮಾಡಲು, ಈ ಕರ್ಮತತ್ತ್ವವನ್ನು ಸ್ವಾಮಿಯು ಆರುಕಾಲು ಮಣೆಯ ಮೇಲೆ ದೃಢವಾಗಿ ಪ್ರತಿಷ್ಠಿಸಿದ್ದಾನೆ. ಈ ಆರು ತತ್ತ್ವಗಳನ್ನು ತಿಳಿದು ಕರ್ಮಮಾಡಬೇಕೆಂದು.

ಅರವಿಂದರು ಈ ಕರ್ಮರಹಸ್ಯವನ್ನು "ಗೀತಾಸಂದೇಶ" "The message of Gita"ದಲ್ಲಿ ಸ್ವಾರಸ್ಯವಾಗಿ "Divine Worker" ಎಂದು ಕರ್ಮಯೋಗಿಯ ಮುಕ್ತಕರ್ಮಚಿಹ್ನೆಗಳನ್ನು ವಿವರಿಸಿದ್ದಾರೆ:

**ಒಂದನೆಯ ಚಿಹ್ನೆ:**—ತಾನು ಕರ್ತೃ, ನಾನು ಈ ಕೆಲಸ ನಿರ್ವಹಿಸುತ್ತಿದ್ದೇನೆ ಎಂಬ ಅಹಂಭಾವನೆ ತ್ಯಜಿಸಿರುವನು.

**ಎರಡನೆಯ ಚಿಹ್ನೆ:**—ಕರ್ತೃತ್ವ ತ್ಯಾಗಮಾಡಿದವನಿಗೆ ಫಲದಾಸೆಯು ಹುಟ್ಟುವುದೇ ಇಲ್ಲ. - ಆತ ಆಶಾರಹಿತನು. ಕೆಲಸ ಮಾಡುತ್ತಿದ್ದರೂ "ನ ಕಿಂಚಿತ್ ಕರೋತಿ."

**ಮೂರನೆಯ ಚಿಹ್ನೆ:**"ಅಪಾಪವಿದ್ಧಂ "Spiritual impersonality" ನಿತ್ಯತೃಪ್ತನಿರಾಶ್ರಯನಂತೆ 'ಶಾರೀರಂ ಕೇವಲಂ ಕರ್ಮ'–ಕರ್ಮದ ಅಲಿಪ್ತತೆಯ ಅಧ್ಯಾತ್ಮ ಒಳ್ಳೆಯದು ಕೆಟ್ಟದಾದುದರಿಂದ ಚಿತ್ತಚಾಂಚಲ್ಯವಿಲ್ಲದಿರುವುದು.

**ನಾಲ್ಕನೆಯ ಚಿಹ್ನೆ:**—ಸಮದರ್ಶಿತ್ವ: ಕಾರ್ಯದಲ್ಲಿ, ಎಲ್ಲಾ ಜೀವಿಗಳಲ್ಲಿ, ಫಲಾಫಲಗಳಲ್ಲಿ ಎಲ್ಲದರಲ್ಲೂ ಸಮದರ್ಶಿತ್ವ.

ದೈವಸಂಕಲ್ಪವು ಉದ್ದೇಶಿಸುತ್ತದೆ, ದೇಹಿಯಾದ ಪರಮಾತ್ಮನು ನಿರ್ವಹಿಸುತ್ತಾನೆ. ಪ್ರಕೃತಿಯು ಫಲಾನುಭವ ಮಾಡುತ್ತದೆ. (ಪರಮಾತ್ಮನ ಸೃಷ್ಟಿಚಕ್ರದಲ್ಲಿ ಫಲಾಫಲ ವಿನಿಯೋಗವಾಗುತ್ತೆ.) ಎಲ್ಲಾ ಒಂದೇ ಎನ್ನುವ ಸಮದರ್ಶಿತ್ವ ಎಂದು ಮುಕ್ತಕರ್ಮ ಶ್ಲಾಘನೆ ಮಾಡಿದ್ದಾರೆ.

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥೧೮॥

(೧) ಕರ್ಮರೂಪವಾದ ಶರೀರದಲ್ಲಿ ಅಕರ್ಮಸ್ವರೂಪನಾದ ಆತ್ಮನನ್ನು ಹೊರ ಗಡೆ ಶರೀರದ ಅಭಾವರೂಪವಾದ ಅಕರ್ಮದಲ್ಲಿ ನಿರೋಧರೂಪವಾದ ಅಂತ ರ್ವ್ಯಾಪಾರರೂಪವಾದ ಆತ್ಮನ ಕರ್ಮ ನೋಡಬೇಕು.

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥೧೯॥

(೨) ಸರ್ವಸಮಾರಂಭಗಳಲ್ಲೂ ಕಾಮಸಂಕಲ್ಪವರ್ಜಿತರಾಗಿರಬೇಕು. ನಾವು ಮಾಡುವ ವ್ರತ, ಪೂಜಾ, ಸ್ನಾನ ಪ್ರತಿಯೊಂದರಲ್ಲೂ "ಸಂಕಲ್ಪ" ಹೇಳದೆ ಮಾಡುವುದಿಲ್ಲ. "ಇಷ್ಟಕಾಮ್ಯಾರ್ಥಸಿಧ್ಯರ್ಥಂ" ಎಂದು ಸಂಕಲ್ಪ ಮಾಡಿಯೇ ಮುಳುಗು ಕೂಡ ಹಾಕುವುದು. ದಕ್ಷಿಣೆ ಹೆಚ್ಚಿಗೆ ಬರಲೆಂದು ಪುರೋಹಿತರೂ ಗಟ್ಟಿಯಾಗಿ ಸಂಕಲ್ಪಮಂತ್ರ ಹೇಳಿ—ಯಜಮಾನಸ್ಯ—ಸಕುಟುಂಬಸ್ಯ—ಸಪರಿವಾರಸ್ಯ ಇತ್ಯಾದಿ ಇತ್ಯಾದಿ, ಇಷ್ಟಕಾಮ್ಯ—ಸಮಸ್ತ ಕಾರ್ಯಸಿಧ್ಯರ್ಥಂ ಇತ್ಯಾದಿ ಇತ್ಯಾದಿ ಸೇರಿಸಿ, ಸಂಕಲ್ಪಮಂತ್ರ ಹೇಳುವರು. ಇದು ವಜಾ ಮಾಡ ಬೇಕು. ಕಾಮಸಂಕಲ್ಪ, ಸ್ವಾರ್ಥಫಲಾಪೇಕ್ಷೆಯಿಂದ ಯಾವ ವ್ಯಾಪಾರವೂ ಆರಂಭಿಸಬಾರದು. (೩) ಜ್ಞಾನಾಗ್ನಿಯಿಂದ ಸುಡಲ್ಪಟ್ಟ ಕರ್ಮವುಳ್ಳವನಾಗ ಬೇಕು. ಒಂದು ಕರ್ಮ ಮಾಡಬೇಕಾದರೆ ತನ್ನ ವಿವೇಕದಿಂದ ಅದರ ಬಲಾ ಬಲಗಳನ್ನು, ವಿವೇಕ ಅವಿವೇಕಗಳನ್ನು, ಮುಂದಾಗಬಹುದಾದ ಶುಭಾಶುಭ ಪರಂಪರೆಗಳನ್ನು ಆಲೋಚಿಸಿ, ಜ್ಞಾನವು ಸರಿಯೆಂದು ವಿಮರ್ಶಿಸಿ ನಿಶ್ಚಯಿ ಸಿದ ಕರ್ಮವನ್ನೇ ಮಾಡಬೇಕು. ಇತರವನ್ನು ಮಾಡಬಾರದು. ತೈತ್ತಿರೀಯ ದಲ್ಲಿ ಅದಕ್ಕಾಗಿಯೇ "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ, ನೋ ಇತರಾಣಿ, ಯಾನ್ಯಸ್ಮಾಕಗ್ಂ ಸುಚರಿತಾನಿ ತಾನಿತ್ವಯೋಪಾಸ್ಯಾನಿ, ನೋ ಇತರಾಣಿ" ಎಂದು ಗುರುಗಳು ಶಿಷ್ಯನಿಗೆ ಉಪದೇಶಿಸಿ ಅನುಶಾಸನಮಾಡಿರುವರು.

ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥೨೦॥

(೪) ಫಲದ ಸಂಗವನ್ನು ಬಿಟ್ಟು ಕರ್ಮ ಮಾಡಬೇಕು. ಆಗ ನಿತ್ಯತೃಪ್ತನೂ ನಿರಾಶ್ರಯನೂ ಆಗಿ, ಕರ್ಮದಲ್ಲಿ ಪ್ರಾರಬ್ಧಾನುಸಾರ ಪ್ರವರ್ತನಾಗಿ, ತಾನು ಏನೂ ಮಾಡುವವನಲ್ಲವೆಂಬ ಭಾವನೆ ಬರುತ್ತದೆ. ಫಲದ ಅಪೇಕ್ಷೆಯೇ ಇದ್ದರೆ ಕರ್ಮದಲ್ಲಿ ಆಸಕ್ತಿ ಕೂಡ ಇರುವುದಿಲ್ಲ. ನಿರೀಕ್ಷಿಸಿದ ಫಲ ಎಷ್ಟರ

ಮಟ್ಟಿಗೆ ಫಲಿಸುತ್ತದೆ ಎನ್ನುವುದೇ ನಿಗಾ. ಫಲಾಫಲಗಳ ಕಡೆಗೇ ಗಮನ ಕೊಡದೆ ನಿಶ್ಚಿತ ಕರ್ಮ ಮಾಡಬೇಕು. ಏನೇ ಆಗಲಿ, ಆಗ ನಿತ್ಯತೃಪ್ತನಾಗಿರುವನು. ಫಲದ ಫಲಿತಾಂಶದಿಂದಲ್ಲ; ತಾನು ತನ್ನ ಕರ್ಮವನ್ನು ಮಾಡಿದೆನೆಂಬ ತೃಪ್ತಿಯಿಂದಲೂ, ಆಶ್ರಯವಿಲ್ಲದೆಯೂ ಇರುವನು. ಪರರ ಆಶ್ರಯವೇ ಬೇಕಿಲ್ಲ. ಯೋಗವಾಸಿಷ್ಠದಲ್ಲಿ ನಿರ್ವಾಣಪ್ರಕರಣದ "ಸರ್ವಕರ್ಮಫಲತ್ಯಾಗೀ ನಿತ್ಯತೃಪ್ತೋ ನಿರಾಶ್ರಯಃ ನ ಪುಣ್ಯೇನ ನ ಪಾಪೇನ ಲಿಪ್ಯತೇ ನೇತರೇಣ ಚ" ಎಂಬ ಶ್ಲೋಕಾರ್ಥವೂ ಇದಕ್ಕೆ ಎಷ್ಟು ಹೋಲುತ್ತದೆ? ಈ ಕರ್ಮವನ್ನೆಲ್ಲ ಆ ಪ್ರಕರಣವಲ್ಲೂ ಮಹಾಕರ್ತಾ, ಮಹಾಭೋಕ್ತಾ, ಮಹಾತ್ಯಾಗಿಯ ವರ್ಣನೆಯಲ್ಲೂ ವಿವರಿಸಿವೆ. ಗೀತೆಯು ಈ ಸ್ಥಿತಪ್ರಜ್ಞನ ಲಕ್ಷಣವನ್ನೂ ಕರ್ಮಸನ್ಯಾಸವನ್ನೂ ಅಲ್ಲಿ ಮಾಡಿರು ವಜೀವನ್ಮುಕ್ತನ, (ಮಹಾಕರ್ತಾ, ಮಹಾಭೋಕ್ತಾ, ಮಹಾತ್ಯಾಗಿ)ಯ ಲಕ್ಷಣಗಳನ್ನು ತೆಗೆದುಕೊಂಡರೆ, ಅದ್ವೈತವನ್ನು ಸಾಧಿಸಿದ ಮಹಾಸ್ಥಿತಿಯು ಗೋಚರವಾಗುತ್ತದೆ. ಈ ತತ್ತ್ವಾರ್ಥಗಳು ಒಂದೇ ಎನ್ನುವಷ್ಟರ ಮಟ್ಟಿಗೆ ಹೋಲುತ್ತವೆ

ಜಯಪುರದ ಗೋವಿಂದನ ಸುಪ್ರಸಿದ್ಧ ಅರ್ಚಕರಿಗೆ ಜಯಪುರದ ರಾಜರು ಹೇಳಿಕಳುಹಿಸಿದರಂತೆ. ಅರ್ಚಕರು ದೇವರ ಸೇವೆಯಲ್ಲಿ ನಿರತರಾಗಿ "ರಾಜರೇ ಅಗತ್ಯವಿದ್ದರೆ ಬರಲಿ, ಪುರಸತ್ತಿಲ್ಲ" ಎಂದು ಹೇಳಿಕಳುಹಿಸಿದರಂತೆ. ರಾಜರು ಇದಕ್ಕೆ ಉಪಾಯ ನೋಡಿ, ಅರ್ಚಕರಿಗೆ ಮದುವೆಮಾಡಿಸಿಬಿಟ್ಟರಂತೆ. ಅನಂತರ ಅರ್ಚಕರು, ರಾಜರು ಹೇಳಿಕಳುಹಿಸದೆಯೆ ಪ್ರಸಾದವನ್ನು ತೆಗೆದುಕೊಂಡು ಹೋಗಿ ಆಶೀರ್ವದಿಸಲು ಅರಮನೆ ಬಾಗಿಲಲ್ಲಿ ಕಾದಿರುತ್ತಿದ್ದರಂತೆ, ರಾಜಾಶ್ರಯಕ್ಕಾಗಿ. ನಿರಾಶ್ರಯರಾಗಿದ್ದವರು ಈಗ "ಅದು ಬೇಕು, ಇದು ಬೇಕು" ಎಂದು ಯಾಚಿಸಲು ರಾಜಾಶ್ರಯವನ್ನು ತೃಪ್ತಿಯಿಲ್ಲದೆ ಹುಡುಕಿಕೊಂಡು ಹೋಗುತ್ತಿದ್ದರು. ನಿತ್ಯತೃಪ್ತರಿಗೆ ಪರರ ಆಶ್ರಯವೇತಕ್ಕೆ? ನಿರಾಶ್ರಯರು ಅಂಥ ಫಲಸಂಗ ಬಿಟ್ಟು, ನಿತ್ಯತೃಪ್ತರಾಗಿ, ನಿರಾಶ್ರಯರಾಗಿ ಯಾವ ಕರ್ಮದಲ್ಲಿ ಪ್ರವೃತ್ತರಾದರೂ, ಏನೂ ಮಾಡುವವರಲ್ಲವೆಂದು ತಿಳಿಯತಕ್ಕದ್ದು.

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥೨೧॥

(೨೧) ಕೇವಲ ಶರೀರನಿರ್ವಾಹಕ ಕರ್ಮವನ್ನು ಮಾತ್ರ ಆಶಾರಹಿತನಾಗಿ,

ಚಿತ್ತವನ್ನು ಸ್ವಾಧೀನದಲ್ಲಿಟ್ಟುಕೊಂಡು, ಸರ್ವಪರಿಗ್ರಹವನ್ನೂ (ಇತರರು ಕೊಡುವುದನ್ನು ತೆಗೆದುಕೊಳ್ಳುವುದು) ಬಿಟ್ಟು ಕಿಲ್ಬಿಷವಿಲ್ಲದೆ (ಈಷಣಾತ್ರಯ ಬಿಟ್ಟು) ಮಾಡುವವನು ಪಾಪ ಹೊಂದುವುದಿಲ್ಲ. ಕೇವಲ ಶರೀರನಿರ್ವಾಹಕ ನಾಗಿ ಯಾವನಾಗುತ್ತಾನೆಯೋ ಆತನಿಗೆ ಇನ್ನು ಇತರ ಆಸೆಗಳೆಲ್ಲಿ? ಆತನಿಗೆ ಇತರರಿಂದ ಏನು ತಾನೆ ಬೇಕಾದೀತು? "ತ್ಯಕ್ತಸರ್ವಪರಿಗ್ರಹಃ"ದಲ್ಲಿ ಈಶಾ ವಾಸ್ಯದ "ಮಾ ಗೃಧಃ ಕಸ್ಯಸ್ವಿದ್ಧನಂ" ಇತರರ ವಸ್ತು ಅಪೇಕ್ಷೆ ಆಸೆ ಇಲ್ಲದಿರು ವುದಕ್ಕಿಂತ ಒಂದು ಮೆಟ್ಟಲು ಮೇಲೆನಿಸುತ್ತದೆ. ಇತರರ ವಸ್ತುವನ್ನು ಅಪೇಕ್ಷಿ ಸುವುದಿರಲಿ, ಅವರಾಗಿ ಕೊಟ್ಟರೂ ಬೇಡವೆಂದು ತೆಗೆದುಕೊಳ್ಳದ ಮನೋ ವೃತ್ತಿ. ಮಹಾತ್ಮಾ ಗಾಂಧಿಯವರು ಕಳುವಿನ ಮೇಲೆ ಒಂದಾವರ್ತಿ ಹರಿಜನ ಪತ್ರಿಕೆಯಲ್ಲಿ ಬರೆಯುತ್ತಾ ಅತಿ ಧರ್ಮಸೂಕ್ಷ್ಮದ ಕೊನೆಗೆ ಬಂದು, ಹಗಲು ದರೋಡೆಯಿಂದ ಶುರುಮಾಡಿ, ಮೆಟ್ಟಲುಮೆಟ್ಟಲಾಗಿ ಕಾಣದ ಕಳ್ಳತನ, ಅಧಿಕಾರದಲ್ಲಿ ತಮ್ಮ ಸ್ವಾಧೀನದಲ್ಲಿರುವ ವಸ್ತುಗಳ ದುರುಪಯೋಗದಿಂದ ಸ್ವಾರ್ಥಕ್ಕಾಗಿ ಉಪಯೋಗ ಮಾಡುವುದು, ಸಂಭಾವನೆಯೆಂದು (Commission) ಅಲ್ಲದ ಸಲ್ಲದ ಹಣ ಸ್ವೀಕಾರಮಾಡುವುದು, ವ್ಯಾಪಾರದ ಹೆಸರಿನಲ್ಲಿ ಸುಳ್ಳು ಬೆಲೆ ಹೇಳಿ ಅತ್ಯಗತ್ಯವಾಗಿ ಬೇಕಾದವರಿಂದ ಹೆಚ್ಚು ಮಿತಿಮೀರಿ ಲಾಭ ಗೊಳ್ಳುವುದು ಮೊದಲಾಗಿ ಎಲ್ಲ ಕಳ್ಳತನವೇ ಎಂದು ತೋರಿಸುತ್ತ, "ತನ್ನ ಕೇವಲ ಶರೀರಪೋಷಣೆಗೆ ಅತ್ಯಗತ್ಯವಾಗಿ ಯಾವುದು ಬೇಕಿಲ್ಲವೋ ಅಂತಹ ಹೆಚ್ಚಿಗೆ ಕಿಂಚಿತ್‌ವಸ್ತುವನ್ನು ಮನದಲ್ಲಾಗಲಿ ಬೇಕೆಂದು ಇಚ್ಛಿಸುವುದು ಕೂಡ ಕಳ್ಳತನ" ಎಂದು ಕೊನೆಮುಟ್ಟಿಸಿದ್ದರು. ಈ ತತ್ತ್ವ, ಈ ಕರ್ಮ, ಸೂಕ್ಷ್ಮ. ಈ ಅಂತರ್ಮರ್ಮ ಹೇಗೆ ಗ್ರಹಿಸಿದ್ದರೂ ಅದೇ ಜ್ಞಾನ.

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥೨೨॥

(೬) ದ್ವಂದ್ವಾತೀತನು ಮತ್ಸರವಿಲ್ಲದೆ ಯದೃಚ್ಛಾಲಾಭಸಂತುಷ್ಟಿಯ ಸಿದ್ಧಾ ಸಿದ್ಧತೆಯ ಸಮತ್ವದಿಂದ ಕರ್ಮ ಮಾಡಿದರೆ ಬಂಧನಿರುವುದಿಲ್ಲ. "ಸಮತ್ವಂ ಯೋಗ ಉಚ್ಯತೇ" ಎಂದು ಹೇಳಿದೆಯಲ್ಲಾ ಅದರ ತಾತ್ಪರ್ಯ—"ಸಮಃ" ದೈವಕೃಪೆಯಿಂದ "ಕಿಂಚಿತ್" ಆಗುವ ಲಾಭಸಂತೃಪ್ತಿ, ಈಶ್ವರಪ್ರಸಾದರೂಪ ಸಿದ್ಧಿಯಾಗಲಿ, ಸಿದ್ಧಿಯಾಗದಿರಲಿ, ನಮ್ಮ ಪ್ರಾರಬ್ಧಫಲವಾಗಿ ಲಭಿಸಿದುದಕ್ಕೆ

ಕಡಮೆಯಾಗಲಿ ಹೆಚ್ಚಾಗಲಿ, ದ್ವಂದ್ವಾತೀತನಾಗಿ ಪರರಿಗೆ ಲಭಿಸಿರುವುದನ್ನು ಕಂಡು ಮತ್ಸರಪಡದೆ ಸಮವಾಗಿರಬೇಕು. ಈ "ವಿಮತ್ಸರಃ"ವನ್ನು "ಸಮಃ" ಹಿಂದೆ ಎಷ್ಟು ಚಮತ್ಕಾರದಿಂದ ಸೇರಿಸಿಬಿಟ್ಟ ಸ್ವಾಮಿ! ಇದೇ ಅತೃಪ್ತಿಗೆ, ಆಸೆಗೆ, ಆಶ್ರಯಕ್ಕೆ ಕಾರಣ. ನಮಗೆ ಯಥೇಚ್ಛವಾಗಿ ಫಲ ಒದಗಿರಬಹುದು, ನಮಗೆ ಸಲ್ಲಬೇಕಾದುದಕ್ಕಿಂತ ಹೆಚ್ಚಾಗಿ ಸಂದಿರಬಹುದು. ನಮ್ಮ ನೆರೆಯುವ ನಿಗೆ ಪ್ರಾಪ್ತವಾಗಿರುವ ಯಾವುದಾದರೂ ಫಲದಿಂದ ನಾವು ಮಾತ್ಸರ್ಯ ಹೊಂದಿ, ಅತೃಪ್ತಿ ಹೊಂದಿ, ಸಂಕಟಕ್ಕೊಳಗಾಗುತ್ತೇವೆ. ಬೇಕಾದಷ್ಟು ಸೀರೆ ಯಿದೆ ನನ್ನ ಭಾರ್ಯೆಗೆ—ಪೆಟ್ಟಿಗೆಯ ತುಂಬ. ಆದರೂ ಪಕ್ಕದ ಮನೆಯಾಕೆ ತೆಳುವಾಗಿ ನವುರುನವುರಾಗಿ ಮೈಕಾಣುವ "ಗಾಜ್" ಸೀರೆ ತೆಗೆದುಕೊಂಡು ಬಿಟ್ಟಿರುವುದು ನೋಡಿ, ಅದು ತನಗೂ ಬೇಕೆಂಬ ಆಸೆ. ಪರರು ಕಾರಿನಲ್ಲಿ ಓಡಾಡುತ್ತಾರೆ, ನಮಗಿಲ್ಲವಲ್ಲ ಎಂಬ ಮತ್ಸರ. ದೇವರು ನಮಗೆ ಕಾರು ಕೊಡದಿದ್ದರೆ, ದೃಢವಾದ ಕಾಲು ಓಡಾಡಲು ಕೊಟ್ಟಿದ್ದಾನಲ್ಲಾ ಎಂಬ ಸಂತುಷ್ಟಿ ಇಲ್ಲ. ಈ ಮತ್ಸರ—ಇತರರಿಗಿರುವುದೆಂದು ನಾವು ಭಾವಿಸಿರುವ, ನಮಗೆ ಅಭಾವವೆಂದು ಕರುಬುವ ಈ ಭಾಗ್ಯ—ಅದರಿಂದ ತಾನೆ ಅವರಿಗೆಷ್ಟು ಕಷ್ಟವಿದೆ ಎಂದು ಕೂಡ ಯೋಚಿಸದೆ ನಮ್ಮ ಕರ್ತವ್ಯದೃಷ್ಟಿಯನ್ನೆ ಬದಲಾಯಿಸುತ್ತದೆ. ಮತ್ಸರದಿಂದ ಎಷ್ಟು ಅನರ್ಥಪರಂಪರೆಗಳು ಸಂಭವಿಸುವುವೆಂದು ಎಂದಾದರೂ ಯೋಚಿಸಿದ್ದೇವೆಯೆ? ನಮಗಿಂತ ದೈವಕೃಪೆಗೆ ಹೆಚ್ಚು ಪಾತ್ರರಾಗಿ, ಹೆಚ್ಚು ಅನುಕೂಲಸ್ಥರಾದವರನ್ನು ಕಂಡು ಅಕಾರಣವಾಗಿ ನಾವು ಎಷ್ಟು ಕರುಬುತ್ತೇವೆ? ಇದೇ ಎಲ್ಲಾ ಪೈಪೋಟಿಗೂ, ಯಾವ ಮಾರ್ಗದಿಂದಲಾದರೂ ನಮ್ಮ ಮತ್ಸರಕ್ಕೆ ಗುರಿಯಾದವನನ್ನು ಬೀಳಿಸಲು ದುಷ್ಪ್ರಯತ್ನಗಳಿಗೂ ಕಾರಣವಾಗುತ್ತದೆ. ಜಗಳಗಳಿಗೆ, ಮನಸ್ತಾಪಗಳಿಗೆ ಎಡೆ ಕೊಡುತ್ತದೆ. ಮತ್ಸರದಿಂದಲೇ, ಗಂಡು ಹೆಣ್ಣುಗಳಿಗೂ, ಪರಸ್ಪರ ಅವರುಗಳಲ್ಲೂ ಎಷ್ಟು ಕೊಲೆಗಳು ಕೂಡ ಸಂಭವಿಸು ತ್ತವೆ! ಇದರಿಂದ ಮನಸ್ಸಿನ ಶಾಂತಿಯ ಮೇಲೆ ಎಷ್ಟು ಕೆಟ್ಟ ಪರಿಣಾಮವಾಗು ತ್ತದೆ. ಮತ್ಸರ ಪ್ರವೇಶಿಸಿದರಾಯಿತು, ಶಾಂತಿಭಂಗಕ್ಕೆ ಅಂಕುರ. ಮನದಲ್ಲಿ ಆದರ ತಳಮಳ. ಅದಕ್ಕಾಗಿ ಹೆಚ್ಚು ಎಚ್ಚರಿಕೆಯಿಂದ ವಿಶಾಲವಾದ ಸಹನೆಯ ಮನೋವೃತ್ತಿಯನ್ನೇ ಅಭ್ಯಸಿಸುತ್ತ, ಮತ್ಸರದ ಸರ್ಪವು ತಲೆಹಾಕಿದರೆ ತುಳಿದು ನಿರ್ನಾಮಮಾಡುವ, ಸರ್ವರ ಅಭ್ಯುದಯದಲ್ಲೂ ಸಂತೋಷಿಸುವ ಮನೋ

ವೃತ್ತಿಯನ್ನೇ ಪ್ರಯತ್ನಿಸಬೇಕು. ಈ ಕೊನೆಯ "ಸಮಃ" ಬಹು ಮುಖ್ಯ ವಾಗಿದೆ.

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥

ಈ ಮುಖ್ಯಾಂಶಗಳನ್ನನುಸರಿಸಿ ಮಾಡುವ ಸಂಗರಹಿತವಾದ, ಸ್ವತಂತ್ರವಾದ (ಮುಕ್ತಸ್ಯ) ಜ್ಞಾನದಲ್ಲಿ ಸ್ಥಾಪಿತವಾಗಿರುವ ಅಂತಃಕರಣ (ಚೇತಸ)ದಿಂದ ಪರಾರ್ಥವಾಗಿ (ಯಜ್ಞಾಯಾಚರತಃ ಎನ್ನುವದಕ್ಕೆ ಯಾವಾಗಲೂ ಸ್ವಾರ್ಥ ಬಿಟ್ಟು ಪರಾರ್ಥ Sacrifice ಎಂಬುದೇ ಭಾವ) ಈಶ್ವರ ಪ್ರೀತ್ಯರ್ಥವಾದ ಕರ್ಮವು ಬಂಧನಕರ್ಮವಾಗದು. "ಸಮಗ್ರಂ ಪ್ರವಿಲೀಯತೆ" ಸಮಗ್ರಹಿತ ಕರಾರ್ಥವಾಗಿ (contribution to the cosmic action—merging into the whole) ಸ್ವಯಂ ವಿಲಯಭಾವವನ್ನು ಹೊಂದುತ್ತದೆ. ಆಗ ಫಲ ವೊಂದೇ ಅಲ್ಲ, ಕರ್ಮಕ್ಕೆ ಗುಲಾಮನಾಗುವುದೂ ತಪ್ಪುತ್ತೆ. "ತನುಮನಧನ ಗಳೆಲ್ಲವನ್ನು ನಿನ್ನ ಚರಣಕ್ಕೊಪ್ಪಿಸಿದ ಬಳಿಕ, ಮರಳಿ ಮರಳಿ ಎನ್ನ ಮರುಳು ಮಾಡುವರೆ? ಸರಕು ಒಪ್ಪಿಸಿದ ಮೇಲೆ ಸುಂಕವುಂಟೇ ದೇವ? ಕರುಣಾಕರ, ನಿನ್ನ ಚರಣದಡಿಯೊಳಿಟ್ಟು ಕಾಯೋ" ಎಂದು ಪುರಂದರದಾಸರು ಹಾಡಿರು ವಂತೆ, ಸರಕನ್ನೇ ಅವನಿಗೊಪ್ಪಿಸಿ "ಕೃಷ್ಣಾರ್ಪಣಮಸ್ತು" ಎಂದು ಕರ್ಮಕ್ಕೆ ಅರ್ಘ್ಯಕೊಟ್ಟಮೇಲೆ ಇನ್ನು ಸುಂಕವೆಲ್ಲಿಯದು? ಫಲಾಪೇಕ್ಷೆ ಎಲ್ಲಿಯದು? ಕರ್ಮವೇ ನಮ್ಮದಲ್ಲದ ಮೇಲೆ ಫಲ ನಮಗೇಕೆ?

'ಮುಕುಂದಮಾಲಾ' ಸ್ತೋತ್ರದಲ್ಲಿ ಹೇಳಿರುವಂತೆ "ಯತ್ಕೃತಂ, ಯತ್ಕರಿಷ್ಯಾಮಿ, ತತ್ಸರ್ವಂ ನ ಮಯಾ ಕೃತಂ. ತ್ವಯಾ ಕೃತಂ ತು, ಫಲ ಭುಕ್ ತ್ವಮೇವ" ಎಂದು ಮಹದಾತ್ಮನಿಗೆ ಫಲಾರ್ಪಣೆ; ಫಲ ಉಣಲು ಪರರಿಗೆ ಬಿಟ್ಟು, 'ನಾನು ಮಾಡಿದುದು, ಮಾಡುವುದು, ಯಾವುದೂ ನಾನು ಮಾಡಿದುದಲ್ಲ, ನೀನೇ ಮಾಡಿದುದು. ಪುನಃ ಪುನಃ ನಾನು ನನ್ನದು ಎಂದು ಮರುಳುಮಾಡಬೇಡ, ಕರ್ಮವೂ ನಿನ್ನದೇ ಫಲವೂ ನಿನ್ನದೇ' ಎಂದು ಈಶ್ವರಾ ರ್ಪಣಮಾಡಿ "ಇದಂ ನ ಮಮ" ಎಂದು ಕರ್ಮಾಂತ್ಯದಲ್ಲಿ, ಫಲ ಅನುಭವಿಸು ವಾಗ ಕೂಡ ಹೇಳಿಕೊಂಡು ಪಾಠಮಾಡುವುದೇ—ಕರ್ಮಜ್ಞಾನ.

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥೨೪॥

ಆಗ “ಅರ್ಪಣಮಾಡುವುದೂ ಬ್ರಹ್ಮ, ಅರ್ಪಿಸುವುದೂ (ಹವಿ) ಬ್ರಹ್ಮ, ಒಪ್ಪಿಸಿಕೊಳ್ಳುವ ಅಗ್ನಿಯೂ (ಪಾತ್ರವೂ) ಬ್ರಹ್ಮ, ಆಹುತಿಯು (ಅನುಭವಿಸುವುದೂ) ಬ್ರಹ್ಮ, ಎಲ್ಲದರಲ್ಲೂ ಅಡಗಿರುವುದೂ ಸ್ವೀಕರಿಸುವುದೂ ಬ್ರಹ್ಮವೇ” ಎಂಬ ಭಾವದಿಂದ ಮಾಡಿದುದು. “ಬ್ರಹ್ಮಕರ್ಮ”ದಲ್ಲಿಯೇ “ಸಮಾಧಿ” ಎಂದರೆ ಐಕ್ಯಹೊಂದಿ, ವ್ಯಕ್ತಿಕರ್ಮವೂ ಮಹದ್ವ್ಯಕ್ತಿಯ ನಿರಂತರಕರ್ಮದಲ್ಲಿ ಒಂದಾಗಿ ಪರಿಣಮಿಸಿ, ಲೋಕಸಂಗ್ರಹವಾಗಿ ಈಶ್ವರಪ್ರೀತಿಯಾಗುವುದು.

ಅರ್ಪಣಮಾಡುವ ಶಕ್ತಿ, ಮಾಡುವವನ ಆಂತರ್ಯದಲ್ಲಿ ಅಡಗಿರುವ ಬ್ರಹ್ಮಶಕ್ತಿ, ಎಲ್ಲೆಲ್ಲಿಯೂ ಅಡಗಿರುವ ಬ್ರಹ್ಮಶಕ್ತಿ, ಎಲ್ಲೆಲ್ಲಿಯೂ ಅಡಗಿರುವ ವಿಶಾಲಸೃಷ್ಟಿಯ ಮಹದಾತ್ಮಶಕ್ತಿಯ ಅಂಶ. ಅರ್ಪಣವಸ್ತುವೂ ಬ್ರಹ್ಮವಸ್ತುವಿನ ಅಂಶವೇ, ಅರ್ಪಣಮಾಡುವ ವ್ಯಕ್ತಿಯೂ ಮನುಷ್ಯನಲ್ಲಿ ಐಕ್ಯವಾಗಿರುವ ಆ ದಾನಿಯ ದೈವೀ ಅಂಶವೇ; ಬ್ರಹ್ಮ ಜೀವಾತ್ಮ ಅರ್ಪಣವನ್ನು ಸ್ವೀಕರಿಸುವುದೂ ಸರ್ವವ್ಯಾಪಿಯಾದ ಬ್ರಹ್ಮನ ಅಂಶವೇ. ಹೀಗೆ ಎಲ್ಲ ಭಾಗಗಳೂ ಒಂದರಲ್ಲೇ ಬ್ರಹ್ಮಸಮಾಧಿ ಹೊಂದುವುವು.

ಈ ಮಂತ್ರವನ್ನು ಭೋಜನಾರಂಭದಲ್ಲಿ ಎಷ್ಟೋ ಜನ ಜಪಿಸುವರು: “ಅನ್ನಪೂರ್ಣೇ ಸದಾಪೂರ್ಣೇ, ಶಂಕರಪ್ರಾಣವಲ್ಲಭೇ ಜ್ಞಾನವೈರಾಗ್ಯ ಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತಿ” ಎಂದು. ಅನ್ನಪೂರ್ಣಾಷ್ಟಕದ ಶ್ರೀ ಆದಿ ಶಂಕರಾಚಾರ್ಯರ ಶ್ಲೋಕವನ್ನೂ ಜೊತೆಮಾಡಿ, ಕೇವಲ ನಮ್ಮ ನಿತ್ಯತೃಪ್ತಿಗಾಗಿ ಭೋಗ ಭೋಜನವನ್ನು ಕೂಡ “ಬ್ರಹ್ಮಾರ್ಪಣ”ವನ್ನಾಗಿ ಭಾವಿಸಿ, ಕೇವಲ ಈ ಹಸಿದ ಹಗೇವನ್ನು ತುಂಬುವುದಲ್ಲ, ಅಥವಾ ನಾಲಿಗೆ ಚಪ್ಪರಿಸಿಕೊಂಡು ರುಚಿಯನ್ನು ಅನುಭವಿಸುವುದಲ್ಲ. ಊಟ ಕೂಡ ಒಂದು ಯಜ್ಞ. ಜ್ಞಾನವೂ ವೈರಾಗ್ಯವೂ ಸಾಧಿಸಲಿ, ಅಭಿವೃದ್ಧಿಯಾಗಲಿ. ಈ ಬೊಜ್ಜು ಬೆಳೆಯಲಿ, ಈ ಕೊಬ್ಬು ಹೆಚ್ಚಲಿ, ಈ ಮಾಂಸವು ವೃದ್ಧಿಸಲಿ ಎಂದು ಸ್ವಾರ್ಥತೆಗಾಗಿ ದೇಹಾಭಿಮಾನಕ್ಕಲ್ಲ ಎಂದು ಭಿಕ್ಷಾರೂಪದಲ್ಲಿ ತಿಳಿದವರು ಭುಜಿಸುವರು.

ಕೂರ್ಮಪುರಾಣದಲ್ಲಿ ಹೇಳಿದೆ:—

ಬ್ರಹ್ಮಣಾದೀಯತೇದೇಯಂ ಬ್ರಹ್ಮಣೇ ಸಂಪ್ರದೀಯತೇ । ಬ್ರಹ್ಮೈವ ದೀಯತೇ ಚೇತಿ ಬ್ರಹ್ಮಾರ್ಪಣಮಿದಂ ಪರಂ । ನಾಹಂ ಕರ್ತಾ ಸರ್ವಮೇತದ್ ಬ್ರಹ್ಮೈವ ಕುರುತೇ ತಥಾ ಏತದ್ ಬ್ರಹ್ಮಾರ್ಪಣಂ ಪ್ರೋಕ್ತಾ ಮೃಷಿಭಿಸ್ತತ್ವದರ್ಶಿಭಿಃ । ಪ್ರೀಣಾತಿ ಭಗವಾನೀ

ಶಃ ಕರ್ಮಣಾನೇನ ಶಾಶ್ವತಃ । ಕರೋತಿ ಸತತಂ ಬುದ್ಧ್ಯಾ ಬ್ರಹ್ಮಾರ್ಪಣಮಿದಂ ಪರಂ ಯದ್ವಾ ಫಲಾನಾಂ ಸ ನಾ ಸನ್ಯಾಸಂ ಪ್ರಕುರ್ಯಾತ್ಪರಮೇಶ್ವರೇ । ಕರ್ಮಣಾ ಮೇ ತದ ಪ್ಯಾಹು ಬ್ರಹ್ಮಾರ್ಪಣಮನುತ್ತಮಂ ||

ಯಾವುದು ಪಡೆದರೂ ಅದು ನನಗೆ ಬ್ರಹ್ಮನೇ ಕೊಟ್ಟುದು, ನಾನು ಅದನ್ನು ಬ್ರಹ್ಮನಿಗೆ ಅರ್ಪಿಸುತ್ತೇನೆ. ನಾ ಅರ್ಪಿಸುವುದೆಲ್ಲ ಬ್ರಹ್ಮವೇ! ಈ ಪ್ರಕಾರ ಜ್ಞಾನಭಾವವೇ "ಬ್ರಹ್ಮಾರ್ಪಣ." ನಾ ಮಾಡದಿರುವುದೂ, ಸರ್ವವೂ ಬ್ರಹ್ಮ ಮಾಡುವುದೇ, ಎನ್ನುವ ಜ್ಞಾನಕ್ಕೆ ತತ್ತ್ವದರ್ಶಿ ಋಷಿಗಳು "ಬ್ರಹ್ಮಾರ್ಪಣ" ವೆನ್ನುವರು. ಈ ಪ್ರಕಾರ ಕರ್ಮದಿಂದ ಶಾಶ್ವತ ಭಗವಾನ್ ಈಶ್ವರ ಪ್ರಸನ್ನ ನಾಗುತ್ತಾನೆ. ಸದಾ ಈ ಪ್ರಕಾರ ಬುದ್ಧಿಯಿಂದ ಕರ್ಮಮಾಡುವುದಕ್ಕೆ "ಬ್ರಹ್ಮಾರ್ಪಣ" ಶ್ರೇಷ್ಠವಾದುದು (ಪರಂ) ಎನ್ನುವರು. ಸಕಲ ಕರ್ಮಫಲ ವನ್ನೂ ಬ್ರಹ್ಮಸಮರ್ಪಣೆ ಮಾಡುವುದು ಸರ್ವೋತ್ತಮ "ಬ್ರಹ್ಮಾರ್ಪಣ"ಎಂದು ಸಂಕೇತವು.

ಈ ಕರ್ಮಕಾಂಡಸಾರವೆಲ್ಲ ಪರಮಾತ್ಮ "ಬ್ರಹ್ಮಾರ್ಪಣ" ಒಂದೇ ಶ್ಲೋಕ ದಲ್ಲಿ ಅಡಗಿಸಿಬಿಟ್ಟನು.

ಶರಭೋಪನಿಷತ್ತಿನಲ್ಲಿ ಈ ಶ್ಲೋಕವು ಅಕ್ಷರಶಃ ಬಂದಿದೆ;

"ಓಂ ಮಹಾಗ್ರಾಸಾಯ ಮಹಾದೇವಾಯ ಶೂಲಿನೇ ಮಹೇಶ್ವರಾಯ ಮೃಡಾಯ ತಸ್ಮೈ ರುದ್ರಾಯ ನಮೋ ಅಸ್ತು । ಏಕೋ ವಿಷ್ಣುರ್ಮಹದ್ಭೂತಂ ಪ್ರತ್ಯಗ್ಭೂತಾನ್ಯನೇಕಶಃ ತ್ರೀನ್‌ಲೋಕಾನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ||"
ಎನ್ನುವ ಶ್ಲೋಕಗಳನಂತರ ಬರುತ್ತೆ.

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ||೨೫||

ಬಹಿರ್ಯಜ್ಞ, ಅಂತರ್ಯಜ್ಞಗಳ ಭೇದ ಹೇಳುತ್ತಾನೆ. ದೇವನನ್ನು ಉದ್ದೇಶಿಸಿ ಕರ್ಮಯೋಗಿಗಳು ಯಜ್ಞವನ್ನು ಮಾಡುತ್ತಾರೆ. ಜ್ಞಾನಯೋಗಿಗಳು ಜ್ಞಾನ ಯಜ್ಞದಿಂದ ಬ್ರಹ್ಮರೂಪವಾಗಿರುವ ಅಗ್ನಿಯಲ್ಲಿ ಆತ್ಮನೆಂಬ ಹವಿಸ್ಸನ್ನು ಹವನ ಮಾಡುತ್ತಾರೆ. ಆತ್ಮ ಬ್ರಹ್ಮೈಕ್ಯಾನುಸಂಧಾನ ಮಾಡುತ್ತಾರೆ. ಸಮಷ್ಟಿಯಲ್ಲಿ ವ್ಯಷ್ಟಿಯನ್ನು ಐಕ್ಯಮಾಡುತ್ತಾರೆ. ಈ ಬ್ರಹ್ಮಯಜ್ಞವು "ಆತ್ಮಬ್ರಹ್ಮೈಕ್ಯಾನು ಸಂಧಾನವು" ಬಹಳ ಶ್ರೇಷ್ಠವಾದುದು. ಅದು ಜ್ಞಾನಯೋಗಿಗಳಿಗೆ ಸಾಧ್ಯ.

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ ವಿಷಯಾನ್ಯನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥೨೬॥

ಕೆಲವರು ಇಂದ್ರಿಯಗಳನ್ನು ಶ್ರೋತ್ರಾದಿ ತತ್ತದ್ವ್ಯಾಪಾರಗಳ ನಿರೋಧರೂಪ ದಿಂದ ಸಂಯಮಾಗ್ನಿಯಲ್ಲಿ ದಹಿಸುವರು. ಅನಿಷಿದ್ಧವಾದ (ಅನ್ಯವಾದ) ವಿಷಯ ಗಳನ್ನು (ಶಬ್ದಾದಿ) ಇಂದ್ರಿಯಾಗ್ನಿಯಲ್ಲಿ ದಹಿಸುವರು.

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥೨೭॥

ಮತ್ತೆ ಕೆಲವರು ಜ್ಞಾನೇಂದ್ರಿಯ ಕರ್ಮೇಂದ್ರಿಯ ಮತ್ತು ಪ್ರಾಣದ ಎಲ್ಲ ವ್ಯಾಪಾರಗಳನ್ನು ಜ್ಞಾನದಿಂದ ಪ್ರಜ್ವಲಿತವಾದ ಆತ್ಮಧ್ಯಾನವೆಂಬ ಅಗ್ನಿಯಲ್ಲಿ ದಹಿಸುವರು. "ನ ನಿರೋಧೋ ನ ಚೋನ್ನತಿ" ಎಂಬ ವಾಕ್ಯದಂತೆ, ಈ ತತ್ತದಿಂದ್ರಿಯಗಳನ್ನು ನಿರೋಧಿಸದಿದ್ದರೆ ಉನ್ನತಿಗೆ ಆಸ್ಪದವೇ ಇಲ್ಲ. ಈ ನಿರೋಧವು ಸತತವು ನಡೆಯುತ್ತಿರಬೇಕು. ಆತ್ಮಧ್ಯಾನವೇ ಜ್ಞಾನದಿಂದ ಪ್ರಜ್ವಲಿತವಾದ ಜ್ಞಾನದೀಪ. ಈ "ಜ್ಞಾನದೀಪಿತೇ" ಎನ್ನುವುದು ಶ್ರೀ ವಿದ್ಯಾರಣ್ಯರ ಮಹದ್‌ಗ್ರಂಥವಾದ "ಪಂಚದಶಿ"ಯನ್ನು ಜ್ಞಾಪಕ ತರುತ್ತದೆ. ಆ ಹದಿನೈದರಲ್ಲಿ ಐದು ವಿವೇಕಗಳೂ, ಐದು ದೀಪಗಳೂ, ಐದು ಆನಂದಗಳೂ ಸೇರಿ 'ಪಂಚದಶಿ'ಯಾಗಿ ಪರಿಣಮಿಸಿದೆ. ಇದು ಉತ್ಕೃಷ್ಟಜ್ಞಾನದಾಯಿನಿ; ಇದರಲ್ಲಿ ನಾಟಕದೀಪ, ತೃಪ್ತಿದೀಪ ಮೊದಲಾದವುಗಳಲ್ಲಿ ಮುಖ್ಯವಾದ "ಜ್ಞಾನದೀಪ"ವಿದೆ. ಇದು ಆತ್ಮಸಂಯಮಯೋಗವನ್ನು ಉಪದೇಶಿಸಿ, ತದನುಸಾರವಾಗಿ ಅದನ್ನು ಪಡೆಯಲು ಇತರ ಸಾಧನಗಳನ್ನು ಹೇಳುತ್ತದೆ. ಎಲ್ಲಕ್ಕೂ ಮುಖ್ಯವಾಗಿ ನಿರೋಧವನ್ನು ಸೂಚಿಸಿದೆ. ಇಂದ್ರಿಯನಿಗ್ರಹ, ಅವುಗಳು ಸ್ವೇಚ್ಛಾವ್ಯಾಪಾರದಲ್ಲಿ ತೊಡಗದಂತೆ ನಿರೋಧಿಸುವುದೇ ಎಲ್ಲ ಸ್ವಾರ್ಥತ್ಯಾಗಕ್ಕೂ (ಯಜ್ಞ = Sacrifice) ಮೊದಲನೆಯ ಪ್ರಕರಣ. ಅನಂತರ ಆತ್ಮಸಂಯಮಿಯಾಗಿ ತನ್ನಲ್ಲಿ ತಾನೇ ಆನಂದದಲ್ಲಿ ಇರುವವನು ವಿದ್ಯಾರಣ್ಯರ ಆನಂದಮೀಮಾಂಸೆಯ ಐದು ಆನಂದಗಳಲ್ಲಿ ಆನಂದನಲಿದಾಟ ತೃಪ್ತಿನೋಡ ಬೇಕು. ಜ್ಞಾನಪ್ರಕರಣದಲ್ಲಿ, ಅಭ್ಯಾಸಕ್ಕೆ ಯೋಗ್ಯವಾದ ಆತ್ಮಸಂಯಮ ಯೋಗದಿಂದ ಬರೆದ ಆತ್ಮದರ್ಶನಗ್ರಂಥ ಆ ಮಹಿಮರ ತೇಜೋಗ್ರಂಥ "ಪಂಚ ದಶಿ"ಯು ಉನ್ನತ ಸ್ಥಾನ ಪಡೆದಿದೆ; ತತ್ತ್ವವಿಚಾರವನ್ನೆಲ್ಲ ತಿಳಿಯದ

ಪಾಮರರಿಗೆ ಬಿಡಿಸಿ ಹೇಳಿದೆ. ಮುಖ್ಯವಾಗಿ ಉನ್ನತ ವಿಚಾರಗಳನ್ನು ಕಥೆಗಳೊಡನೆ, ಶಾಸ್ತ್ರ, ಸ್ಮೃತಿ, ಶ್ರುತಿವಾಕ್ಯಗಳೊಡನೆ ಹೆಣೆದು, ಅಜ್ಞಾನಿಗಳನ್ನು ಅಂಧಕಾರದಿಂದ ನಿವೃತ್ತಿ ಮಾಡಲು "ಜ್ಞಾನದೀಪ"ವನ್ನು ತಮ್ಮ ಸ್ವಾನುಭವದಿಂದಲೂ ತಪೋಜ್ಞಾನದಿಂದಲೂ ಯೋಗಬಲದಿಂದಲೂ ಹಚ್ಚಿ ಪ್ರಪಂಚವನ್ನು ಬೆಳಗಿಸಿದರು.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥

ಇನ್ನು ಯಜ್ಞಗಳ (Sacrifice) ವಿಧಗಳ ವಿವರಣೆ. ದ್ರವ್ಯಯಜ್ಞ, ತಪೋಯಜ್ಞ, ಸ್ವಾಧ್ಯಾಯಯಜ್ಞ, ಜ್ಞಾನಯಜ್ಞ ಮೊದಲಾದ ಶ್ರೇಷ್ಠವ್ರತಗಳನ್ನು ವಿಧವಿಧ ಜನರು ಮಾಡುವರು. ದ್ರವ್ಯಯಜ್ಞವನ್ನು ಐಶ್ವರ್ಯವಂತರು ಸತ್ಪಾತ್ರ ದಾನರೂಪವಾಗಿ, ಬಡವರಿಗೆ, ಬಳಲಿದವರಿಗೆ, ನರಳುತ್ತಿರುವವರಿಗೆ ನಿವಾರಣಾ ಸಹಾಯಾರ್ಥವಾಗಿ ತಮ್ಮ ಹಣವನ್ನು ಸದ್ವಿನಿಯೋಗವಾಗುವಂತೆ, ಪರಾರ್ಥಕ್ಕಾಗಿ (Sacrifice) ವಿನಿಯೋಗಿಸುವರು.

ತಪೋಯಜ್ಞವನ್ನು ಧ್ಯಾನದಲ್ಲಿ ಮುನಿಗಳು ಕುಳಿತು ಅಂತರಾತ್ಮನನ್ನು ಧ್ಯಾನಿಸುತ್ತ ತಪಸ್ಸಿನಲ್ಲಿ ಪರಾರ್ಥವನ್ನು (Sacrifice) ಆಚರಿಸುವರು. ತಪಃ ಎಂದರೆ ಕುದಿಯುವುದು, ಬೇಯುವುದು. ಇದರ ಅರ್ಥ—ಪರರಿಗಾಗಿ ನಮ್ಮ ಹೃದಯವು ಕುದಿಯಬೇಕು. ಸರ್ವರ ಹಿತವನ್ನು ಬಯಸಿ, ಸರ್ವರ ಕಷ್ಟ ನಿವಾರಣೋಪಾಯವನ್ನು ಧ್ಯಾನಿಸಬೇಕು. "ಸರ್ವೇಜನಾಃ ಸುಖಿನೋ ಭವಂತು" ಎಂದು ಸರ್ವಸನ್ಮಂಗಳವನ್ನು ಧ್ಯಾನಿಸಿ, ತಪಸ್ಸನ್ನಾಚರಿಸಬೇಕು. ಇದೇ ತಪಸ್ವಿಗಳಾದ ಮಹಾಋಷಿಗಳು ಅರಣ್ಯಗಳಲ್ಲಿ ಕುಳಿತು ಮಾಡುತ್ತಿರುವ ಯಜ್ಞ.

ಯೋಗವೆಂದರೆ ಪತಂಜಲಿ ಮಹರ್ಷಿಗಳ ರಾಜಯೋಗ. ಇದು ಅಷ್ಟಾವಧಾನದಿಂದ ಅಷ್ಟಾಂಗವಾಗಿದೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ—ಎಂಟು ಮೆಟ್ಟಲುಗಳು. ಯಮನಿಯಮಗಳಿಂದ ತನ್ನನ್ನು ತಾನು ಸ್ವಚ್ಛಮಾಡಿಕೊಂಡು ಮುಂದಿನ ಕೆಲಸಗಳಿಗೆ ಸಿದ್ಧಪಡಿಸಿಕೊಳ್ಳಬೇಕು. ಸತ್ಯ, ಋತ, ಅಹಿಂಸೆ, ಅಪರಿಗ್ರಹ, ಬ್ರಹ್ಮಚರ್ಯಗಳಿಂದ ಶರೀರ (ಬಾಹ್ಯ) ಶುದ್ಧಿಯಾಗುತ್ತದೆ. ಶುಚಿ, ತೃಪ್ತಿ, ಅಧ್ಯಯನ, ಭಕ್ತಿಗಳಿಂದ ಅಂತಃಸತ್ತ್ವಶುದ್ಧಿಯಾಗುತ್ತದೆ. ಇವುಗಳಿಂದ ಶರೀರವನ್ನು ಒಳಗೂ

ಹೊರಗೂ ಶುದ್ಧಿಮಾಡಿಕೊಂಡು ಆ ಶುದ್ಧದೇಹದಿಂದ ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳನ್ನು ಆಚರಿಸಬೇಕು. ಆಗ ಧಾರಣ, ಧ್ಯಾನ, ಸಮಾಧಿಗಳು ಸಿದ್ಧಿಸುತ್ತವೆ. ಈ ಮುನ್ನೆಲೆಯ ಅಭ್ಯಾಸಗಳನ್ನು ಪೂರ್ಣಗೊಳಿಸದೆ, ಅವಕ್ಕೆ ಕೈ ಕೂಡ ಹಾಕದೆ, ಎಲ್ಲರೂ ತಾವು ಯೋಗಾಭ್ಯಾಸ ಮಾಡುತ್ತೇವೆಂದು ಹೊರಟರೆ ಸಾಧ್ಯವಾದೀತೆ? ಇದರಿಂದಲೇ ಈಚಿನ ಕೆಲವು ಅಡ್ಡಕಸುಬಿನ ಅವ್ಯಾಪಾರಿಗಳಿಂದ ಯೋಗಾಭ್ಯಾಸಕ್ಕೆ ಕೆಟ್ಟಹೆಸರು ಬಂದಿದೆ. ಯಾವುದಾದರೂ ಒಂದು ಆಸನವನ್ನೋ ಶ್ವಾಸೋಚ್ಛ್ವಾಸನಿರೋಧವನ್ನೋ ಅಭ್ಯಸಿಸಿಬಿಟ್ಟು, ಧನಾರ್ಜನೆಗಾಗಿ ಅದನ್ನು ಎಲ್ಲೆಂದರೆ ಅಲ್ಲಿ ಪ್ರದರ್ಶಿಸುತ್ತ, ಅನೇಕ ವೇಳೆ ಕಾವಿಯನ್ನು ಧರಿಸಿ, ಗಡ್ಡವನ್ನು ಬೆಳಸಿ, ಜನಸಾಮಾನ್ಯರನ್ನು ಮರುಳು ಮಾಡುವವರೆಲ್ಲ ಯೋಗಿಗಳೆ? ನಿಜವಾದ ಯೋಗಿಗಳು ನಮ್ಮ ಕಣ್ಣಿಗೆ ಬೀಳುವುದಿಲ್ಲ. ಪ್ರದರ್ಶನ, ಧನಾರ್ಜನೆ ಇರಲಿ. "ಗುಪ್ತೋ ಮುಕ್ತಃ ಪ್ರಕಟೋ ಭ್ರಷ್ಟಃ" ಎಂದು ಈ ಸಾಧನೆಗಳೆಲ್ಲ ಗುಟ್ಟಾಗಿ ಆತ್ಮೋನ್ನತಿಗಾಗಿ ಮಾಡುವವನಿಗೆ ಸಿದ್ಧಿಸುವುದು—ಕ್ರಮೇಣ ಮುಕ್ತಿಹೊಂದುವನು. ಬೀದಿಬೀದಿಯಲ್ಲಿ ಅಹಂಕಾರ ಮಮಕಾರಗಳಿಗಾಗಿ ಪ್ರಕಟಿಸಿರುವವನಿಗೆ ಆಗಿರುವ ಸಿದ್ಧಿಯೂ ನಾಶವಾಗಿ ಭ್ರಷ್ಟನಾಗುವನು. ಇದೇ ಒಂದು ದೊಡ್ಡ ಶಾಸ್ತ್ರ. ಇದರ ಅಭ್ಯಾಸ ಅನಂತವಾಗಿದೆ. ಇದರ ಫಲಿತಾಂಶವೆಲ್ಲ ಎರಡನೇ ಸೂತ್ರದಲ್ಲಿ—"ಯೋಗಶ್ಚಿತ್ತವೃತ್ತಿನಿರೋಧಃ" ಯೋಗವು ಚಿತ್ತವೃತ್ತಿನಿರೋಧವು ಎನ್ನುವುದರಲ್ಲಿ ಅಡಕವಾಗಿದೆ. ಜ್ಞಾನ + ತಿತಿಕ್ಷೆ = (ಸೇರಿ) ನಿರೋಧವೆಂದು ಶ್ರೀ ವಿನೋಬಾರವರು ಹೇಳುತ್ತಾರೆ. ನಿಗ್ರಹವು ಮುಂದಿನ ಮೆಟ್ಟಲು. ಅನಂತರ ಸಂಯಮ—ವಿವೇಕ ವೈರಾಗ್ಯಕ್ಕೆ ಸೇರಿಸುತ್ತೆ. ಈ ಸಮಾಧಿವೃತ್ತಿಯಲ್ಲಿ ಏರಿಳಿತಗಳಿವೆ. ಅಂತರ್ಮುಖ ಬಹಿರ್ಮುಖಗಳಿವೆ. ಜಾರಲು ಅವಕಾಶವಿದೆ. ಆದರೆ ಜ್ಞಾನಸಮಾಧಿವೃತ್ತಿಯಲ್ಲಿಲ್ಲ. ಅದು ಸ್ಥಿತ. ಒಂದು ಸ್ಥಿತಪ್ರಜ್ಞಾವಸ್ಥೆ. ಏರಿಳಿತಗಳು ಇರುವುದಕ್ಕೆ ಅವಕಾಶವಿಲ್ಲ. ಒಂದೇ ಸಮನಾದ ಅಂತಃಪ್ರಕಾಶ.

> ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ।
> ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥೨೯॥
>
> ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ।
> ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥೩೦॥

ಈ ಯೋಗಾಭ್ಯಾಸದಲ್ಲಿ ಅಪಾನವೆಂಬ ಅಗ್ನಿಯಲ್ಲಿ ಪ್ರಾಣವನ್ನು, ಪ್ರಾಣದಲ್ಲಿ ಅಪಾನವನ್ನು ಹವನಮಾಡುವರು. ಪ್ರಾಣಾಪಾನಗಳನ್ನು ನಿರೋಧಿಸಿ ಎಲ್ಲ ವ್ಯಾಪಾರಗಳನ್ನೂ ಪ್ರಾಣದಲ್ಲಿ ಹವನಮಾಡುವರು. ನಿಯತಾಹಾರವುಳ್ಳವರಾಗಿ ಪ್ರಾಣವನ್ನು ಪ್ರಾಣದಲ್ಲಿ ಲಯಮಾಡುವರು. ಈ ಯೋಗಯಜ್ಞವನ್ನು ತಿಳಿದವರು ಅದರಿಂದ ಪಾಪಗಳನ್ನು ಹೋಗಲಾಡಿಸಿಕೊಳ್ಳುವರು. ಬ್ರಹ್ಮಚಾರಿಗಳು ಸ್ವಾಧ್ಯಾಯಯಜ್ಞನನ್ನಾಚರಿಸುವರು. ತೈತ್ತಿರೀಯದಲ್ಲಿ ಹೇಳಿದಂತೆ "ಸ್ವಾಧ್ಯಾಯಾನ್ಮಾಪ್ರಮದಃ; ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ" ಅನುಸರಿಸಿ ಸ್ವತಃ ಪಾಠಪ್ರವಚನಗಳಿಂದ ಜ್ಞಾನವೃದ್ಧಿಯನ್ನು ಮಾಡಿಕೊಳ್ಳುವರು.

ಸರಿಯಾದ ವಿದ್ಯಾರ್ಥಿಬ್ರಹ್ಮಚಾರಿಯು ಗುರುಮುಖದಿಂದ ಅವರ ವಿದ್ಯೆಯನ್ನೆಲ್ಲ ಕಲಿತು, ಅದನ್ನು ತನ್ನ ಸ್ವಂತವನ್ನಾಗಿ ಮಾಡಿ, ತಾನೂ ಮನನ ಅಭ್ಯಾಸದಿಂದ ಆ ವಿದ್ಯೆಯನ್ನು ಅಭಿವೃದ್ಧಿಮಾಡಿಕೊಂಡು, ಗುರುಪರಂಪರೆಯಿಂದ ಕಲಿತ ವಿದ್ಯೆಯು ಅಭಿವೃದ್ಧಿಯಾದ ಜ್ಞಾನವು ತನ್ನ ಸಾವಿನೊಡನೆಯೇ ಸಮಾಪ್ತಿಯಾಗಬಾರದೆಂದು, ಶಿಷ್ಯಪರಂಪರೆಯಲ್ಲಿ ಅದು ಅಭಿವೃದ್ಧಿ ಹೊಂದಿ, ಹೀಗೆ ಅಧಿಕವಾಗಿ ಜ್ಞಾನಪ್ರವಾಹ ಹರಿಯಲೆಂದು "ಆಮಾಯಂತು ಬ್ರಹ್ಮಚಾರಿಣ ಸ್ವಾಹಾ" ಎಂದು ಯಜ್ಞರೂಪದಿಂದ ಶಿಷ್ಯರನ್ನು ಬರಮಾಡಿಕೊಂಡು ವಿದ್ಯೆ ಹೇಳಿಕೊಡಲು ಹಾತೊರೆಯುತ್ತಿರುವರು. ಇದೇ ಸ್ವಾಧ್ಯಾಯಯಜ್ಞ. ಇದು ಸನಾತನಧರ್ಮದಲ್ಲಿ ನಮ್ಮ ಆರ್ಯಮಹರ್ಷಿಗಳು ತಪೋಯಜ್ಞವನ್ನು ಮಕ್ಕಳಾದ ನಮಗೆ, ಹೀನಬಾಳಿನ ಸಂತತಿಗೆ ಧಾರಾಪೂರ್ವಕ ಎರೆಯದಿದ್ದರೆ ನಮ್ಮ ಆಸ್ತಿಕಜ್ಞಾನವಾದರೂ ಎಲ್ಲಿರುತ್ತಿತ್ತು? ಭರತಖಂಡದಲ್ಲಿ ಈ ಸ್ಥಿತಿಯಲ್ಲಿ ಕೂಡ ತುಳುಕಾಡುತ್ತಿರುವುದು ಅವರ ಜ್ಞಾನಸಂಪತ್ತು. ಇದರಿಂದ ನಾವು ಕಲಿಯುವುದನ್ನು ಒಂದು ಯಜ್ಞವೆಂದೇ ಭಾವಿಸಬೇಕು. ಶ್ರದ್ಧೆಯಿಂದ ಕಲಿಯಬೇಕು. ಎಷ್ಟು ಜನ ವಿದ್ಯಾರ್ಥಿಗಳು ಈ ಧ್ಯೇಯ ಮರೆತು ಅಸಡ್ಡೆಯಿಂದ ವಿದ್ಯಾಭ್ಯಾಸಮಾಡುತ್ತಿಲ್ಲ? ಹಾಗೆ ಮಾಡಿದರೆ ವಿದ್ಯಾಧಿದೇವತೆಯು ಒಲಿಯುತ್ತಾಳೆಯೆ? "ಸುಖಾರ್ಥಿನಃ ಕುತೋ ವಿದ್ಯಾ, ಕುತೋ ವಿದ್ಯಾರ್ಥಿನಃ ಸುಖಂ" ಎಂಬ ವಾಕ್ಯದಂತೆ ಸುಖಲೋಲುಪ್ತಿಯಲ್ಲಿರುವ ನಮ್ಮ ಈಗಿನ ವಿದ್ಯಾರ್ಥಿಗಳಿಗೆ ವಿದ್ಯೆಯೆಲ್ಲಿಯದು? ವಿದ್ಯಾರ್ಥಿಯಾದವನು ಸುಖ ಮರೆಯಬೇಕು. ಸ್ವೇಚ್ಛೆ

ಯಾಗಿ ಹೋಟೆಲು ತಿಂಡಿ, ಕಾಫಿ, ಸಿನಿಮಾ, ಕಾಮೋದ್ರೇಕ ಚಿತ್ರ, ಗ್ರಂಥ ಗಳಲ್ಲೇ ಆಸಕ್ತಿ, ನಿಯಮವಿಲ್ಲದೆ ನಿದ್ರಾವಿಹಾರಗಳು, ಈ ಸುಖಗಳಲ್ಲಿ ಮನ ಬಿದ್ದವನಿಗೆ ವಿದ್ಯೆ ಎಲ್ಲಿಯದು? ನಿಯಮವೇ ಶ್ರೇಯಸ್ಸಿಗೆ ಅಡಿಗಲ್ಲು. ಸುಖ ವನ್ನು ಬಿಟ್ಟು ವಿದ್ಯಾರ್ಜನೆ ಮಾಡಬೇಕು. ಭಗವಂತ ಹೇಳುವಂತೆ ಇದೂ ಒಂದು ಯಜ್ಞವೇ.

ಸಂನ್ಯಾಸಿಗಳು ಜ್ಞಾನಯಜ್ಞವನ್ನು ವ್ರತವಾಗಿ ಆಚರಿಸುವರು. ಶ್ರೀಶಂಕರಾ ಚಾರ್ಯರೇ ಇದಕ್ಕೆ ಆದರ್ಶ. ಜ್ಞಾನಿಗಳಲ್ಲಿ ಮಹಾಜ್ಞಾನಿಗಳು. ಎಣೆಯಿಲ್ಲದ ಮಹಾಜ್ಞಾನವನ್ನೆಲ್ಲ ತಮ್ಮದೇ ಮಾಡಿಕೊಂಡ ಚಕ್ರವರ್ತಿಗಳು. ಜ್ಞಾನಕಾಂಡ ವಿವರಣೆಯೆಂದರೆ ಶ್ರೀ ಶಂಕರಪದ. "ಜ್ಞಾನಂ ಮಹೇಶ್ವರಾದಿಚ್ಛೇತ್, ಮೋಕ್ಷ ಮಿಚ್ಛೇತ್ ಜನಾರ್ದನ" ಸ್ಕಂದ ಪುರಾಣದ ಸೂತಸಂಹಿತೆಯಲ್ಲಿ ಉಲ್ಲೇಖ ವಾಗಿರುವಂತೆ ಜ್ಞಾನದಾನ ಮಹೇಶ್ವರನ ಇಚ್ಛೆ. ಮಹೇಶ್ವರನ ಅವತಾರವೇ ಆದ ಸ್ವಯಂ ಆಚಾರ್ಯ ಶಂಕರರು ಕೇವಲ ಪ್ರಜ್ಞಾನಘನ—ಜ್ಞಾನದ ಘನೀ ಭೂತರಾಗಿದ್ದುದೇನು ಹೆಚ್ಚು! ಮೋಕ್ಷಕ್ಕೆ ಇಚ್ಛೆಪಡಬೇಕಾದುದೇ ಇಲ್ಲ, ಜ್ಞಾನವೊಡನೆ ಜೀವನ್ಮುಕ್ತರಾಗಿ ಲೋಕಕಲ್ಯಾಣಕ್ಕೆ ಜೀವಿಸಿದವರು. ಇವರದು ಜ್ಞಾನಯಜ್ಞದ ಪರಮಾವಧಿ. ಇವರು ಅಭ್ಯಸಿಸದ ಯೋಗವಾವುದು? ಮಾಡದ ಲೋಕಕಲ್ಯಾಣವಾವುದು? ಆ ಕಾಲದಲ್ಲಿ ಇಡೀ ಭಾರತವರ್ಷವನ್ನೇ ತಮ್ಮ ಅಲ್ಪಾಯುವಿನಲ್ಲಿ ಸುತ್ತಿ, ತಮ್ಮ ಜ್ಞಾನವನ್ನು ಚೆಲ್ಲಿ ಬಿತ್ತಿ ಸ್ಥಾಪಿಸಿ ಕಾರ್ಯರೂಪ ಸ್ಥಿರಪಡಿಸಿ ಅನವರತ ನಡೆದುಬರುವುದಕ್ಕೆ ಮಠಸ್ಥಾಪನೆಯನ್ನು ಮಾಡಿ ಸನಾತನಧರ್ಮವನ್ನೇ ಪುನರುದ್ಧಾರ ಮಾಡಿದರಲ್ಲವೆ!

ಅಂತೆಯೇ ಇದೇ ಪಥದಲ್ಲಿ ನಮ್ಮ ಕಣ್ಣೆದುರಿನಲ್ಲಿ ಭರತವರ್ಷದ ಈ ಪತಿತ ದೆಸೆಯಲ್ಲಿಯೂ ಅಧರ್ಮಕಾಲದಲ್ಲೂ ಜ್ಞಾನಿಗಳು, ಇತ್ತೀಚೆಗೆ ಕಣ್ಮರೆಯಾದ ಶ್ರೀ ರಮಣರು, ಅರವಿಂದರು, ಗಾಂಧಿಯವರು, ವಿವೇಕಾನಂದರು, ಶ್ರೀ ರಾಮ ಕೃಷ್ಣರೇ ಆದಿಯಾಗಿ ಜ್ಞಾನಯಜ್ಞವನ್ನಾಚರಿಸುತಿದ್ದುದರಿಂದಲೇ, ಕಣ್ಣಿಗೆ ಬೀಳದ ಜೀವಿತದಲ್ಲಿರುವ ಇತರರೂ ಆಚರಿಸುತ್ತಿರುವುದರಿಂದಲೇ ನಮ್ಮ ಭೂಮಿಯು ಅವರ ಸುಕೃತ ಪುಣ್ಯದಿಂದ ಪುಣ್ಯಭೂಮಿಯಾಗಿ ಈಗಲೂ ಬೆಳಗು ತ್ತಿದೆ. ಈ ಜ್ಞಾನಯಜ್ಞದ ಪ್ರಕಾಶ ಬೆಳಗಲಿ, ಹೆಚ್ಚಲಿ, ಜನಸಾಮಾನ್ಯಕ್ಕೂ ಹರಡಲಿ!

ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।
ನಾಯಂ ಲೋಕೋऽಸ್ತ್ಯಯಜ್ಞಸ್ಯ ಕುತೋऽನ್ಯಃ ಕುರುಸತ್ತಮ ॥೩೧॥

ಯಾವ ವಿಧವಾದ ಯಜ್ಞಮಾಡಿದರೂ ಅದರ ಫಲವಿದ್ದೇ ಇದೆ. ಆ ಅಮೃತ ಪ್ರಾಯವಾದ ಫಲಪ್ರಾಪ್ತಿಯಿಂದ ಸನಾತನ ಬ್ರಹ್ಮನನ್ನು ಸೇರುವರು. ನಮ್ಮ ತತ್ತ್ವದರ್ಶಿಗಳ ಈ ಗೀತೆಯ ವಸ್ತುವೂ ಬ್ರಹ್ಮನೇ. ಅವುಗಳ ಗುರಿ ಮೋಕ್ಷ. ಆದುದರಿಂದ ನಮ್ಮ ಹಿಂದೂಧರ್ಮವು ಸನಾತನಧರ್ಮವೆಂದು ಹೇಳಲ್ಪಟ್ಟಿದೆ. ಮಾರ್ಗಗಳಷ್ಟೆ ಆದರೂ ಆ ಸನಾತನ ಬ್ರಹ್ಮದಲ್ಲಿ ಐಕ್ಯವಾಗುವುದದೇ ಸನಾತನ ಧರ್ಮದ ಗುರಿ. ಯಜ್ಞ (Sacrifice) ಮಾಡದವನಿಗೆ ಇಹವೂ ಇಲ್ಲ, ಪರವೂ ಇಲ್ಲ. ಈ ಲೋಕದಲ್ಲಿ ಫಲಪ್ರಾಪ್ತಿಯಾಗಬೇಕಾದರೂ ಮೇಲೆ ಹೇಳಿದ ರೀತಿಯಲ್ಲಿಯಾದರೂ ಒಂದು ದಾರಿ ಹಿಡಿದು ಸಾಧಿಸಿದರೇ ಇಹಸುಖ ವುಂಟು. ಇಹಕ್ಕೆ ಪ್ರಯತ್ನಿಸಲಾರದವನಿಗೆ ಇತರ ಲೋಕಗಳ ಕನಸು ತಾನೆ ಎಲ್ಲಿ? ಆದುದರಿಂದ ಅವರವರ ಯೋಗ್ಯತಾನುಸಾರ ಅನೇಕ ವಿಧ ಯಜ್ಞಗಳು ಹೇಳಲ್ಪಟ್ಟಿವೆ. "ನಿರ್ವಿಣ್ಣಾನಾಂ ಜ್ಞಾನಯೋಗಃ, ಕರ್ಮಯೋಗಸ್ತು ಕಾಮಿನಾಂ, ನ ನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಸ್ಯ ಸಿದ್ಧಿದಃ" ಎಂದು ಉದ್ಧವ ಗೀತೆಯಲ್ಲಿ ಹೇಳಿರುವಂತೆ ಅವರವರ ಅಂತಸ್ತಿಗೆ, ಅವರವರ ಪರಿಪಕ್ವ ಸ್ಥಿತಿಗೆ, ಅವರವರ ಯೋಗ್ಯತೆಗೆ, ಅವರವರ ಶಕ್ತಿಗೆ ತಕ್ಕಂತೆ ಯಾವ ರೀತಿಯಾದ ಮಾರ್ಗವನ್ನಾದರೂ ಅವಲಂಬಿಸಿ ಯಜ್ಞವನ್ನು ಮಾನವನು ಮಾಡಲೇಬೇಕು.

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥

ಅನೇಕ ವಿಧವಾದ ಈ ಯಜ್ಞಗಳು ಬ್ರಹ್ಮಮುಖದಿಂದ ವಿಸ್ತರಿಸಲ್ಪಟ್ಟವು. (ವೇದವೇದಾಂಗಗಳಲ್ಲಿ) ನಿರೂಪಿಸಲ್ಪಟ್ಟ ಕರ್ಮಮರ್ಮದಿಂದ ಅವುಗಳ ಸ್ವರೂಪ ವನ್ನು ತಿಳಿದು "ನಾನು ಅಕರ್ತ, ನನಗೆ ಕರ್ಮಗಳಲ್ಲಿ ಫಲಗಳಲ್ಲಿ ಆಸಕ್ತಿ ಇಲ್ಲ" ಎಂದು ಮಾಡಿದರೆ ಕರ್ಮಬಂಧನದಿಂದ ಮುಕ್ತನಾಗುವೆ.

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥೩೩॥

ದ್ರವ್ಯಯಜ್ಞಕ್ಕಿಂತಲೂ (ಇದು ಸಾಧಾರಣವಾದ ಎಲ್ಲ ಯಜ್ಞಗಳನ್ನೂ ಸೂಚಿಸತಕ್ಕ ವಾಚಕವಾಗಿದೆ) ಜ್ಞಾನಯಜ್ಞವು ಶ್ರೇಯಸ್ಕರವು. ಸರ್ವ

ಕರ್ಮಗಳೂ ಜ್ಞಾನದಲ್ಲಿ ಪರಿಸಮಾಪ್ತಿಹೊಂದುತ್ತವೆ. ನಾವು ಮಾಡುವ ಪ್ರತಿಯೊಂದು ಕರ್ಮವೂ, ಪ್ರತಿನಿತ್ಯವೂ ನಮಗೆ ಒಂದು ರೀತಿಯ ತಿಳಿವಳಿಕೆಯನ್ನು ಕೊಟ್ಟು ಜ್ಞಾನಾರ್ಜನೆಗೆ ಸಹಾಯವಾಗಿದೆ. ಕೆಟ್ಟಕರ್ಮ ಕೂಡ ನಮಗೆ ಪಾಠ ಕಲಿಸುತ್ತದೆ. ಈ ಕರ್ಮಗಳು ಪ್ರಸ್ತುತಃ ಕಾಮಾಸಕ್ತಿಯಿಂದಾಗಲಿ ಫಲಾಪೇಕ್ಷೆಯಿಂದಾಗಲಿ ಮಾಡಿದರೂ ಅವು ಕಾಮತೃಪ್ತಿಯನ್ನೋ ಫಲವನ್ನೋ ಕೊಟ್ಟರೂ, ಕೊಡದಿದ್ದರೂ ಒಂದು ತಿಳಿವಳಿಕೆಯನ್ನು ಕೊಟ್ಟೇಕೊಡುವುವು. ಆದುದರಿಂದ ಈ ಕರ್ಮಗಳು ಪರಿಸಮಾಪ್ತಿ ಹೊಂದುವುದು ಕಾಮದಲ್ಲಲ್ಲ, ಪ್ರತಿಫಲದಲ್ಲಲ್ಲ, ಜ್ಞಾನದಲ್ಲಿ. ಕರ್ಮವೂ ಜ್ಞಾನವೂ ಒಂದಲ್ಲ ಒಂದು ರೂಪ ತಾಳಿ, ಈ ನಾಲ್ಕರಲ್ಲಿ ಪರಿವರ್ತಿಸಬೇಕು.

೧. ಅಂತರ್ಮುಖ. Inversion.

೨. ಪರಾರ್ಥ (ಬಹಿರ್ಮುಖ) Conversion.

೩. ಸ್ವಾರ್ಥ (ಬಹಿರ್ಮುಖ) Diversion.

೪. ದುರ್ಮಾರ್ಗ (ಸ್ವೇಚ್ಛಾಪ್ರವರ್ತನೆ) Perversion.

ಇದರಲ್ಲಿ ಅಂತರ್ಮುಖನಾಗಿ ತನ್ನನ್ನು ತಾನು ತಿಳಿಯುವ ಜ್ಞಾನವೇ ಅತಿ ಶ್ರೇಷ್ಠವಾದುದು.

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥೩೪॥

ಅದು ತಿಳಿಯಬೇಕಾದರೆ ತತ್ತ್ವದರ್ಶಿಜ್ಞಾನಿಗಳ ಪಾದಕ್ಕೆ ಹೋಗಿ ಅಡ್ಡಬಿದ್ದು, ಸೇವೆಮಾಡಿ ಪುನಃ ಪುನಃ ಪ್ರಶ್ನಿಸಿ, ಆ ಅಂತರ್ಯಾಮಿಯ ಜ್ಞಾನವನ್ನು ಉಪದೇಶಪಡೆಯಬೇಕು. ಬ್ರಹ್ಮಮುಖದಿಂದ ವಿಸ್ತರವಾದ (ವೇದ) ತತ್ತ್ವಗಳನ್ನು ಗುರುಮುಖದಿಂದ ತಿಳಿಯಬೇಕು. ಸುಮ್ಮನೆ ಓದಿದರೆ ತಿಳಿಯುವುದಿಲ್ಲ. ತಮ್ಮದು ಮಾಡಿಕೊಂಡಿರುವವರಲ್ಲಿ ಹೋಗಿ ಅರಿತುಕೊಳ್ಳಬೇಕು.

ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥೩೫॥

ಆಗ ತತ್ತ್ವದರ್ಶಿಗಳಿಂದ ಉಪದೇಶಹೊಂದಿದರೆ ಆ ಆತ್ಮಜ್ಞಾನದಿಂದ ಸಮಸ್ತ ಭೂತಗಳಲ್ಲಿರುವ ಅಂತರಾತ್ಮನನ್ನೇ ತನ್ನಲ್ಲಿಯೂ ನನ್ನಲ್ಲಿ (ಭಗವಂತನಲ್ಲಿ)ಯೂ

ನೋಡುವ ದೃಷ್ಟಿ ಯಾವಾಗ ಪ್ರಾಪ್ತವಾಗುವುದೋ ಆಗ ಪುನಃ ಈ ರೀತಿಯಾದ ಅವಿವೇಕ (ಸಂಶಯ) ಮುಸುಕು, ಮರವೆ, ಮೋಹ ಬರುವುದಿಲ್ಲ.

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥೩೬॥

ಬ್ರಹ್ಮದಿಂದ ಕುಶದವರೆಗೂ ತನ್ನ ಆತ್ಮವನ್ನೇ ಕಾಣುತ್ತ "ವಾಸನಾತ್ ವಾಸುದೇವಸ್ಯ ವಾಸಿತಂ ತೇ ಜಗತ್ರಯಂ ಸರ್ವ ಭೂತನಿವಾಸೋಽಸಿ" ಎಂದು ಎಲ್ಲೆಲ್ಲದರಲ್ಲಿನ ವಾಸುದೇವನಿಗೂ ನಮಸ್ಕಾರ ಮಾಡುವವನಾಗುತ್ತಾನೆ. ಈ ಜ್ಞಾನ ಪಾಪ್ತವಾದರೆ, ಪಾಪಿಗಳಲ್ಲಿ ಅತಿ ಪಾಪಿಯಾದರೂ ಪಾಪಸಮುದ್ರವನ್ನು ದಾಟಲು ನಾವೆ ಸಿಕ್ಕಿದಂತೆಯೇ. ನಾವೆಯಿಲ್ಲದಿದ್ದರೆ, ಈಜು ಬಾರದಿದ್ದರೆ, ನಿಸ್ಸಹಾಯನಾಗಿ ಈ ದಡದಲ್ಲೇ ಕೂರಬೇಕಾಗಿತ್ತು. ಈಜು ಬಂದರೂ, ಆ ಮಹಾಸಮುದ್ರದಲ್ಲಿ ಶಕ್ತಿಯಿಲ್ಲದೆ ಕೈಕಾಲು ಬಡಿಯಬೇಕಾಗಿತ್ತು—"ಈಜಬೇಕು, ಇದ್ದು ಜೈಸಬೇಕು" ಎಂಬ ಪುರಂದರ ದಾಸರ ಪದದಂತೆ ಒದ್ದಾಡಿ ಪ್ರಯತ್ನಪಡಬೇಕು. ದಾಟಲು ನಾವೆಯೇ ಸಿಕ್ಕಿಬಿಟ್ಟರೆ ದಾಟುವುದು ಎಷ್ಟು ಸುಲಭ? ಈ ಜ್ಞಾನಯೋಗವು ಈ ಸಂಸಾರಸಮುದ್ರ ದಾಟಲು ಅಶಕ್ತನಿಗೆ, ನಿಸ್ಸಹಾಯನಿಗೆ, ಪಾಪಿಗಳಲ್ಲಿ ಅತಿಪಾಪಿಗೆ ನಾವೆಯು ಸಿಕ್ಕಿದಂತೆ. ಇದು ಹೇಗೆಂದು ನಿದರ್ಶನ ಕೊಡುತ್ತಾರೆ.

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥೩೭॥

ಅಗ್ನಿಯು ಸಮಿತ್ತನ್ನು ಯಾವ ರೀತಿ ಭಸ್ಮಮಾಡುತ್ತದೆಯೋ ಹಾಗೆಯೇ ಜ್ಞಾನಾಗ್ನಿಯು ಸಮಸ್ತಕರ್ಮಗಳನ್ನೂ ಭಸ್ಮಮಾಡುವುದು. ಸಮಿತ್ ಎಂದರೆ ಯಾವುದರಿಂದ ಅಗ್ನಿಯನ್ನು ಯಾಗಕ್ಕೆ ಉತ್ಪತ್ತಿಮಾಡುವರೋ ಅದು. ಗೋಮೇಧ್ಯ, ಬೆರಣಿ, ಅಥವಾ ಕುರುಳು—ಇದೇ ಯಾಗದ ಅಗ್ನಿಯ ಉತ್ಪತ್ತಿಗೆ ಶ್ರೇಷ್ಠವಸ್ತು. ಹೇಗೆ ಯಾಗಾಗ್ನಿಯು ಈ ಪಂಚಗುಣ, ಪಂಚಭೂತಗಳಿಂದ ಕೂಡಿರುವ (ಗೋಮೇಧ್ಯ) ಬೆರಣಿಯನ್ನು ಸುಟ್ಟು ಭಸ್ಮಮಾಡಿ ಆ ಪಂಚಗುಣ, ಪಂಚಭೂತ ವಸ್ತುವನ್ನು ನಿರ್ಗುಣ ನಿರ್ಮಲವಾದ ಭಸ್ಮವನ್ನಾಗಿ ಮಾರ್ಪಡಿಸಿ, ತತ್ತ್ವಜ್ಞಾನಿಗಳು ಕೂಡ ಹಣೆಗೆ ಧರಿಸುವ ಪವಿತ್ರವಸ್ತುವನ್ನಾಗಿ ಮಾಡುತ್ತದೆಯೋ; ಅಂತೆಯೇ ಜ್ಞಾನವು ಕರ್ಮದಲ್ಲಿರುವ ಕಾಮ, ಸ್ವಾರ್ಥ, ಅಹಂ

ಮಮತ್ವಗಳನ್ನು ಸುಟ್ಟು, ನಿಷ್ಕಾಮ, ಪರಾರ್ಥ, ನಿರ್ಮಮ, ನಿರಹಂಕಾರ ಕರ್ಮವನ್ನು ದೇವನಿಗೆ ಅರ್ಪಿತವಾಗುವಂತೆ ಪವಿತ್ರವಾಗಿ ಮಾರ್ಪಡಿಸುತ್ತದೆ. "ಕರ್ಮಾಣಿ ಭಸ್ಮಸಾತ್ ಕುರುತೇ" ಸುಟ್ಟು ಬೂದಿಯಾದರೂ ವಸ್ತು ನಾಶ ವಾಗಿ ನಿರುಪಯೋಗವಾಗುವಂತೆ ಮಾಡುವುದಿಲ್ಲ. ಉತ್ಕೃಷ್ಟ ದೇವಾರ್ಪಿತ ವಸ್ತುವಾಗಿ ಮಾಡುತ್ತದೆ. ಇಂತಹ ಜ್ಞಾನಕ್ಕೆ ಸದೃಶವಾದುದು ಯಾವುದು? ಅತಿ ಪವಿತ್ರವಾದ ವಸ್ತು. "ಪವಿತ್ರ" ವೆಂಬುದು "ಭಸ್ಮಸಾತ್" ಎಂಬಂತೆ ಎಷ್ಟು ಚಮತ್ಕಾರವಾಗಿ ಉಪಯೋಗಿಸಲ್ಪಟ್ಟಿದೆ! ಪಾವಯತಿ ತ್ರಾಯತಿ ಇತಿ ಪವಿತ್ರಃ. ಸುಮ್ಮನೆ ಹೊರಗಿನ ರಕ್ಷಣೆ ಕೊಟ್ಟು ಕಾಪಾಡುವಿಕೆಯಲ್ಲ; ಒಳ ಶಕ್ತಿಯನ್ನು ಕೊಟ್ಟು ತನ್ಮೂಲಕ ಆತ್ಮಶಕ್ತಿಯಿಂದ ಕಾಪಾಡುವುದು. ಪಾವಯತಿ ಎಂದರೆ ಪರಿಶುದ್ಧವನ್ನಾಗಿ ಮಾಡುತ್ತದೆ. ಮೊದಲು ಜ್ಞಾನಾಗ್ನಿಯಿಂದ ಎಲ್ಲ ಕಲ್ಮಷವೂ, ಕಷಾಯವೂ ಸುಟ್ಟು ಬೂದಿಯಾಗಿ ಪರಿಶುದ್ಧಮಾಡಿದೆ. ಆ ಪರಿ ಶುದ್ಧತೆಯೇ 'ತ್ರಾಯತಿ' ಕಾಪಾಡುತ್ತದೆ. ಅಂದಮೇಲೆ ಜ್ಞಾನಕ್ಕೆ ಸಮಾನ ವಾದ ಪವಿತ್ರವಸ್ತು—ಪರಿಶುದ್ಧಮಾಡಿ, ಸ್ವಯಂಪ್ರಕಾಶಿತ ಶಕ್ತಿಯಿಂದ, ಒಳಗಿನ ಆತ್ಮತೇಜೋಬಲದಿಂದಲೇ ಕಾಪಾಡುವ ಈ ಲೋಕದಲ್ಲಿ ಇನ್ನಾವುದೂ ಮನುಷ್ಯನಿಗಿಲ್ಲ. ಅಂಥ ಜ್ಞಾನವನ್ನು ನಾವು ಹೊರಗೆ ಹುಡುಕಿಕೊಂಡು ಹೋಗ ಬೇಕಾಗಿದೆಯೆ? ಅರಸಿದರೆ ಅರಣ್ಯದಲ್ಲಿ ಆಣ್ಬುದೇ? ಇಲ್ಲ ಅನ್ನುತ್ತಾನೆ ಭಗವಂತ:

> ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।
> ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥೩೮॥

"ತತ್ ಸ್ವಯಂ" ಅದು ತನ್ನಲ್ಲಿಯೇ, ತನ್ನ ಅಂತರಾತ್ಮದಲ್ಲಿ ಯೋಗದಿಂದ ಸ್ವತಃಸಿದ್ಧವಾಗಿ ಕಾಲಾನುಗುಣವಾಗಿ ಹೊಂದುವನು. ತನ್ನಲ್ಲಿರುವ ವಸ್ತು ವನ್ನು ತಾನೇ ಪಡೆದುಕೊಳ್ಳುವಂತೆ. ಕೆಲವರಿಗೆ ಬೇಗನೆ ಲಭಿಸುವುದು, ಕೆಲ ವರಿಗೆ ನಿಧಾನವಾಗಿ ಲಭಿಸುವುದು. "ಕಾಲೇನಾತ್ಮನಿ ವಿಂದತಿ." ಯಾರೂ ಏನೂ ನಿರಾಶರಾಗಬೇಕಾಗಿಲ್ಲ. "ಲಭಿಸಲಿಲ್ಲವೇ ಇನ್ನೂ!" ಎಂದು ನಿರುತ್ಸಾಹರಾಗ ಬೇಕಾಗಿಲ್ಲ. ನಿಧಾನವಾದರೂ ಎಲ್ಲೂ ಸಿಕ್ಕದೆ ಹೋಗುವುದಿಲ್ಲ. ಭದ್ರವಾಗಿ ಜೋಪಾನವಾಗಿ ತನ್ನಲ್ಲಿಯೇ ಇದೆ. ರಾಜನು ಕನಸಿನಲ್ಲಿ ತಾನು ಭಿಕ್ಷುಕನೆಂದು ಪರದಾಡುತ್ತಿದ್ದು, ನಿದ್ರೆ ಎಷ್ಟೇ ಹೊತ್ತಾದರೂ, ಎಚ್ಚರವಾಗಿ ಜ್ಞಾನೋದಯ ವಾದಾಗ ತನ್ನ ಸ್ವಂತ ರಾಜತ್ವವನ್ನು ತಾನೇ ಪಡೆದುಕೊಂಡು ನಲಿವಂತೆ

"ಸ್ವಯಂ-ಸಂಸಿದ್ಧಿ" ಹೊರಗಿನಿಂದ ಬರಬೇಕಾದ, ಇನ್ನೊಬ್ಬರು ನಮಗೆ ತಂದು ಕೊಡುವ ವಸ್ತುವೇ ಅಲ್ಲ. ಜ್ಞಾನೋದಯವಾಯಿತೆಂದರೆ ಸ್ವಯಂಪ್ರಕಾಶವು. ಅರುಣೋದಯವಾದೊಡನೆ ಸೂರ್ಯಪ್ರಕಾಶವು ಬರುವಂತೆ ತಾನೇತಾನಾಗಿ ಉದ್ಭವಿಸುವುದು, ಎಷ್ಟು ಸುಲಭ!

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂಶಾಂತಿಮಚಿರೇಣಾಧಿಗಚ್ಛತಿ ॥೩೯॥

ಆದರೆ ಒಂದು ಕೊಕ್ಕೆ ಹಾಕಿದ ಸ್ವಾಮಿ. ತ್ರಿಶೂಲದಂತೆ ಮೂರು ಕೊಕ್ಕೆಯೆನ್ನ ಬಹುದು. ಸುಲಭ, ಸುಲಭವೇನೋ ಹೌದು. ಆದರೆ ಯಾರಿಗೆ? ಈ ಮೂರು ಸಾಧಿಸುವವರಿಗೆ: ೧) ಶ್ರದ್ಧಾವಾನ್ ೨) ತತ್ಪರಃ ೩) ಸಂಯತೇಂದ್ರಿಯಃ —ಲಭತೇ ಜ್ಞಾನಂ. ಎಷ್ಟು ಸುಲಭವಾಗಿ ಹೇಳಿದವನು ಎಷ್ಟು ಕಟ್ಟುಸಿಟ್ಟಿಗೆ ತಂದಿಟ್ಟ? ಜ್ಞಾನ ಪಡೆಯುವುದು ಅಷ್ಟು ಸುಲಭವಲ್ಲಪ್ಪಾ! ಶ್ರದ್ಧೆ ಬೇಕು. ಗುರುಗಳಲ್ಲಿ ಶ್ರದ್ಧೆ, ಸಚ್ಛಾಸ್ತ್ರಗಳಲ್ಲಿ ಶ್ರದ್ಧೆ, ಜ್ಞಾನಾರ್ಜನೆಗೆ ಶ್ರದ್ಧೆ. ಎಲ್ಲ ಕ್ಕಿಂತಲೂ ತನ್ನಲ್ಲಿಯೇ ಶ್ರದ್ಧೆ. ಶ್ರದ್ಧೆ ಇಲ್ಲದೆ ಯಾವುದೂ ನಡೆಯುವುದಿಲ್ಲ. ಅದಕ್ಕೇ ಹಾಕಿದ್ದು ಮೊದಲು ಕೊಕ್ಕೆ 'ಶ್ರದ್ಧಾವಾನ್'. ಜ್ಞಾನಾರ್ಜನೆಯಾಗುವ ವರೆಗೂ ಸಾಧಿಸುವ ಶ್ರದ್ಧೆ. ಆ ಶ್ರದ್ಧೆಗೆ "ತತ್ಪರಃ" ಮುಖ್ಯ ಗುರಿ, ಲಕ್ಷ್ಯ. ಕನಸು ಮನಸಿನಲ್ಲಿಯೂ ಅದೇ ಯೋಚನೆ. ಆ ಗುರಿ ಲಕ್ಷ್ಯ "ತತ್ಪರ"ದಿಂದ ಆ ಆತುರದಿಂದ, ಆ ಪವಿತ್ರತಾರೆಯ ಏಕಾಗ್ರದೃಷ್ಟಿಯಿಂದ ಶ್ರದ್ಧೆ ಹೆಚ್ಚುತ್ತದೆ. ಇದನ್ನು ಸಾಧಿಸಿದರೂ, ಮುಖ್ಯವಾಗಿ ಕೊನೆಯದಾಗಿ "ಸಂಯತೇಂದ್ರಿಯಃ" ಆಗಲೇಬೇಕು. ಇಲ್ಲವಾದರೆ, ಚಂಚಲನಾದರೆ, ಶ್ರದ್ಧೆಯಿರಬಹುದು, ತತ್ಪರ ನಿರಬಹುದು, ಆದರೆ ಸಂಯತೇಂದ್ರಿಯನಲ್ಲವಾದರೆ "ಚೋರೈಃ ಪ್ರಭೋ ಬಲಭಿರಿಂದ್ರಿಯೈಃ" ಎಂದು ಶಂಕರರು ಹೇಳಿರುವಂತೆ, ಈ ಬಲತರವಾದ ಇಂದ್ರಿಯಕಳ್ಳರು ಇತರ ಮಾರ್ಗಗಳಿಗೆ ಎಳೆದುಕೊಂಡು ಹೋಗಿಬಿಡುತ್ತಾರೆ. ಆಗ ಜ್ಞಾನಮಾರ್ಗವೆಲ್ಲಿ? ತೃಪ್ತಿ ಹೋಯಿತು.

ಲಕ್ಷ್ಮೀನೃಸಿಂಹಸ್ತೋತ್ರದಲ್ಲಿನ:—

"ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ
ಚೋರೈಃ ಪ್ರಭೋ ಬಲಭಿರಿಂದ್ರಿಯನಾಮಧೇಯೈಃ
ಮೋಹಾನ್ಧಕೂಪಕುಹರೇ ವಿನಿಪಾತಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ"

'ಕುರುಡನಾದ ನನ್ನಲ್ಲಿರುವ ಹೃತ್ ವಿವೇಕವೆಂಬ ಮಹಾಧನವನ್ನು (ವಿವೇಕಕ್ಕಿಂತ ಹೆಚ್ಚಿನ ಸಂಪತ್ತೇ ಇಲ್ಲ) ಬಲವಾದ ಇಂದ್ರಿಯಗಳೆಂಬ ಹೆಸರುಳ್ಳ ಕಳ್ಳರು ಅಪಹರಿಸಿ, ನನ್ನನ್ನು ಮೋಹವೆಂಬ ಕತ್ತಲೆಗವಿಗೆ ನೂಕಿಬಿಟ್ಟಿದ್ದಾರೆ. ಆದುದರಿಂದ ಶ್ರೀಪತಿಯಾದ, ನರಸಿಂಹಾವತಾರನಾದ, ಹಿರಣ್ಯಕಶಿಪುವಿನಂತಹ ದೈತ್ಯನನ್ನೇ ಸಂಹಾರಮಾಡಿದ, ಅತೀತಬಲವುಳ್ಳ ಕರವುಳ್ಳ ಪರಮಾತ್ಮನೇ, ನಿನ್ನ (ಸಿಂಹಬಲನರಹಸ್ತ) ಆ ಕರದ ಅವಲಂಬನ (ಹಸ್ತಲಾಘವ) ಕೊಟ್ಟು ಆ ಸಹಾಯದಿಂದ ನನ್ನನ್ನು ಆ ಮೋಹಾಂಧಕೂಪದಿಂದ ಎತ್ತಿ, ವಿವೇಕ ಉತ್ಪನ್ನ ಮಾಡಿ ಆ ಬಲವಾದ ಕಳ್ಳರನ್ನು ನಾಶಮಾಡಿ ಸಲಹು' ಎಂದು ಪ್ರಾರ್ಥಿಸಿದ್ದಾರೆ. ಆದುದರಿಂದ ಶ್ರದ್ಧೆಯಿಂದ ಏಕಲಕ್ಷ್ಯವಿಟ್ಟು ಜಿತೇಂದ್ರಿಯನಾಗಿ ಜ್ಞಾನವನ್ನು ಸಂಪಾದಿಸಿದರೆ ಅನಂತರ ಒಂದೇ ಮೆಟ್ಟಲು, ಬಲು ಸುಲಭ. ಆದ್ದರಿಂದ 'ಪರಾಂಶಾಂತಿ' ಅದೇ ಮೋಕ್ಷ. ಶಾಂತಾತೀತ ಶಾಂತಿ = ಪರಾಂಶಾಂತಿ.

> ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ।
> ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥

ಅಲ್ಲದೆ ವ್ಯತಿರಿಕ್ತ ದಾರಿ, ಇಳಿಜಾರು. ಅಜ್ಞನೂ ಅಶ್ರದ್ಧಾವಂತನೂ, ಸಂಶಯಾತ್ಮನೂ ನಾಶವಾಗುತ್ತಾರೆ. ಪುನಃ "ನಾಯಂ ಲೋಕೋ" (ಅ ೪. ಶ್ಲೋ ೩೧) ಬಂತು. ಸಂಶಯಾತ್ಮನಿಗೆ ಇಹ, ಪರ, ಸುಖ ಮೂರೂ ಇಲ್ಲ. (Doubting Tom) ಎಲ್ಲಾ ಅನುಮಾನವೇ. ಸಂಶಯಾತ್ಮನನ್ನು ಸ್ವಾರಸ್ಯವಾಗಿ ಹೇಳಿದ್ದಾರೆ. ಅಜ್ಞ—ತನಗೇ ತಿಳಿವಳಿಕೆ ಇಲ್ಲದವ, ಅಶ್ರದ್ಧ—ತಿಳಿದುಕೊಳ್ಳಬೇಕೆಂಬ ಶ್ರದ್ಧೆಯೂ ಇಲ್ಲ. ತಿಳಿವಳಿಕೆ ಹೇಳಿದರೂ, ತಿಳಿದುಕೊಳ್ಳಲು ಶ್ರದ್ಧೆ ಇಲ್ಲ. ಇನ್ನು ಅವನು ಉದ್ಧಾರವಾಗುವುದೆಂತು? ತನ್ನಲ್ಲಿಯೇ ತನಗೆ ನಂಬಿಕೆಯಿಲ್ಲ. ಅವನು ಇಹದಲ್ಲಿ ಏನು ಸಾಧಿಸಿಯಾನು? ಪರಕ್ಕೆ ಏನು ಅಣಿಮಾಡಿಯಾನು? ತನ್ನ ಸುಖವೇನು ಅನುಭವಿಸಿಯಾನು? ಪರಸುಖಕ್ಕೇನು ಪ್ರಯತ್ನಿಸಿಯಾನು? ಅವನು ಹಾಳೇ. ತನ್ನಲ್ಲಿ ತನಗೇ ನಂಬಿಕೆ ಇಲ್ಲದೆ ತನ್ನ ಸಂಶಯದಿಂದ ತನ್ನನ್ನೇ ವಂಚಿಸಿಕೊಳ್ಳುವನು.

> ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।
> ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥೪೧॥

ನಿಷ್ಕಾಮಕರ್ಮಯೋಗದಿಂದ ಜ್ಞಾನ ಪಡೆದು ಸಂಶಯವನ್ನು ಭೇದಿಸಿ (ಛಿನ್ನಂ

=ಚೂರು ಚೂರು ಮಾಡಿ) ತನ್ನ ಆತ್ಮವನ್ನು ಹೊಂದಿರುವವನಿಗೆ ಕರ್ಮ ಬಂಧನವಿಲ್ಲ. ಸಂಶಯವನ್ನು ಭೇದಿಸಬೇಕಾದರೆ ಸಲಕರಣೆಯನ್ನೂ ಮೆಟ್ಟಲುಗಳನ್ನೂ ಸೂಚಿಸಿದ್ದಾರೆ. "ಆತ್ಮವಂತಂ" ಆದರೆ ಸಂಶಯಾತ್ಮನಾಗಲು ಅವಕಾಶವಿಲ್ಲ. "ಸಚ್ಚಿದಾನಂದ"ದ ಸ್ವರೂಪ ತಿಳಿದ ಮೇಲೆ ಸಂಶಯವೆಲ್ಲಿ? ಸಚ್ಚಿದಾನಂದ ಸ್ವರೂಪನಾದ ಆತ್ಮವಂತನಿಗೆ, ಕರ್ಮವೇ ಅವನಿಗಿಲ್ಲದಾಗ ಇನ್ನು ಕರ್ಮಬಂಧನವೆಲ್ಲಿಯದು?

ಸರ್ವಸಾರೋಪನಿಷದಂತ್ಯದಲ್ಲಿ:—

> ನಾಹಂ ದೇಹೋ ಜನ್ಮ ಮೃತ್ಯೂ ಕುತೋ ಮೇ?
> ನಾಹಂಕಾರಃ ಕ್ಷುತ್ಪಿಪಾಸೇ ಕುತೋ ಮೇ?
> ನಾಹಂ ಚೇತಶ್ಶೋಕಮೋಹೋ ಕುತೋ ಮೇ?
> ನಾಹಂ ಕರ್ತಾ ಬನ್ಧಮೋಕ್ಷೌ ಕುತೋ ಮೇ?

ಎಂದು ದೇಹಾಹಂಕಾರ ಚಿತ್ತಗಳೇ ನಾನಲ್ಲದ ಮೇಲೆ, ಕರ್ತನೂ ನಾನಲ್ಲ; ನನಗೆ ಜನ್ಮ, ಮೃತ್ಯು, ಕ್ಷುತ್ಪಿಪಾಸೆ, ಶೋಕ, ಮೋಹಗಳಿಲ್ಲದಂತೆ ನಾನು ಕರ್ತನಲ್ಲದ ಮೇಲೆ ಕರ್ಮದ ಬಂಧಮೋಕ್ಷಗಳು ನನಗೆ ಎಲ್ಲಿಂದ ಬಂತು? ಎಂದು ಹೇಳಿದೆ.

> ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
> ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥೪೨॥

ಆದಕಾರಣ ಭರತನೆ, ಹೃದಯದಲ್ಲಿ ಅವಿವೇಕದಿಂದ ಉತ್ಪನ್ನವಾದ ಸಂಶಯವನ್ನು (ಏನು ಮಾಡಬೇಕು, ಏಕೆ ಹಿಂಸಾಕೃತ್ಯವಾದ ಈ ಯುದ್ಧದಲ್ಲಿ ನನ್ನವರನ್ನೆಲ್ಲ ಕೊಲ್ಲಲಿ) ಆತ್ಮಜ್ಞಾನದಿಂದ ಭೇದಿಸಿ, ಏಳು. ನಿಷ್ಕಾಮಕರ್ಮವನ್ನು ಆಶ್ರಯಿಸು. ಅರ್ಜುನನು ಸಂಶಯಾತ್ಮನಾಗಿ ವಿನಾಶವಾಗುವುದನ್ನು ತಪ್ಪಿಸಲು, ಆ ಸಂಶಯವನ್ನು ಭೇದಿಸಲು ಶ್ರೀಕೃಷ್ಣಪರಮಾತ್ಮನು ಆತ್ಮಜ್ಞಾನವೆಂಬ ಖಡ್ಗವನ್ನು ಕರುಣೆಯಿಂದ ದಯಪಾಲಿಸಿದನು. "ಸಂಕಟ ಬಂದಾಗ ವೆಂಕಟರಮಣ" "Man's Extremity is God's opportunity" ಎಂಬಂತೆ ಕಷ್ಟಕ್ಕೆ ಸಿಕ್ಕಿದಾಗಲೇ ಮಾನವನಿಗೆ ದೇವರ ಚಿಂತೆಯೂ, ದೇವನನ್ನು ಮಾರ್ಗ ತೋರುವಂತೆ ಬೇಡಲು, ಸಹಾಯಕನಾಗಲು ಪ್ರಾರ್ಥಿಸಲು ಸುಸಮಯವೇ ಹೊರತು, ಮನುಷ್ಯ ಸುಖಲೋಲುಪ್ತಿಯಲ್ಲಿದ್ದಾಗ ದೇವಚಿಂತನೆಯೇ ಇಲ್ಲ.

ಇಂಥಾ ಸುಸಮಯ ಸಿಕ್ಕಿದಾಗ ತಾನೇ ಭಗವಂತನು ಮಾನವನನ್ನು ತನ್ನ ಮಾರ್ಗಕ್ಕೆ ಎಳೆದುಕೊಳ್ಳಲು, ಅವನಿಗೆ ಬುದ್ಧಿ ಕಲಿಸಿ, ಹಿತಚಿಂತನೆಗೆ ಉಪ ದೇಶಮಾಡಲು ಸದವಕಾಶ. ಇದನ್ನು ಪೂರ್ತಿಮಾಡಿಕೊಳ್ಳಲೆಂದೇ ಪರಮಾತ್ಮನು ಅರ್ಜುನನನ್ನು, ಕಷ್ಟದಲ್ಲಿ ಸಿಕ್ಕಿದಾಗ ತನ್ನಲ್ಲಿಗೆ ಎಳೆದುಕೊಳ್ಳಲು ಪ್ರಯತ್ನಿಸು ವನು. ಫಲವು ಒಳಗಡೆ ಪಕ್ವವಾಗಿ ಮಧುರವಾದ ಹೊರತು ಹೊರಗಡೆ ಹೊಂಬಣ್ಣ ತಾಳೀತೆ? ಮೇಲ್ಗಡೆ ಹೊಂಬಣ್ಣ ಬಳಿದರೆ ಒಳಗಡೆ ಮಾಧುರ್ಯ ಬಂದೀತೆ? ಅಂತಃಕರಣದಲ್ಲಿ ಪರಮಾತ್ಮನ ಉಪದೇಶದಿಂದ ಆತ್ಮಪ್ರಕಾಶವಾಗದೆ ಹೊರಗಣ ಅಂಧಕಾರದಲ್ಲಿ ಬೆಳಕು ಬೆಳಗೀತೆ? ದಾರಿ ತೋರೀತೇ? ಕುರುಡು ದೀಪದ ಎಣ್ಣೆಯು ಎಂತು ಉಪಯೋಗವಾದೀತು? ಬತ್ತಿಗೆ ದೀಪ ಹಚ್ಚಿದರೆ ಎಣ್ಣೆಯು ಊರ್ಧ್ವಮುಖನಾಗಿ ಏರಿ ಜ್ಯೋತಿಯಾಗಿ ಬೆಳಗೀತು. ಶ್ರೀಕೃಷ್ಣ ಪರಮಾತ್ಮನ ಉಪದೇಶ ಜ್ಯೋತಿಯಿಂದ ಅರ್ಜುನನಲ್ಲಿನ ಶಕ್ತಿರೂಪದ ಎಣ್ಣೆಯು ಕ್ರಿಯಾರಂಗದಲ್ಲಿ ಉಜ್ವಲಿಸಿ ಬೆಳಗಿ ಉಪಯೋಗವಾಯಿತು. ದುರ್ಗಮವಾದ ಪರ್ವತವನ್ನೇರಿ ಅಲ್ಲಿಯ ದೃಶ್ಯ ಅನುಭವಿಸಬೇಕಾದರೆ ನಾವೇ ಹತ್ತಬೇಕು. ದೇವನು ನಮಗಾಗಿ ಎತ್ತಿ ಹತ್ತಿಸುವುದಿಲ್ಲ. ಆದರೆ ಅವನು ಆಶ್ರಯಕೊಡಲು ಒಳಗೆ ಯಾವಾಗಲೂ ಸಿದ್ಧನಿದ್ದಾನೆ. ಎಡವಿದರೆ ಚೇತರಿಸಿ ಕೊಳ್ಳಲು ಆಸರೆ; ಮುಗ್ಗರಿಸಿ ಬಿದ್ದರೆ ಎತ್ತಿ ನಿಲ್ಲಿಸಲು ಆವ ಕೈಯಾಗಿ ಸಹಾ ಯಕನಾಗಿದ್ದಾನೆ. ಅವನ ಇಚ್ಛೆ, ನಾವೇ ಪರ್ವತಶಿಖರಕ್ಕೆ ನಮ್ಮ ಮಾರ್ಗ ವನ್ನು ನಾವೇ ಸರಿಯಾಗಿ ಚುನಾಯಿಸಿ ಸ್ವಬಲದಿಂದಲೇ ಕಷ್ಟಪಟ್ಟು ಎಡವರಿಸಿ, ಮುಗ್ಗರಿಸಿ, ಚೇತರಿಸಿ ಪ್ರಯತ್ನಬಿಡದೆ ಹತ್ತಬೇಕೆಂದು.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀಕೃಷ್ಣಾರ್ಜುನ ಸಂವಾದದಲ್ಲಿ
ಜ್ಞಾನಯೋಗವೆಂಬ ನಾಲ್ಕನೆಯ ಅಧ್ಯಾಯ ಸಂಪೂರ್ಣ.

# ಐದನೆಯ ಅಧ್ಯಾಯ: ಕರ್ಮಸಂನ್ಯಾಸಯೋಗ

## ಮುಕ್ತಿಸಾಧನೆಗಾಗಿ ಸ್ವಸ್ವರೂಪಪರಿಜ್ಞಾನ

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥

"ಕರ್ಮಸಂನ್ಯಾಸವನ್ನೂ ಪುನಃ ಕರ್ಮಯೋಗವನ್ನೂ ಪ್ರಶಂಸಿಸುತ್ತೀಯೆ. ಈ ಎರಡರಲ್ಲಿ ಒಂದನ್ನು, ಯಾವುದು ಶ್ರೇಯಸ್ಕರವೋ ಅದನ್ನು 'ಸುನಿಶ್ಚಿತಮ್' —ನಿಶ್ಚಯಿಸಿ ನನಗೆ ಹೇಳು" ಎಂದು ಕೃಷ್ಣನಲ್ಲಿ ಅರ್ಜುನನು ಪ್ರಾರ್ಥಿಸಿದನು. ಇದು ಅ. ೨ ಶ್ಲೋ. ೭ರಲ್ಲಿ ಪ್ರಾರ್ಥಿಸಿದ "ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ" ಎನ್ನುವುದರ ಪ್ರತಿಧ್ವನಿಯಂತೆ 'ಯಚ್ಛ್ರೇಯಃ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್' ಎಂದಿದೆ.

ತನ್ನ ಶ್ರೇಯಸ್ಸನ್ನು ಕೋರಿ ಪರಮಾತ್ಮನೇ ನಿಶ್ಚಯಿಸಿ ಹೇಳಬೇಕೆಂದು ಕೇಳಿದರೂ ಈಗಾಗಲೆ ಮುಂಚಿನ ಆರ್ತನಾದವಿಲ್ಲ. ಮೂರು ಅಧ್ಯಾಯದಷ್ಟು ಕರ್ಮಜ್ಞಾನವನ್ನು ಕೇಳಿ, ಆಗ "ನಾ ಒಲ್ಲೆ ಯುದ್ಧವನ್ನು" ಎಂದು ಕರ್ಮವಿಮುಖನಾದವನು ಆಗಲೇ ದಾರಿಗೆ ಬಂದುಬಿಟ್ಟಿದ್ದಾನೆ. ಈಗ ಕರ್ಮಕ್ಕೇನೋ ಸಿದ್ಧ; ಆದರೆ ಕರ್ಮಸಂನ್ಯಾಸ, ಕರ್ಮಯೋಗಪ್ರಶಂಸೆಯಿಂದ ಸಮಸ್ಯೆ ಬಂದುಬಿಟ್ಟಿದೆ. ನಿಶ್ಚಯಿಸಿ ಹೇಳಿಬಿಟ್ಟರೆ ಮಾಡಲು ಸಿದ್ಧನಾಗಿದ್ದಂತೆಯೇ ಕಾಣುತ್ತಾನೆ.

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥೨॥

ಕೇಳಿದ, ನೋಡಿದ ಪರಮಾತ್ಮನಿಗೆ ಪ್ರೋತ್ಸಾಹವಾದಂತೆಯೇ ಆಗಿರಬೇಕು. ಖಡಾಖಂಡಿತವಾಗಿ, ಸಂನ್ಯಾಸವೂ ಕರ್ಮಯೋಗವೂ ಶ್ರೇಯಸ್ಸಿಗೆ ಹೇತುಗಳಾದರೂ, ಅವುಗಳಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ವಿಶಿಷ್ಟವು. ಹೇಳಿಬಿಟ್ಟ ಮಾರ್ಗ ತೋರಲು ಸುನಿಶ್ಚಿತವಾಗಿ ಹೇಳಿಬಿಟ್ಟರೂ, ಎರಡನ್ನೂ ಅಷ್ಟು ಸುಲಭವಾಗಿ ನಿರ್ಧರಿಸತಕ್ಕುದಲ್ಲವಾದುದರಿಂದ ಎರಡೂ ಒಂದೇ ಎಂದೂ ಫಲಪ್ರದದಲ್ಲಿ ವ್ಯತ್ಯಾಸವಿಲ್ಲವಾದುದರಿಂದ

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥೩॥

ಯಾವನು ನಿಷ್ಕಾಮಕರ್ಮದಲ್ಲಿ ಅನಿಷ್ಟವಸ್ತುವನ್ನು ದ್ವೇಷಿಸದೆಯೂ, ಇಷ್ಟ ವಸ್ತುವನ್ನು ಕಾಂಕ್ಷಿಸದೆಯೂ ಇರುವನೋ ಅವನನ್ನು ನಿತ್ಯಸಂನ್ಯಾಸಿಯೆಂದೇ ತಿಳಿಯತಕ್ಕದ್ದು. ದ್ವಂದ್ವರಹಿತನು (ರಾಗದ್ವೇಷಗಳಿಲ್ಲದವನು) ಸುಖವಾಗಿ (ಸುಲಭವಾಗಿ) ಬಂಧವಿಮುಕ್ತನಾಗುತ್ತಾನೆ.

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥೪॥

ಸಾಂಖ್ಯವೂ ಯೋಗವೂ ಬೇರೆಯೆಂದು ಬಾಲರು ಹೇಳುತ್ತಾರೆಯೆ ಹೊರತು, ಪಂಡಿತರಲ್ಲ. ಯಾವುದೊಂದನ್ನಾದರೂ ಚೆನ್ನಾಗಿ ಸ್ಥಿರವಾಗಿ ಮಾಡಿದರೆ ಎರಡರ ಏಕೈಕಫಲವನ್ನು ಹೊಂದುವನು.

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥೫॥

ಯಾವ ಸ್ಥಾನವು ಸಾಂಖ್ಯದಿಂದ ಪ್ರಾಪ್ತವಾಗುತ್ತದೆಯೋ ಅದೇ ಸ್ಥಾನವನ್ನು ಯೋಗದಿಂದ ಕೂಡ ಹೊಂದುವನು. ಸಾಂಖ್ಯ ಮತ್ತು ಯೋಗಗಳ ಫಲ ಒಂದೇ ಎಂದು ಕಂಡುಕೊಂಡವನೇ ಸರಿಯಾಗಿ ಕಂಡವನು.

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥೬॥

(ಕರ್ಮಾನುಷ್ಠಾನ) ಯೋಗವಿಲ್ಲದ ಸಂನ್ಯಾಸವು ದುಃಖವನ್ನೇ ಕೊಡುವುದು. ಯೋಗಯುಕ್ತನಾದ ಮುನಿಯಾದರೋ ಜಾಗ್ರತೆಯಾಗಿ ಬ್ರಹ್ಮ(ಭಾವ)ಕ್ಕೆ ತಲಪುವನು.

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।
ಸರ್ವಭೂತಾತ್ಮ ಭೂತಾತ್ಮಾಕುರ್ವನ್ನಪಿ ಲಿಪ್ಯತೇ ॥೭॥

ಯೋಗದಿಂದ ಶುದ್ಧವಾದ ಆತ್ಮವುಳ್ಳವನು, ಇಂದ್ರಿಯಗಳನ್ನು ಜಯಿಸಿಕೊಂಡು, ಸಮಸ್ತ ಭೂತಗಳಲ್ಲಿಯ ಆತ್ಮನೇ ತನ್ನ ಆತ್ಮನೆಂದು ತಿಳಿದು, ಪ್ರಾಪ್ತವಾದ ಕರ್ಮವನ್ನು ಆಚರಿಸುತ್ತಿದ್ದರೂ ಅವನು ಕರ್ಮಗಳಿಂದ ಲಿಪ್ತನಾಗುವುದಿಲ್ಲ.

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥೮॥

ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥೯॥

"ತತ್ತ್ವವಿತ್" ತತ್ತ್ವಧನವುಳ್ಳವನು ತತ್ತ್ವಜ್ಞಾನಿಯಾದರೋ, ನೋಡುತ್ತ, ಕೇಳುತ್ತ, ಸ್ಪರ್ಶಿಸುತ್ತ, ಮೂಸುತ್ತ, ತಿನ್ನುತ್ತ, ಚಲಿಸುತ್ತ, ನಿದ್ರಿಸುತ್ತ, ಉಸಿರಾಡುತ್ತ, ಮಾತಾಡುತ್ತ, ವಿಸರ್ಜಿಸುತ್ತ, ರೆಪ್ಪೆಯಾಡುತ್ತ, ತನ್ನ ಸ್ವಾಧೀನದಲ್ಲಿನ, ತನ್ನ ಸ್ವಾಧೀನವಿಲ್ಲದ ಎಲ್ಲಾ ಶರೀರಕಾರ್ಯಗಳನ್ನೂ ಮಾಡುತ್ತಿದ್ದರೂ "ಇಂದ್ರಿಯಾಣೀಂದ್ರಿಯಾರ್ಥೇ ವರ್ತಂತ" ಇಂದ್ರಿಯಗಳೇ ತಮ್ಮ ತಮ್ಮ ಇಂದ್ರಿಯಾರ್ಥವಾಗಿ ಪ್ರವರ್ತಿಸುತ್ತಿವೆ ಎಂದೆಣಿಸುತ್ತ, ತಾನು ಏನನ್ನೂ ಕಿಂಚಿತ್ತು ಮಾಡುವವನಲ್ಲವೆಂದು ಭಾವಿಸುವನು.

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥೧೦॥

ಯಾವಾತನು ಪರಬ್ರಹ್ಮಪ್ರೀತ್ಯರ್ಥವಾಗಿ ಕರ್ಮದ ಸಂಗ (ಫಲಾಪೇಕ್ಷೆ) ಬಿಟ್ಟವನಾಗಿ ಕರ್ಮವನ್ನು ಮಾಡುತ್ತಾನೋ, ಅವನು ನೀರಿನಲ್ಲಿರುವ ಕಮಲದ ಎಲೆಯಂತೆ ಪಾಪದಿಂದ (ಇಲ್ಲಿ ಪುಣ್ಯ ಪಾಪಗಳೆರಡೂ ಸೂಚಿಸತಕ್ಕ ಶಬ್ದ—ಕರ್ಮಫಲ ಏನೇ ಆಗಲಿ) ಲಿಪ್ತನಾಗುವುದಿಲ್ಲ.

ದಾರಿಯಲ್ಲಿ ಹೋಗುತ್ತ ಊರು ಸಿಕ್ಕಿದರೆ "ಊರು" ಎಂಬ ಬುದ್ಧಿಯಾಗುತ್ತದೆ. ನಾವು ತಲಪಬೇಕಾದ ಊರು ಸಿಕ್ಕಿದರೆ "ನಮ್ಮೂರು" ಎಂಬ ಬುದ್ಧಿಯುಂಟಾಗಿ, ಅಭಿಮಾನ ಉಂಟಾಗುತ್ತದೆ. ಆ ಊರಲ್ಲಿ ಮನೆಗಳನ್ನು ನೋಡಿದಾಗ "ಮನೆ" ಎಂಬ ಬುದ್ಧಿಯುಂಟಾಗುತ್ತದೆ. ನಮ್ಮ ಮನೆ ತಲಪಿದಾಗ "ಇದು ನನ್ನ ಮನೆ" ಎಂಬ ಅಭಿಮಾನ ತಲೆಯೆತ್ತುತ್ತದೆ. ಅದೇ ಸಂಗ. ಅದಕ್ಕೆ 'ಸಂಗಂ ತ್ಯಕ್ತ್ವಾ' ಸಂಗವನ್ನು ಬಿಟ್ಟು ಅಲಿಪ್ತನಾಗಬೇಕು. ಅಭ್ಯಾಸ ಬಲದಿಂದ ವಸ್ತುವು ಪ್ರಿಯವೂ, ಅಪ್ರಿಯವೂ ಆಗಿರುತ್ತದೆ. ದಾರಿಯಲ್ಲಿ ಅಪಘಾತವಾಗಿ ಒಬ್ಬ ಹೆಂಗಸಿನ ದೇಹ ಬಿದ್ದಿತ್ತು. ಒಬ್ಬ ಕಾಮುಕ ಅಲ್ಲಿ ಹಾಸಿಹೋದಾಗ "ಎಂತಹ ಸುಂದರಿ!" ಎಂದ. ಅವನ ಹಿಂದೆ ಹೋದ ನಾಯಿ "ಈ ದೇಹದ ಮಾಂಸವು ರುಚಿಯಾಗಿರಬೇಕು" ಎಂದುಕೊಂಡಿತು. ಒಬ್ಬ ವಿರಕ್ತ ಹಾಸಿಹೋದಾಗ "ಪ್ರಾಣಗಿಣಿ ಹಾರಿಹೋದ ಬರಿ ಅಸ್ಥಿಪಂಜರ—ಅನಿತ್ಯವಸ್ತು!" ಎಂದುಕೊಂಡನು. ಒಬ್ಬ ಕರ್ಮನಿಷ್ಠ ಬ್ರಾಹ್ಮಣ "ಶವ,

ಅಶುಚಿ, ದೂರ ಸರಿಯಬೇಕು" ಎಂದನು. ಆದರೆ ಯಾವನು ನಿಜತತ್ತ್ವವನ್ನು ತಿಳಿದುಕೊಂಡಿರುವನೋ ಅವನಿಗೆ ಈ ತರಹ ಭ್ರಾಂತಿಗಳು ಯಾವುದೂ ಆಗುವುದಿಲ್ಲ. ಯಾವ ಸಂಗವೂ ಯಾವ ಬಂಧನವೂ ಉಂಟಾಗುವುದಿಲ್ಲ.

ಈ ತೆರದ ಅಂತಃಕರಣಶುದ್ಧಿಗೆ ಕರ್ಮಯೋಗ, ಪರರ ಹಿತಕ್ಕಾಗಿ ಸರ್ವ ಫಲಾರ್ಪಣೆಯೇ ಉಪಾಯ. ಕೊಳೆಯುತ್ತಾ ನೀರಿನಲ್ಲಿ ಬಿದ್ದಿರುವ ಗಂಧದ ತುಂಡನ್ನು ತೆಗೆದು ತೇದರೆ, ಸಹಜವಾದ ಒಳಗಿನ ಸುವಾಸನೆಯು ತೋರುವುದು. ಸ್ವಾರ್ಥತೆಯ ಕೊಳಕಿನಲ್ಲಿ ಮುಳುಗಿರುವ ನಾವು, ಪರಾರ್ಥಕ್ಕಾಗಿ ಈ ದೇಹ ತೇದರೆ (ಎಂದಾದರೂ ತಾನೆ ಬಿದ್ದುಹೋಗಿ ನಾಶವಾಗುವುದು) ಆತ್ಮನ ಪರಿಮಳವು ಸೂಸುವುದು. ಕೆಸರಿನಲ್ಲಿ ಹುಟ್ಟಿ, ಕೆಸರಿನಲ್ಲಿ ನಿಂತು, ಪವಿತ್ರವಾಗಿ, ಕೆಸರಂಟದೆ, ಪರಿಮಳಿಸುತ್ತಿರುವ ಕಮಲದ ನಿದರ್ಶನ ಅದಕ್ಕೇ ಸ್ವಾಮಿ ಕೊಟ್ಟಿರುವುದು. ಕರ್ಮಮಾಡಿ, ಅದು ಅಂಟದಂತೆ, ನೀರಿನಲ್ಲೇ ಇದ್ದು ನೀರು ಅಂಟದಂತೆ, "ಈಸಬೇಕು, ಇದ್ದು ಜೈಸಬೇಕು." ಪ್ರಪಂಚವನ್ನು ಬಿಟ್ಟು ಓಡಿಹೋಗದೆ, ಅದರಲ್ಲಿಯೇ ಇದ್ದು ಮುಳುಗಿ ತೇಲಿ; ಪ್ರಪಂಚದ ಉದ್ವೇಗ ರಾಗದ್ವೇಷಾದಿಗಳು ಅಂಟದಂತೆ ಇರಬೇಕಾದರೆ, ಈಶ್ವರಾರ್ಪಣಬುದ್ಧಿ, ಫಲಾಪೇಕ್ಷೆತ್ಯಾಗ, ಮಾಡುವ ಕರ್ಮದಲ್ಲಿ ಅತ್ಯವಶ್ಯಕ. ಹಲಸಿನ ಹಣ್ಣನ್ನು ಬಿಡಿಸುವಾಗ ಕೈಗೆ ಅಂಟದಂತೆ ಮುಂಚೆ ಕೈಗೆ ಎಣ್ಣೆ ಬಳಿದುಕೊಂಡು, ಅನಂತರ ಹಲಸಿನ ಹಣ್ಣಿಗೆ ಕೈ ಹಾಕುವಂತೆ ಕಾರ್ಯವೆಸಗಲು ಈಶ್ವರಾರ್ಪಣಬುದ್ಧಿ, ಫಲ ಸಂಗತ್ಯಾಗವೆಂಬ ಎಣ್ಣೆ ಬಳಿದುಕೊಂಡು, ಅಂಟು ತಗಲುವ ಅವಕಾಶವಾಗದಂತೆ ಕರ್ಮಕ್ಕೆ ಕೈಹಾಕಬೇಕು. ಸಸ್ಯಶಾಸ್ತ್ರದ ಪ್ರಕಾರ ಕಮಲದೆಲೆಯ ಈ ರೀತಿ ರಚನೆಯೇ ನೀರಂಟದಂತೆ ಮಾಡುವುದು. ನೀರು ಬಿದ್ದರೂ, ಹನಿ ಬಿಂದುವಾಗಿ ಎಲೆಯ ಮೇಲೆ ಅಂಟದೆ ಉರುಳಿಹೋಗುವುದು. ನಿರ್ಲಿಪ್ತನಾಗಿರಲು ಇದು ಸೊಗಸಾದ ಉಪಮಾನ. ಹೀಗೆಯೇ ನಿರ್ಲಿಪ್ತವಾಗಿ ಕಮಲದೆಲೆ ನೀರಿನಲ್ಲೇ ಜೀವಿಸಿ ಪ್ರವರ್ಧಮಾನಕ್ಕೆ ಬರುತ್ತೆ. ಅದೇ ಎಲೆಯನ್ನು ನೀರಿನಿಂದ ಹೊರಗೆ ಹಾಕಿಬಿಟ್ಟರೆ ಕೊಳೆತುಹೋಗಿಬಿಡುತ್ತದೆ. ನೀರಿನಲ್ಲೇ ಇದ್ದರೂ ಕೊಳೆಯದು. "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತ" ಎಂದು ಛಾಂದೋಗ್ಯದಲ್ಲಿನ ಉಪಕೋಸಲ ಸತ್ಯಕಾಮ ಜಾಬಾಲ ಪ್ರಕರಣದ ತಾತ್ಪರ್ಯವಿದು. ಇದು ಕರ್ಮಬಂಧನ ನಿವೃತ್ತಿಗೆ ಉಪಾಯ.

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥೧೧॥

ಯೋಗಿಗಳು ಆತ್ಮಶುದ್ಧಿಗಾಗಿ ಕಾಯಾ, ಮನಸಾ, ಬುಧ್ಯಾ ಕೇವಲ ಇಂದ್ರಿಯ ಕರ್ಮಗಳ ಸಂಗವನ್ನು ಬಿಟ್ಟು (ಕರ್ತೃತ್ವಾಭಿಮಾನ ಮತ್ತು ಫಲಾಪೇಕ್ಷೆ) ಮಾಡುವರು. ಕರ್ಮಮಾಡುವುದು ಫಲಕ್ಕಲ್ಲ, ಆತ್ಮಶುದ್ಧಿಗಾಗಿ. "ಪಾಕಸ್ಯ ವಹ್ನಿವತ್." ಕರ್ಮವೆಸಗುವುದೆಲ್ಲ ಅಡಿಗೆಗೆ ಬೆಂಕಿ ಒದಗಿಸಿಕೊಂಡಂತೆ. ವಹ್ನಿಯನ್ನೇ ಊಟಮಾಡಲಾಗುವುದಿಲ್ಲ. ಅದರಿಂದ ಪಕ್ವವಾದುದನ್ನು ಭೋಜನ ಮಾಡಬೇಕು. ಜ್ಞಾನವು ಈ ಕರ್ಮದಿಂದ ಪಕ್ವವಾಗುವುದು. ಕರ್ಮವೆಲ್ಲ ಜ್ಞಾನಾರ್ಜನೆಗಾಗಿ. ಜ್ಞಾನವೇ ಉಂಟಾದಂತೆ (ಪಾಕ) ತೃಪ್ತಿಪಡಿಸತಕ್ಕದ್ದು. ಕರ್ಮವಲ್ಲ. ತೃಪ್ತಿಯಿಂದ ಶಾಂತಿ. ಜ್ಞಾನದಿಂದಲೇ ಶಾಂತಿ. ಕರ್ಮದಿಂದಲ್ಲ. ಕರ್ಮದಿಂದ, ಕೇವಲ ಕರ್ಮೇಚ್ಛೆಯಲ್ಲಿಯೇ, ಕರ್ಮದ ಗೊಂದಲದಲ್ಲಿ ಅಶಾಂತಿಯೇ ಹೊರತು, ಆ ಕರ್ಮದ ಫಲ, ಪರಿಸಮಾಪ್ತಿಯ ಜ್ಞಾನದಿಂದಲೇ ಶಾಂತಿ. ಆ ಕರ್ಮಸಂಗತ್ಯಾಗ್ರವೇ ಆತ್ಮಶುದ್ಧಿ. ಆ ಸಂಗತ್ಯಾಗವೇ ನಿರ್ಲಿಪ್ತತೆ. ಅದನ್ನೆ ಕಮಲದೆಲೆಯ ದೃಷ್ಟಾಂತದಲ್ಲಿ ಬೋಧಿಸಿರುವುದು. ಯುಕ್ತಕಾರ್ಯಕಾರಿ.

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥೧೨॥

ಈ ಕರ್ಮಫಲವನ್ನು ಬಿಟ್ಟು ಶಾಂತಿಯನ್ನು ಬ್ರಹ್ಮನಿಷ್ಠಾರೂಪದಲ್ಲಿ ಕರ್ಮನಿಷ್ಠೆಯಲ್ಲಿ, ಫಲನಿಷ್ಠೆಯಲ್ಲಲ್ಲ, ಶಾಂತಿ ಹೊಂದುವನು. ಅಯುಕ್ತ ಕಾರ್ಯಕಾರಿಯು ಕಾಮಕಾರಣದಿಂದ, ಕರ್ಮಫಲಾಪೇಕ್ಷೆಯ ಆಸಕ್ತಿಯಿಂದ ಕರ್ಮಬಂಧಿತನಾಗುವನು. ಯಾವ ಕರ್ಮ ಯಾವ ರೀತಿ ಮಾಡಿದರೆ ಬಂಧಿಸುತ್ತೆ; ಯಾವುದು ಯಾವ ರೀತಿ ಮಾಡಿದರೆ ಕರ್ಮಬಂಧನವಿಲ್ಲ; ಬಂಧನವಿಲ್ಲದ್ದೇ ಶಾಂತಿ. ಆ ಬಂಧನ ಬಿಡಿಸುವುದೇ ಜ್ಞಾನ. ಅಜ್ಞಾನದಿಂದ ಚಿತ್ತಶುದ್ಧಿ ಹೊಂದಿ, ನಿರ್ಲಿಪ್ತ ನಿಷ್ಕಾಮ ಕರ್ಮದಿಂದ, ಕರ್ಮ ಮಾಡಿದರೆ ಬಂಧನವಿಲ್ಲ.

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನಕಾರಯನ್ ॥೧೩॥

"ನಾನು ಆತ್ಮ, ನಿಸ್ಸಂಗಿ; ಕರ್ಮ ಮಾಡುವುದು ದೇಹ" ಎಂದು ಸರ್ವಕರ್ಮಗಳನ್ನೂ ಮನದಿಂದ ತ್ಯಾಗಮಾಡಿ, ದೇಹದಿಂದ ಭಿನ್ನವಾಗಿರುವ ಆತ್ಮವನ್ನು

ತಿಳಿದ ವಶೀಕೃತಾಂತಃಕರಣವುಳ್ಳವನು (ತನ್ನ ಅಂತಃಕರಣವನ್ನು ವಶಮಾಡಿ ಕೊಂಡಿರುವವನು) ಯಾವ ಕಾರ್ಯವನ್ನು ಮಾಡದೆಯೂ, ಯಾವ ಕಾರ್ಯವನ್ನು ಮಾಡಿಸದೆಯೂ, ಈ ನವದ್ವಾರಪುರವೆಂಬ ದೇಹದಲ್ಲಿ ಸುಖವಾಗಿರುವನು. "ನವದ್ವಾರೇ ಪುರೇ ದೇಹೀ" ಎಂಬುದು ಎಷ್ಟು ಸಮಂಜಸವಾಗಿದೆ ನೋಡಿ. ಒಂದು ದ್ವಾರವಿರುವ ಪುರವನ್ನು ಹೇಗಾದರೂ ಆ ಬಾಗಿಲಿನಲ್ಲಿ ಕಾವಲು ಹಾಕಿ ಕಾಪಾಡಬಹುದು. ನವದ್ವಾರಪುರವನ್ನು ಕಾಪಾಡುವುದು ಎಷ್ಟು ಕಷ್ಟ! ಶತ್ರುಗಳು ನುಗ್ಗಲು, ದ್ರೋಹಿಗಳು ಹೊರಕ್ಕೆ ನುಸುಳಲು ದ್ವಾರಗಳೆಷ್ಟೋ? ರಂಧ್ರಗಳು, ಕಂಡಿಗಳೇ ಸಾಕು. ಅಷ್ಟು ದ್ವಾರಗಳಲ್ಲಿಯೂ, ಹೊರಶತ್ರು ಒಳನುಗ್ಗದೆಯೂ ಅಂತಃಶತ್ರು(ಹೊರಗಣ ಶತ್ರುಗಳನ್ನೆಂತಿದ್ದರೂ ಎದುರಿಸಬಹುದು, ಶತ್ರುಗಳೆಂದು ಕಾಣುತ್ತಾರೆ. ಅಂತಃಶತ್ರುಗಳನ್ನೆದುರಿಸುವುದು ಕಷ್ಟ. ಶತ್ರುಗಳೆಂದು ಗೋಚರವಾಗುವುದಿಲ್ಲ. ಗುಪ್ತಶತ್ರುಗಳಂತೆ (Quislings) ನಮ್ಮನ್ನು ಅಧಃಪತನಕ್ಕೆಳೆವವರು) ಬಹಿಃಶತ್ರುಗಳೊಡನೆ ನುಸುಳಿಕೊಂಡು ನವದ್ವಾರಗಳಿಂದ ಹೋಗಿ ಸೇರಿಕೊಂಡು ನಮ್ಮ ಪತನಕ್ಕೆ ಕಾರಣವಾಗದಂತೆಯೂ ರಕ್ಷಿಸಿಕೊಳ್ಳುವುದು ಎಷ್ಟು ಕಠಿನ! ಈ ಶರೀರವೆಂಬ ದೇಹದಲ್ಲಿಯೂ ನವದ್ವಾರಗಳಿವೆ. ಅವೇ ಬಲವಾದ ಇಂದ್ರಿಯಗಳಿಗೆ ಮಾರ್ಗಗಳು. ಈ ಇಂದ್ರಿಯಗಳೇ ನಮಗೆ ಅಂತಃಶತ್ರುಗಳಾಗಿ ಹೊರಗಿನ ವಿಷಯಗಳೆಂಬ ಶತ್ರುಗಳೊಡನೆ ಸೇರಿ ನಿತ್ಯಶರೀರವ್ಯಾಪಾರದಲ್ಲಿ (ಪುರವ್ಯಾಪಾರದಂತೆಯೇ) ನಮ್ಮನ್ನು ಹದಗೆಡಿಸಿ, ಪತನಕ್ಕೆ ಕಾರಣವಾಗದಂತೆ ಎಚ್ಚರಿಕೆಯಿಂದಿರಬೇಕಾದರೆ, ದೇಹಿಯು ಮುನ್ನೆಚ್ಚರಿಕೆಯಿಂದಲೇ, ಸರ್ವಕರ್ಮಗಳನ್ನೂ ಮನದಿಂದ ತ್ಯಾಗಮಾಡಿ, ಅಂತಃಕರಣವನ್ನು ವಶಮಾಡಿಕೊಂಡು ಆತ್ಮವಂತನಾಗಿ ಇಹವ್ಯಾಪಾರಗಳಲ್ಲೆಲ್ಲ ಎಚ್ಚರದಿಂದಿರಬೇಕು. ಈ ದೇಹವನ್ನು ಪುರಕ್ಕೆ ಹೋಲಿಸಿ, ಅನಾಯಕವಾದ ಈ ಪುರವನ್ನು ಗೆದ್ದು ಚಕ್ರವರ್ತಿಯಾಗಿ ನೆಲಸಿ, ಸ್ಥಿರವಾದ ಏಕಚಕ್ರಾಧಿಪತ್ಯ ಮಾಡಲು, ಪರಮೇಶ್ವರನಿಗೆ ಶಂಕರರು ಒಂದು ಸ್ತೋತ್ರದಲ್ಲಿ ಪ್ರಾರ್ಥಿಸಿದ್ದಾರೆ. ಈಶ್ವರಾರ್ಪಣವಾದರೆ ಆತ್ಮವಂತರಾಗಿ ಸ್ವಯಂ ಚಕ್ರವರ್ತಿಯಾಗಿ, ಸುಖವಾಗಿ ನಮ್ಮ ನವದ್ವಾರಪಟ್ಟಣದ ಆಧಿಪತ್ಯವನ್ನು ನಾವೇ ವಹಿಸುವೆವು. ಸುಖವಾಗಿ ದೇಹಯಾತ್ರೆ ಸಾಗಲು ಸುಲಭೋಪಾಯ--ಸರ್ವಕರ್ಮವನ್ನೂ ಮನಸ್ಸಿನಿಂದ ತ್ಯಜಿಸಿ ಕರ್ತೃತ್ವಕ್ಕೆ ಆತ್ಮಾಧಿಕಾರವನ್ನು ಬಿಟ್ಟುಬಿಡುವುದು.

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥

ಪರಮಾತ್ಮನು (ಎಲ್ಲರ ಪ್ರಭು ತಾನಾದರೂ) ಲೋಕದಲ್ಲಿ ದೇಹಾದಿಗಳ (ಮನುಷ್ಯರ) ಕರ್ತೃತ್ವವನ್ನೂ ಮತ್ತು ಮಾಡುವ ಕರ್ಮಗಳನ್ನೂ ಉತ್ಪತ್ತಿ ಮಾಡುವುದಿಲ್ಲ. ಕರ್ತೃತ್ವವೂ, ಕರ್ಮವೂ ಹುಟ್ಟಿಸದ ಮೇಲೆ ಇನ್ನು ಆ ಕರ್ಮ ಫಲಸಂಯೋಗವನ್ನೆಂತು ಹುಟ್ಟಿಸುವುದು? ಅದೂ ಇಲ್ಲ. ಇವೆಲ್ಲ ಸ್ವಭಾವತಃ ಪ್ರವರ್ತಿಸುತ್ತವೆ, ಪ್ರಕೃತಿಕಾರ್ಯ. ಪ್ರಕೃತಿಕಾರ್ಯಗಳೆಲ್ಲ—ಅವಿದ್ಯಾ, ಕಾಮ, ಕರ್ಮಗಳಿಂದ ನಡೆಯುತ್ತವೆ. ಆದರ ಸರಣಿಯಲ್ಲಿ ಅ. ೩. ಶ್ಲೋ ೩೩ ರಲ್ಲಿ ಹೇಳಿದಂತೆ "ಪ್ರಕೃತಿಂ ಯಾಂತಿ ಭೂತಾನಿ" ಪರಮಾತ್ಮನಲ್ಲ ಪ್ರಭುವು. ನಮ್ಮ ಕರ್ಮವನ್ನೂ ಕರ್ತೃತ್ವವನ್ನೂ ಉತ್ಪತ್ತಿ ಮಾಡಿದ ಮೇಲೆ ಅವು ಹೇಗೆ ಉತ್ಪನ್ನ ವಾದುವು? ನಾವು ನಮ್ಮ ಪ್ರಕೃತಿಯನ್ನು ಸೃಷ್ಟಿಸುತ್ತೇವೆ, ಆ ಪ್ರಕೃತಿ ನಮ್ಮ ಕಾರ್ಯವನ್ನು ಮಾಡಿಸುತ್ತದೆ. ಹಿಂದಿನ ಕರ್ಮಗಳಿಂದ ನಮ್ಮ ಈಗಿನ ಕರ್ಮಕ್ಕೆ ಎಡೆಮಾಡಿದ್ದೇವೆ. ಆ ಕರ್ಮಫಲಗಳಿಂದ, ಈ ಕರ್ಮ ಉತ್ಪನ್ನ. ಆ ಕರ್ಮ ವಾಸನೆಯಿಂದ ಈ ಕರ್ಮ ಸೃಷ್ಟಿ. ಆ ಸ್ವಂತಭಾವವೇ ಸ್ವಭಾವ. ಅದೇ ಸತತ ಪ್ರವಾಹದಲ್ಲಿ ಪ್ರವರ್ತಿಸುತ್ತದೆ. ಒಂದರಿಂದ ಒಂದು—ಸರಪಣಿಯಂತೆ; ಪ್ರತಿ ಕರ್ಮವೂ ಮತ್ತೊಂದು ಕರ್ಮಕ್ಕೆ ಕೊಕ್ಕೆಯಂತೆ ಬಂಧನ. ಬಂಧಿಸುವುದು ಸ್ವಂತ ಭಾವ (ಕರ್ಮವಾಸನಾ) ಕರ್ಮ ಮಾಡಿ ಮಾಡಿ ಕರ್ತೃತ್ವವನ್ನು ಕೊಟ್ಟು ದೇಹದ ಸ್ವಭಾವವಾಗಿ ಬಿಟ್ಟಿದೆ—ಅವರವರ ಕರ್ಮದ ಗಂಟಿನ ಸ್ವಭಾವ.

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥

ಅಂದಮೇಲೆ, ವಿಭುವು (ಅಲ್ಲಿ ಪ್ರಭುಃ, ಇಲ್ಲಿ ವಿಭುಃ) ಯಾವುದೊಂದು ಜೀವನ ಪಾಪವನ್ನೂ ಪುಣ್ಯವನ್ನೂ ಗ್ರಹಿಸುವುದಿಲ್ಲ. ವಿಶ್ವದಲ್ಲಿನ ಸಮಸ್ತ ಚರಾಚರಗ ಳಲ್ಲೂ ವಿಕಾಸಗೊಳ್ಳುವವನು ವಿಭು. ಪ್ರಭುತ್ವವಿದ್ದರೂ ತಾನು ಕರ್ತೃತ್ವ ವನ್ನೂ ಕರ್ಮವನ್ನೂ ಹುಟ್ಟಿಸುವುದಿಲ್ಲ—ಆದರದರ ಪ್ರಾರಬ್ಧಾನುಪ್ರಕಾರ ನಡೆಯಲು ಬಿಟ್ಟುಬಿಡುವನು; ವಿಭುವಾದರೂ ಆ ಕರ್ಮದ ಫಲಗಳನ್ನು ಗ್ರಹಿಸುವುದಿಲ್ಲ. ತಾನು ಸಾಕ್ಷಿರೂಪವಾಗಿ ನಿಜರೂಪದಿಂದ "ಪುಮಾನ್,

ವಿಪಾಪ್ಮಾ, ವಿರಜಾ, ವಿಮೃತ್ಯುಃ" ಸರ್ವಗತವಾಗಿರುತ್ತೆ. ಪಾಪವೇನೋ ಗ್ರಹಿಸಿಕೊಳ್ಳಲಿ ಎಂದು ನಾವು ಬಿಟ್ಟುಕೊಡಲು ಸಿದ್ಧರಾಗಿದ್ದೇವೆ. ಕ್ರೈಸ್ತ ಪಾದ್ರಿಗಳು, ಭಕ್ತರಿಂದ ಪಾಪಉಚ್ಚಾರಣೆ ಗೋಪ್ಯವಾಗಿ ಕೇಳಿ, ಅವನ್ನೆಲ್ಲ ದೇವರಿಗೆ ಒಪ್ಪಿಸಿ, ಪಾಪಿಗಳನ್ನೆಲ್ಲ ವಿಮುಕ್ತರನ್ನಾಗಿ ಮಾಡುತ್ತಾರಂತೆ. ಆ ಸುಲಭೋಪಾಯ ನಮ್ಮ ವಿಭುವಿನಲ್ಲಿ ಸಾಧ್ಯವಿಲ್ಲ. ಏನೋ ಪಾಪಕ್ಕೆ ಪಶ್ಚಾತ್ತಾಪಪಟ್ಟರೆ ಅದಕ್ಕೆ ಪ್ರಾಯಃ ಪರಿಹಾರಾಂಕುರವಾದಂತಿರಬಹುದು. ಆದರೆ ಪಾಪಗಳನ್ನೆಲ್ಲ ನಾವು ಮಾಡಿಬಿಟ್ಟು, ಗುರುವಿನ ಕಿವಿಗೆ ಹಾಕಿಬಿಟ್ಟು, ಗುಟ್ಟಾಗಿ ವಿಭುವಿಗೆ ಒಪ್ಪಿಸಲು ಅವಕಾಶವಿಲ್ಲ. ಪಶ್ಚಾತ್ತಾಪಪಟ್ಟು, ಪ್ರಾಯಶ್ಚಿತ್ತ ರೂಪವಾಗಿ 'ಪುನಃ ಪಾಪಮಾಡುವುದಿಲ್ಲ'ವೆಂದು ಧೀರಪ್ರತಿಜ್ಞೆ ಮಾಡಿದರೆ, ಆ ಪಾಪಮಾಡಿದುದಕ್ಕೆ ಸಾರ್ಥಕವೇ ಆಯಿತು. ಆ ಪಾಪಕಾರ್ಯವು ಮುಂದೆ ನಮ್ಮನ್ನು ಆ ಪಾಪಮಾರ್ಗಕ್ಕೆ ಹೋಗದಂತೆ ಎಚ್ಚರಿಸಿ ಪಾಪದಿಂದ ಕಾಪಾಡಿದರೆ ಅದೂ ಒಂದು ಉಪಕಾರವೇ ಆಯಿತು. ಹೋಗಲಿ, ಪುಣ್ಯಮಾಡಿದೀವಪ್ಪಾ, ಅದನ್ನಾದರೂ ತೆಗೆದುಕೊಂಡು ಫಲ ಸ್ವೀಕರಿಸು ಅಂದರೆ, ಆ ಪುಣ್ಯಫಲದಾಸೆಗೆ ಅದನ್ನಾದರೂ ಒಪ್ಪಿಸಿಕೊಂಡಾನೇ ಎಂದರೆ, ಅದೂ ಬೇಡ ವಿಭುವಿಗೆ. ಎರಡರ ಊಟವೂ ಬೇಡ. ಪಾಪಪುಣ್ಯದ ಫಲಊಟವೆಲ್ಲ ಪಾಪ ಪುಣ್ಯ ಮಾಡಿದವನೇ ಅನುಭವಿಸಬೇಕು. ತೆಂಗಿನಮರ ಹತ್ತಿದವನೊಬ್ಬ, ಇಳಿದವ ಮತ್ತೊಬ್ಬ, ಅದು ಹೇಗಾಗುತ್ತೆ ರೀ? ಹತ್ತಿದವನೇ ಇಳಿಯಬೇಕು. ಜಂ ಅಂತ ಹೊಟ್ಟೆ ಬಿರಿಯ ಹೊಡೆದವ ಒಬ್ಬ, ವಾಂತಿ ಇನ್ನೊಬ್ಬನಿಗೆ; ಹೇಗಾಗುತ್ತೆ ರೀ? ತಿಂದವನೇ ಅಜೀರ್ಣ, ಹೊಟ್ಟೆನೋವುಗಳಿಂದ ವಾಂತಿಮಾಡಿಕೊಳ್ಳಬೇಕು. ಆದರೂ ಮಾಡುವುದೆಲ್ಲ ಮಾಡಿ ಇನ್ನೊಬ್ಬರ ತಲೆಗೆ ಕಟ್ಟಬಿಡುವುದು ನಮ್ಮ ಅಜ್ಞಾನ ಮೋಹ. ಕೋತಿಯು ಮೊಸರನ್ನವನ್ನು ತಿಂದು ಹೋತನ ಬಾಯಿಗೆ ಒರಸಿ, ಯಜಮಾನನಿಗೆ ವಂಚಿಸುವಂತೆ ಆಸ್ಪದವಿಲ್ಲ. ಕಳುವಿನಿಂದಾಗಲಿ ಮೋಸದಿಂದಾಗಲಿ ನಮ್ಮ ತಪ್ಪುಗಳನ್ನು ಇನ್ನೊಬ್ಬರ ಮೇಲೆ ತೇಪೆ ಹಾಕುವಂತಿಲ್ಲ. ನಮ್ಮ ತಲೆಗೆ ಕಟ್ಟಿದ್ದು ಅದರ ಫಲಾಫಲಗಳನ್ನು ನಾವೇ ಅನುಭವಿಸಿ ತೀರಬೇಕು. ಏಕೆಂದರೆ ಅವರ ಅಜ್ಞಾನದಿಂದ ಅವರ ಆ ಜ್ಞಾನ ಆವರಿಸಿ ಜೀವಿಗಳನ್ನು ಮೋಹಗೊಳಿಸುತ್ತೆ, ಅವಿವೇಕಿಗಳನ್ನಾಗಿ ಮಾಡುತ್ತೆ. ಅವನು ಜ್ಞಾನಿಯಾಗಲಿ ಅಜ್ಞಾನಿಯಾಗಲಿ ತಾನು ಮಾಡಿದುದರ ಫಲವನ್ನೆಲ್ಲವನ್ನೂ ಅವನೇ

ಅನುಭವಿಸಿ ತೀರಬೇಕು. ಅವರು ಒಪ್ಪಿ ತೆಗೆದುಕೊಳ್ಳಲು ಸಿದ್ಧರಿದ್ದರೂ ಇನ್ನೊಬ್ಬರಿಗೆ ಒಪ್ಪಿಸಲಾಗದು.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥

ಯಾವನ ಅಜ್ಞಾನವು ಆತ್ಮಜ್ಞಾನದಿಂದ ನಾಶವಾಗಿರುವುದೋ ಆತನ ಸೂರ್ಯ ಪ್ರಕಾಶವಾದ ಜ್ಞಾನವು ತತ್‌ಪರಂ—ಆ ಪರಬ್ರಹ್ಮವನ್ನು ಪ್ರಕಾಶಿಸುವುದು. ಸೂರ್ಯೋದಯವಾದಾಗ ಕತ್ತಲೇ ಬೆಳಕಾಗುವಂತೆ ಅಜ್ಞಾನವೇ ಆತ್ಮಜ್ಞಾನ ಸೂರ್ಯನಿಂದ ಬೆಳಕಾಗುವುದು, ಅಜ್ಞಾನದ ಆ ಮುಸುಕು ಮೋಹ ಮಾಯ ವಾಗುವುದು.

ಈ ಮಾಯೆಯ ಮಾಯಾವಿಯೇ ಸೂರ್ಯ; ಎಂತಹ ದಟ್ಟವಾದ ಮಂಜು ಕವಿದು ಎಲ್ಲವೂ ಮುಚ್ಚಿಹೋಗಿದ್ದರೂ, ಸೂರ್ಯಪ್ರಕಾಶದಿಂದ ಎಲ್ಲವೂ ಮಾಯ ವಾಗಿ ದೃಷ್ಟಿಗೋಚರವಾಗುವಂತೆ. ಹಿಂದೆ (ಅ ೪, ಶ್ಲೋ ೧) ನಿಷ್ಕಾಮ ಕರ್ಮಯೋಗವನ್ನು (ಬರೀ ಕರ್ತವ್ಯದೃಷ್ಟಿಯಿಂದಲೇ ಕರ್ಮಮಾಡತಕ್ಕ ನಿಷ್ಠೆ ಯನ್ನು ತಾನೇ ಸರ್ವಕಾಲಕ್ಕೂ ಕರಾರುವಾಕುಕರ್ಮವನ್ನು ಈಗಲೂ ಮಾಡಿ ತೋರಿಸುತ್ತಿದ್ದಾನೆ ಸೂರ್ಯಭಗವಾನ್) ಸೂರ್ಯದೇವನೇ ಕೃಷ್ಣಪರಮಾತ್ಮನಿಂದ ಹೊಂದಿದನು. ಮನು ಇಕ್ಷ್ವಾಕುಗಳ ಮೂಲಕ ಪ್ರಪಂಚಕ್ಕೆ ಉಪದೇಶಿಸಿದನು. ಈಗ ತತ್ಪರವನ್ನು ಪ್ರಕಾಶಿಸಬೇಕಾದರೂ ಅಜ್ಞಾನನಾಶಕ್ಕೂ ಸೂರ್ಯದೇವನ ಉಪಮಾನವನ್ನೇ ತೆಗೆದುಕೊಂಡಿದ್ದಾನೆ. ಕರ್ಮ ಜ್ಞಾನಪ್ರಕಾಶಕ್ಕೆ ಅಧಿ ದೇವತೆ ಸೂರ್ಯ.

ಮಯೂರನು ಸೂರ್ಯಶತಕದಲ್ಲಿ ಸೂರ್ಯಭಗವಾನನನ್ನು ಈ ರೀತಿ ಪ್ರಾರ್ಥಿಸಿ ದ್ದಾನೆ: "ದೇವಃ ಕಿಂ ಬಾಂಧವಸ್ಸ್ಯಾತ್, ಪ್ರಿಯಸುಹೃದಥವಾಚಾರ್ಯ,ಆಹೋಸ್ವಿ ದಾರ್ಯೋ, ರಕ್ಷಾ, ಚಕ್ಷುರ್ನುದೀಪೋ, ಗುರುರುತಜನಕೋ, ಜೀವಿತಂ ಜೀಜ ಮೋಜಃ ಏವಂ ನಿರ್ಣೀಯತೇಯಃ ಕಇವ, ನ ಜಗತಾಂ, ಸರ್ವಥಾ ಸರ್ವ ದಾಸೌ, ಸರ್ವಾಕಾರೋಪಕಾರೀ, ದಿಶತುದಶಶತಾ, ಭೀಶುರಭ್ಯರ್ಥಿತಂವಃ" ಸೂರ್ಯನು ದೇವನೆ? ಬಾಂಧವನೆ? ಮಿತ್ರನೆ? (ಪ್ರಿಯಸುಹೃತ್) ಆಚಾರ್ಯನೆ? ರಕ್ಷಕನೆ? ಕಣ್ಣೆ? ದೀಪವೆ? ಗುರುವೆ? ತಂದೆಯೆ? ಜೀವನದ ಬೀಜ ಮತ್ತು ಶಕ್ತಿಯೆ? ಗೊತ್ತುಮಾಡಲಾಗುವುದಿಲ್ಲ! ಜಗತ್ತಿಗೆ ಸರ್ವಥಾ, ಸರ್ವದಾ,

ಸರ್ವಕಾರೋಪಕಾರಿಯಾಗಿ ನೀನು ಯಾಚಿಸುವುದನ್ನು ಸಹಸ್ರಕಿರಣನು ಅನುಗ್ರಹಿಸಲಿ. ಸೂರ್ಯನಂತೆ ಎಂದು ಹೇಳಿಬಿಟ್ಟಮೇಲೆ, ಜ್ಞಾನವೂ ಪ್ರಪಂಚವನ್ನು ಜ್ಞಾನಿಗಳನ್ನು ಈ ರೀತಿಯೇ ಕಾಪಾಡುತ್ತದೆ.

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾ ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥೧೭॥

ಜ್ಞಾನದಿಂದ ಯಾರ ಬುದ್ಧಿಯು ಪರಬ್ರಹ್ಮನಲ್ಲಿರುವುದೋ, ಯಾರ ಆತ್ಮವೇ ಪರಬ್ರಹ್ಮವೋ, ಯಾರ ನಿಷ್ಠೆಯು ಪರಬ್ರಹ್ಮನಲ್ಲಿ ನೆಲಸಿ ತತ್ಪರಾಯಣರಾಗಿರುವರೋ (ಎಲ್ಲವನ್ನೂ ಬಿಟ್ಟು ಅದನ್ನೆ ಚಿಂತಿಸುತ್ತಿರುವರೋ) ಅವರ ಜ್ಞಾನದಿಂದ ಕಲ್ಮಷಗಳೆಲ್ಲ ನಾಶವಾಗಿ, ಇಲ್ಲಿಂದ, ಪುನಃ ಹಿಂತಿರುಗದಂತೆ (ಜನ್ಮಎತ್ತದಂತೆ) ಹೊರಟುಹೋಗುತ್ತಾರೆ (ಮೋಕ್ಷಪ್ರಾಪ್ತಿ.)

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥೧೮॥

ವಿದ್ಯಾವಿನಯಸಂಪನ್ನನಲ್ಲಿಯೂ, ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಗಜದಲ್ಲಿಯೂ, ನಾಯಿಯಲ್ಲಿಯೂ, ನೀಚನಾದ ನಾಯಿ ತಿನ್ನುವವ (ಚಂಡಾಲ) ನಲ್ಲಿಯೂ, ಪಂಡಿತರು ಸಮದರ್ಶಿಗಳಾಗಿದ್ದಾರೆ.

ಈ ದೃಷ್ಟಿದರ್ಶನ ಬರಬೇಕಾದರೆ ಯಾವ ಅಂತಸ್ತಿಗೇರಿರಬೇಕು! ವಿದ್ಯಾವಿನಯ ಸಂಪನ್ನನಾಗಿರಬೇಕು. ವಿದ್ಯದಿಂದ ಅಜ್ಞಾನ ಹೋಗಿರುತ್ತೆ, ವಿಷಯಜ್ಞಾನ ಬಂದಿರುತ್ತೆ. ವಿಷಯಗಳ ಅಂತರವನ್ನು ಹೊಕ್ಕು ನೋಡುವ ದರ್ಶಿಯಾಗಿರುತ್ತಾನೆ. ವಿನಯದಿಂದ ಅಹಂಕಾರ, ಮಮಕಾರ ಹೋಗಿರುತ್ತೆ, ತನ್ನ ಅಲ್ಪತ್ವವು ವೇದ್ಯವಾಗಿರುತ್ತೆ, ದುರಹಂಕಾರ ತಲೆಹಾಕದು, ಭೇದಭಾವ ವಳಿವುದು. ಸಂಪನ್ನನಾಗಬೇಕಾದರೆ ಸಾಧನೆಮಾಡಿ ತನ್ನನ್ನು ತಾನು ವಶಮಾಡಿಕೊಂಡಿರುತ್ತಾನೆ. ವಿವೇಚನೆಯಿಂದ ತುಂಬಿದ ಕೊಡದಂತೆ ಗಂಭೀರನಾಗುತ್ತಾನೆ. ಇಂತಹವನಿಗೆ ತಾರತಮ್ಯಭಾವವೆಲ್ಲಿ? ಒಳಗಿನ ಸಮಸತ್ವ ಸತ್ಯವನ್ನೇ ನೋಡುತ್ತಾನೆ. ಗುಣಾತೀತನಾಗುತ್ತಾನೆ. ಇಲ್ಲಿ ಕೊಟ್ಟಿರುವ ದೃಷ್ಟಾಂತಗಳಲ್ಲಿ ಸತ್ತ್ವ ರಜೋ ತಮೋ ಗುಣಾಧಿಕಾಂಶವುಳ್ಳ ಮೂರು ಪ್ರಾಣಿಗಳನ್ನು ಹೇಳಿ ಅವುಗಳನ್ನು ತ್ರಿಗುಣಾತೀತ ದೃಷ್ಟಿಯಿಂದ ನೋಡುತ್ತಾನೆ. ಬ್ರಾಹ್ಮಣನಲ್ಲಿ ತತ್ತ್ವಕಾಂಕ್ಷೆಯಾಗಿ ಸತ್ತ್ವಗುಣಾಧಿಕವಾಗಿರುತ್ತೆ. ಹಸುವಿನಲ್ಲಿ, ರಜಸ್ಸಿ

ನಿಂದ ಪರೋಪಕಾರಿ ಪ್ರಾಣಿ, ರಜೋಗುಣಾಧಿಕವಾಗಿರುತ್ತೆ. ಆನೆಯಲ್ಲಿ ತಾಮಸಗುಣ (ಕಾಡಾನೆಯಲ್ಲಿ, ಮದಿಸಿದಾನೆಯಲ್ಲಿ ಅವು ಸ್ವೇಚ್ಛಾಪ್ರವರ್ತನೆಯಲ್ಲಿದ್ದಾಗ ಕಾಣಬೇಕು)ಅಧಿಕಾಂಶವಾಗಿದೆ. "ನಿಸ್ತ್ರೈಗುಣ್ಯೇ ಪಥಿ ವಿಚಾರತೋ ಕೋ ವಿಧಿಃ, ಕೋ ನಿಷೇಧಃ" ಎಂದು ಶುಕರು ಹೇಳಿದಂತೆ ನಾಯಿ, ಚಂಡಾಲರಲ್ಲಿ ಕೂಡ, ತಾಮಸರಲ್ಲಿ, ತಾಮಸರಾದವರಲ್ಲಿ ಕೂಡ ಸಮದರ್ಶಿತ್ವ ಇಡುತ್ತಾರೆ. ಸೂರ್ಯಪ್ರಕಾಶಕ್ಕೆ ಜ್ಞಾನವನ್ನು ಹೋಲಿಸುವುದರಲ್ಲಿ ಅಂಧಕಾರವನ್ನು ನಾಶಮಾಡುವ ಗುಣವಲ್ಲದೆ ಸೂರ್ಯದೇವನ ದೃಷ್ಟಿಯಲ್ಲಿ ಎಲ್ಲ ಜಗತ್‌ಸೃಷ್ಟಿಯಲ್ಲಿಯೂ ಸಮತ್ವವಿದೆ. ಸಮದರ್ಶಿಯೆಂದರೆ ಸೂರ್ಯಪರಮಾತ್ಮನಲ್ಲದೆ ಯಾರು? ಅಲ್ಲದೆ ದೋಷನಿರ್ಲಿಪ್ತ. ಕಠೋಪನಿಷತ್ತಿನಲ್ಲಿ "ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ, ಚಾಕ್ಷುಷೈರ್ಬಾಹ್ಯ ದೋಷೈಃ" ಎಂಬಂತೆ ಜ್ಞಾನಿಯೂ "ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" ಕಮಲಮಿತ್ರನಾದ ಸೂರ್ಯನು ಕಮಲಪತ್ರದಂತೆ ನಿರ್ಲಿಪ್ತನು, ಸಮದರ್ಶಿ, ಸರ್ವಪ್ರಕಾಶಿ. ಜ್ಞಾನದ ಎಲ್ಲಾ ಲಕ್ಷಣಗಳೂ ಸೂರ್ಯಪ್ರಕಾಶದಲ್ಲಿವೆ.

ಇಹೈವ ತೈರ್ಜಿತಃಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।<br>
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥೧೯॥

ಯಾರ ಮನಸ್ಸು ಸಮದರ್ಶನದಲ್ಲಿ ಸ್ಥಿತವಾಗಿದೆಯೋ ಅವರಿಂದ ಪ್ರಪಂಚವು ಜಯಿಸಲ್ಪಟ್ಟಿರುವುದು. ಅವರೇ ಪ್ರಪಂಚಕ್ಕೆ ಗುರುಗಳು, ಪ್ರಪಂಚೋದ್ಧಾರಕರು. ಯಾವ ಕಾರಣದಿಂದ ಪರಬ್ರಹ್ಮವು ನಿರ್ದೋಷವಾಗಿಯೂ ಸಮವಾಗಿಯೂ ಇರುವುದೋ ಆ ಕಾರಣದಿಂದ ಈ ಸಮದರ್ಶಿಗಳು ಪರಬ್ರಹ್ಮನಲ್ಲಿ ಸ್ಥಿರರಾಗಿರುವರು. "Liberty, Fraternity and Equality" ಎಂದು ಈಚೆಗೆ ಫ್ರೆಂಚ್ ರಾಜಕೀಯರು ಉದ್ವೇಗದಲ್ಲಿ ಹೊಸದಾಗಿ ತೋರಿದೆವೆಂದು ತಿಳಿದುಕೊಂಡ ಪ್ರಗತಿಮಾರ್ಗ ಸನಾತನ ಧರ್ಮದಲ್ಲಿಯೇ ಗೀತಾಕಾಲದಲ್ಲಿಯೇ ಪ್ರಸಿದ್ಧವಾದ ಜ್ಞಾನಮಾರ್ಗವಾಗಿತ್ತು. ಈಗಿನ ಉಲ್ಬಣವಿಲ್ಲದೆ ಸದಾಚಾರಕ್ಕನುವಾಗಿತ್ತು. ಇಂಥ ವಿದ್ಯಾವಿನಯಸಂಪನ್ನರಾದ ತತ್ತ್ವದರ್ಶಿಗಳು, ಸಮದರ್ಶಿಗಳು, ಶ್ರೀ ವಿದ್ಯಾರಣ್ಯರೇ ಮಾಧವಮಂತ್ರಿಗಳಾಗಿಯೂ ಯತಿವರ್ಯರಾಗಿಯೂ ಪ್ರಪಂಚಕ್ಕೆ ಗುರುಗಳಾಗಿಯೂ ರಕ್ಷಕರಾಗಿಯೂ ಉದ್ಭವಿಸಿ ಉದ್ಧರಿಸಿದರು. ಇತ್ತೀಚೆಗೆ ಮಹಾತ್ಮಾ ಗಾಂಧಿಯವರೂ ಸಮದರ್ಶಿಗಳಾಗಿ ರಾಜಕೀಯ

ದಲ್ಲಿಯೂ, ಸ್ವತಂತ್ರ್ಯಹೋರಾಟದಲ್ಲಿಯೂ ತತ್ತ್ವದರ್ಶನವನ್ನು ಅಭ್ಯಸಿಸಿ ಕಲಿಸಿಕೊಟ್ಟು ಭಾರತವನ್ನು ಸ್ವತಂತ್ರರಾಜ್ಯವನ್ನಾಗಿಸಿ ಅಹಿಂಸೆಯಿಂದಲೂ ಶತ್ರುಗಳಲ್ಲಿ ಪ್ರೀತಿಯಿಂದಲೂ ಗೆದ್ದು ಭಾರತಪುತ್ರರಿಗೆ ಜ್ಞಾನಮಾರ್ಗವನ್ನು ಕರ್ಮದಲ್ಲಿ ಸಾಧಿಸಿದರು.

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥೨೦॥

ಇಂತಹ ಬ್ರಹ್ಮವಿದನು, ಇಷ್ಟವಸ್ತುಪ್ರಾಪ್ತಿಯಾದಾಗ ಮನಸ್ಸಿನಲ್ಲಿ ಆಹ್ಲಾದ ಪಡುವುದಿಲ್ಲ, ಅನಿಷ್ಟವಸ್ತುವು ಪ್ರಾಪ್ತವಾದಾಗ ಗಾಬರಿಪಡುವುದಿಲ್ಲ, ದುಃಖ ಪಡುವುದಿಲ್ಲ. ಸ್ಥಿರಬುದ್ಧಿಯಿಂದಲೂ, ಮೂಢತ್ವವಿಲ್ಲದೆಯೂ, ಪರಬ್ರಹ್ಮದಲ್ಲಿ ಸ್ಥಿರನಾಗಿರುವನು. ಹೊರಗಿನ ಸುಖವನ್ನು ಆಸಕ್ತನಾದ ಅಂತರಾತ್ಮನ ಸುಖ ವನ್ನು ಪಡೆಯುವನು. ಆಗ ಆತ್ಮನು ಬ್ರಹ್ಮಯೋಗಯುಕ್ತನಾಗಿ ಅಕ್ಷಯ ಸುಖವನ್ನು ಅನುಭವಿಸುವನು.

ಕಠೋಪನಿಷತ್ತಿನಲ್ಲಿ "ಪರಾಞ್ಚಿ ಖಾನಿವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ಪ ಶ್ಯತಿ ನಾಂತರಾತ್ಮನ್ ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಷದಾವೃತ್ತಚಕ್ಷು ರಮೃ ತತ್ವಮಿಚ್ಛನ್" ಎಂಬ ಶ್ಲೋಕದಲ್ಲಿ ಸೃಷ್ಟಿಕರ್ತನು ನಮ್ಮ ಇಂದ್ರಿಯಗಳನ್ನೆಲ್ಲ ಬಹಿರ್ಮುಖವಾಗಿ ತಿರುಗಿಸಿರುವುದರಿಂದ, ಅವುಗಳಿಗೆ ಬಹಿರ್ದೃಷ್ಟಿಯಿರುವುದ ರಿಂದ, ಹೊರಗಿನ ವಿಷಯಗಳ ಮೇಲೆ ಹರಿದು ಅವುಗಳನ್ನು ಅನುಭವಿಸಿ ಸುಖ ಪಡಬೇಕೆಂಬ ಹಂಬಲೇ ವಿನಾ ಅವು ಅಂತರಾತ್ಮನ ಕಡೆಗೆ ನೋಡಲಾರವು. ಯಾವ ಧೀರನು ಪ್ರಯತ್ನಪೂರ್ವಕವಾಗಿ ಪ್ರತ್ಯಗಾತ್ಮನ ಕಡೆ ಅಂತರ್ದೃಷ್ಟಿ ಯನ್ನು ತಿರುಗಿಸುವನೋ, ಅವನು ಅಮೃತತ್ವವನ್ನು ಅನುಭವಿಸುವನು ಎನ್ನು ವುದರ ಸಾರಾಂಶವನ್ನೇ ಸ್ವಾಮಿ ಹೇಳಿದನು. ಇಲ್ಲಿಂದ ಧ್ಯಾನ (ಅಂತರೀಕ್ಷಣ) ಯೋಗವನ್ನು ಸ್ವಾಮಿ ಆರಂಭ ಮಾಡಿದಾನೆ.

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥

ವಿಷಯೇಂದ್ರಿಯ ವಿಷಯಸುಖದಿಂದುಂಟಾಗುವ ಭೋಗಗಳೆಲ್ಲ ದುಃಖೋತ್ಪನ್ನ ವಾದವುಗಳು, ವಿಷಯಗಳ ಸಂಬಂಧದಿಂದ ವಿಷಯಗಳ ವಿಯೋಗದ ವರೆಗೆ,

ಆದ್ಯಂತವಿರುವುವು. ವಿಯೋಗವಾದೊಡನೆಯೇ ಅಲ್ಪಕಾಲ ಸುಖಾನಂತರ ದುಃಖ ಉತ್ಪನ್ನಮಾಡುವುವು.

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥೨೨॥

ಜ್ಞಾನಿಯು ಅವುಗಳಲ್ಲಿ ರಮಿಸುವುದಿಲ್ಲ. "ರಮತೇ" ಎನ್ನುವುದರಲ್ಲಿ ಎಷ್ಟು ಭೋಗಾಸಕ್ತಿ ತುಂಬಿದೆ! ಹಾಗೆ ಅವನು ಅನುಭವಿಸಿದರೂ ಆ ಕೊನೆಮೊದಲಿರುವ ಕ್ಷಣಿಕಭೋಗಕ್ಕೆ ಭೋಗಾನಂತರ ವಿಯೋಗದುಃಖ ತರುವ ಸುಖಗಳಲ್ಲಿ ಆಸಕ್ತಿ ತೋರುವುದಿಲ್ಲ. ಸುಖ ಬಂದಾಗ ಅನುಭವಿಸುವುದೊಂದು, ಬಂದಾಗ ರಮಿಸುವುದಿನ್ನೊಂದು. ಸುಖವೋ ಕಷ್ಟವೋ ಬಂದಾಗ ಸುಮ್ಮನೆ ಪ್ರಾಪ್ತವಾದುದನ್ನು ಅನುಭವಿಸುವುದು ಮಧ್ಯಮಾರ್ಗ. ಆದರೆ ಅದನ್ನೆ ಆಸಕ್ತಿಯಿಂದ ಎದುರುನೋಡಿ, ಅದರ ಅನುಭವದಲ್ಲಿ ಅತಿ ಆಸಕ್ತಿ ತೋರಿಸಿ, ಹೆಚ್ಚಿನ ಅವಲಂಬನವನ್ನು ತೋರಿಸುವುದು, ಆ ಸುಖಗಳಲ್ಲಿ ರಮಿಸುವುದು, ಅತಿ ಆನಂದ ತೋರಿಸುವುದು, ಆಗಬಾರದು. "ವಿಗತಸ್ಪೃಹಃ" ಹೆಚ್ಚು ಆಸಕ್ತಿಯಿಂದ ರಮಿಸುತ್ತಿದ್ದರೆ, ವಿಯೋಗದಿಂದ ಹೆಚ್ಚು ದುಃಖವೂ ಆಶಾಭಂಗವೂ ಉಂಟು. ಹೆಂಡತಿಯನ್ನಾಗಲಿ, ಮಕ್ಕಳನ್ನಾಗಲಿ ಅತಿಯಾಗಿ ಪ್ರೀತಿಸುತ್ತಿದ್ದರೆ, ವಿಯೋಗದಿಂದ ಹೆಚ್ಚಿನ ದುಃಖವುಂಟಾಗಿ ಅದನ್ನು ಸಹಿಸಲು ಅಷ್ಟು ಕಷ್ಟವಾಗುತ್ತದೆ. ರಮಿಸುವಾಗ ಅದರಲ್ಲೇ ಆಸಕ್ತನಾಗಿ ತನ್ಮಯನಾಗಿ ತನ್ನನ್ನೇ ಮರೆತಿರುವನು. ವಿಯೋಗದಿಂದ ಆ ಅಭಾವವನ್ನು ಸೈರಿಸಲು ಶಕ್ತಿ ಸಾಲದಾಗುತ್ತೆ. ಏನೋ ಪರಮಾತ್ಮ ಕರುಣಿಸಿರುವ ಅನುಕೂಲಗಳು ಇವು. "ಆದ್ಯಂತವಂತಃ" ಕ್ಷಣಿಕವು, ಇವನ್ನು ನನ್ನದಲ್ಲವೆಂದೂ ಪರಮಾರ್ಥಪ್ರೀತ್ಯರ್ಥವೆಂದೂ ಅನುಭವಿಸಿದರೆ "ರಮತೇ" ಆಗುವುದಿಲ್ಲ. ವಿಯೋಗವಾದಾಗಲೂ ಕೊಟ್ಟ ಪರಮಾತ್ಮನೇ ಕಿತ್ತುಕೊಂಡ, ನನ್ನ ಲಭ್ಯವಿಷ್ಟೇ, ಎಂಬ ಅನಾಸಕ್ತಿ ಇದ್ದರೆ ದುಃಖವೆಲ್ಲಿಯದು? ಆದಕ್ಕೆ ಮಹಾತ್ಮರು "ಅನಾಸಕ್ತಿ"ಯೋಗವೆಂದು ಈ ರೀತಿಯ ಗೀತಾತತ್ತ್ವಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಇಲ್ಲವಾದರೆ ಅಜ್ಞಾನಿಗಳು ಕೇವಲ ಪ್ರಾಣಿಗಳಂತೆ ಇಂದ್ರಿಯಸುಖಗಳಲ್ಲಿ ಆಸಕ್ತಿಯಿಟ್ಟು ರಮಿಸುವರು. ನಾಯಿನರಿಗಳು ಮಾಂಸಮೂಳೆಗಳನ್ನು ಆಸಕ್ತಿಯಿಂದ ತಿಂದು ಸುಖಪಡುವಂತೆ, ನಾವು ರಸನೇಂದ್ರಿಯದ ಸುಖದಲ್ಲಿಯೇ ಆಸಕ್ತಿ ಇಟ್ಟರೆ,

ಆ ವಿವೇಕವಿಲ್ಲದ ಪ್ರಾಣಿವರ್ಗಕ್ಕಿಂತ ಏನು ಮೇಲು? ಇಂದ್ರಿಯಸುಖಗಳೇ, ಅದರ ಆಸಕ್ತಿಯೇ ಜೀವನದ ಧ್ಯೇಯವಾಯ್ತು. ಅಜ್ಞಾನ ಆವರಣ, ಜಾಸ್ತಿಯಾದಷ್ಟೂ ಪ್ರೀತಿ, ಮೋದ, ಪ್ರಮೋದ, ಆನಂದಗಳಲ್ಲಿ ಆಸಕ್ತಿ ಜಾಸ್ತಿ. ಇಚ್ಛಿಸಿದ ವಸ್ತುವಿನ ವಿಷಯಚಿಂತನದಿಂದಲೇ, ಅದನ್ನೇ ಮನದಲ್ಲಿ ಮೆಲುಕು ಹಾಕುತ್ತ, ಅದರ ಬರವನ್ನೇ ಅತಿ ಆದರದಿಂದ ಎದುರು ನೋಡುತ್ತ, ಅವನ್ನೇ ಮೈಮರೆತು ಅತಿ ಆಸಕ್ತಿಯಿಂದ ಅನುಭವಿಸುತ್ತ ರಮಿಸಲು ಭ್ರಮಿಸಿ, ವಿಯೋಗವಾದನಂತರ ದುಃಖ ಜಾಸ್ತಿ. ಅಭಾವವನ್ನು ತುಂಬಲು ವಸ್ತುವೇ ಇರದು. ಅದರಿಂದ ಚಿಂತನವೇ ಮನವನ್ನೆಲ್ಲ ಆವರಿಸಿ ದುಃಖ ಕೊಡುವುದು.

ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥೨೩॥

ಯಾವನು ಇಹದಲ್ಲಿ ಜೀವಿಸಿರುವಾಗಲೇ, ಶರೀರ ವಿಮೋಕ್ಷವಾಗುವ ಮೊದಲೇ ಕಾಮಕ್ರೋಧಗಳಿಂದಾಗುವ ವೇಗವನ್ನು ತಡೆಯಲು ಸಮರ್ಥನೋ ಅವನೇ ಯುಕ್ತಯೋಗಿಯು; ಅವನೇ ಸುಖಿಯು. ಇಹದಲ್ಲಿ ಜೀವಿಸಿರುವಾಗ ಶರೀರ ದಿಂದ ಬಿಡುಗಡೆಯಾಗುವುದರಲ್ಲೆ ಎಂದು ಹೇಳಿರುವುದರಿಂದಲೇ, ಜೀವಿತದಲ್ಲಿ ಜೀವಮಾನದಲ್ಲಿ ಕಾಮಕ್ರೋಧಗಳು ಸ್ವಯಂ ಸಿದ್ಧವೆಂದು ಸ್ವಾಮಿ ಹೇಳಿದನು. ಇಹವ್ಯಾಪಾರದಲ್ಲಿ ಜೀವಿತ ನಡಸಲು, ಜೀವಮಾನದಲ್ಲಿ ಜೊತೆಗಾರರು ಸೇರು ವರು. ವ್ಯವಹಾರದಲ್ಲಿ ಇಚ್ಛಾಸುಖಗಳನ್ನು ಅರಸುವುದರಲ್ಲಿ ಕಾಮೋತ್ಪತ್ತಿ ಯಾಗಿಯೇ ಆಗುತ್ತೆ. ಒಂಟಿಯಾಗಿ ಅರಣ್ಯದಲ್ಲಿದ್ದವನಿಗೆ ತಪ್ಪಿದುದಲ್ಲ. "ಈ ಉಪ್ಪು ಖಾರ ತಿನ್ನೋ ದೇಹಾ ಸ್ವಾಮಿ!" ಎನ್ನುತ್ತಾರಲ್ಲ, ಹಾಗೆ ಅವರಿಗೆ ಕಾಮವಿದ್ದೇ ಇರುತ್ತೆ. ಕಾಮವನ್ನು ತೃಪ್ತಿಪಡಿಸಿದರೆ ಕಾಮವು ಅಗ್ನಿಯಂತೆ ಹೆಚ್ಚಾಗಿ ವೇಗ ಏರುತ್ತದೆ; ತೃಪ್ತಿಪಡಿಸಲು ತಡೆಗಳಾದರೆ ಕ್ರೋಧ; ಫಲಿಸ ಲಿಲ್ಲವಲ್ಲಾ ಎನ್ನುವ ಕೋಪ ಉಂಟಾಗುತ್ತದೆ; ಅದರ ವೇಗ ಇನ್ನೂ ಜಾಸ್ತಿ. ಆ ವೇಗದಲ್ಲಿ ಏನೇನೋ ವಿಕಾರ ಉಂಟಾಗುತ್ತದೆ. ಅದನ್ನು ಸಹಿಸುವುದು ಕಷ್ಟ. ಅದಕ್ಕಾಗಿ ಕಾಮಕ್ರೋಧ ಪರಿಣಾಮವಾಗಿ ಫಲಿಸುವ ದುರಂತಗಳನ್ನು ತಡೆಯಲು ಕಷ್ಟವಾದುದರಿಂದ, ಕಾಮಕ್ರೋಧಗಳಿಗೆ ಎಡೆಕೊಡದೆ ಅವುಗಳ ವೇಗವನ್ನು ತಡೆಯಬಲ್ಲವ ಯೋಗಿಯೇ! ಅವುಗಳು ಬರುವಾಗಲೇ ಅಶಾಂತಿ ಆವೇಶದಿಂದ ಅಂತಃಕರಣವೆಲ್ಲ ಬದಲಾಗುವುದು. ಅವುಗಳನ್ನು ತಡೆದರೇ

ಶಾಂತಿ. ಬಸವಣ್ಣನವರು "ಕೋಪವೆಂಬುದು ಮನೆಯ ಕಿಚ್ಚಿನಂದದಿ, ತನ್ನನ್ನು ಸುಡದೆ ಪರರನ್ನು ಸುಡದು" ಎಂದು ನುಡಿದಿದ್ದಾರೆ. ಮನೆಯ ಕಿಚ್ಚು ವೇಗವಾದರೆ, ಮನೆಯಲ್ಲಿ ವಾಸಿಸುವವರನ್ನು ಮೊದಲು ಆಹುತಿ ತೆಗೆದುಕೊಳ್ಳುವುದು; ಅನಂತರವೇ ಇತರ ಕಡೆಗಳಿಗೆ ಪಸರಿಸುವುದು. ಆದ್ದರಿಂದ ಕೋಪದ ಪರಿಣಾಮವಾಗಿ ಕೋಪಗೊಂಡವನಿಗೇ ಅನರ್ಥ ಮೊದಲು; ಅನಂತರ ಇತರರಿಗೆ. ಕೋಪಗೊಂಡವನಿಗೆ ಅನರ್ಥ ಹೆಚ್ಚು, ಇತರರಿಗೆ ಕೊಂಚ ಅನಂತರ. ಆದುದರಿಂದ ಕೋಪದ ಮೇಲೆ ಕೋಪ ಮಾಡಬೇಕು. ಕೋಪ ಬಾರದಂತೆ ತಡೆಯಬೇಕು. ಕಾಮವೂ ಕೋಪವೂ ಬಾರದಂತೆ ತಡೆಯುವುದೇ ಲೇಸು. ಕೋಪ ಬಂದು ಆವರಿಸಿದಾಗ ಮನುಷ್ಯನ ಹತೋಟಿಯೇ ಅವನಿಗೆ ಇರುವುದಿಲ್ಲ. ಅದರ ವೇಗವನ್ನು, ಇನ್ನೇನು ಬರುತ್ತಿದೆ ಎನ್ನುವಾಗಲೇ, ಯುಕ್ತಿಯಿಂದ ತಡೆಯಬೇಕು. ಸಮಾಧಾನದಿಂದಿರಬೇಕು. ಬರುತ್ತಲೇ ಆವೇಶಗೊಳ್ಳಬಾರದು. ಕಾಮಾವೇಶವು ಕ್ರೋಧಾವೇಶದಂತೆಯೇ ದಹಿಸುವುದು, ತನ್ನನ್ನು ಮೊದಲು.

ಯೋಽಂತಸ್ಸುಖೋಽಂತರಾರಾಮಸ್ತಥಾಽಂತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥

ಆದುದರಿಂದ ಈ ಕಾಮಕ್ರೋಧಗಳನ್ನು ದೂರ ಇಡಬೇಕಾದರೆ, ಯಾವನು ತನ್ನ ಸುಖವನ್ನೂ, ಆರಾಮವನ್ನೂ (ವಿಶ್ರಾಂತಿ, ಕ್ರೀಡೆ) ತನ್ನ ಜ್ಯೋತಿಯನ್ನು ತನ್ನಲ್ಲಿಯೇ ಹೊಂದುವನೋ ಆತನೇ ಯೋಗಿ, ಬ್ರಹ್ಮನಿರ್ವಾಣವನ್ನು ಪಡೆದು ಬ್ರಹ್ಮಭೂತನಾಗಿಹೋಗುವನು. ಸುಖಕ್ಕೂ, ವಿಶ್ರಾಂತಿ, ಕ್ರೀಡಾರಾಮಗಳಿಗೂ, ವಿಕಾಸಕ್ಕೂ ನಾವು ಇತರರನ್ನು ಬಯಸುವುದು. ಹೊರಗೆ ಇವನ್ನು ಹುಡುಕುವುದು. ಇವುಗಳನ್ನು ಸುಖವನ್ನೂ, ವಿಶ್ರಾಂತಿ, ವಿಕಾಸಗಳನ್ನೂ ಮನುಷ್ಯನು ಬಯಸುವುದು ತಪ್ಪಲ್ಲ. ಆದರೆ ಅವನ್ನು ಹೊರಗೆ ಇತರರಲ್ಲಿ ನೋಡುವುದು, ಅರಸುವುದೇ ತಪ್ಪು. ಅವನ್ನು ತನ್ನೊಳಗೆ "ಅಂತಃ" ಹುಡುಕಬೇಕು, ಕಾಣಬೇಕು. ಎಲ್ಲವೂ ತನ್ನಲ್ಲೇ ಇದೆ. ವಿಶಾಲವಾದ ಸಮುದ್ರದಲ್ಲಿನ ಒಂದು ಜಹಜಿನ ಸ್ತಂಭದ ಮೇಲೆ ಕೂತಿದ್ದ ಗರುಡನು, ವಿಹಾರಕ್ಕಾಗಿ, ಸುಖಕ್ಕಾಗಿ ಜಾಗ ಹುಡುಕಿಕೊಂಡು ನಾಲ್ಕು ಕಡೆಗೂ ಕೈಲಾದಷ್ಟು ಹಾರಾಡಿದನು. ಕೊನೆಗೆ ವಿರಾಮವನ್ನರಸಿದುದೇ ನಾಕಾಗಿ ವಿರಾಮ

ಕ್ಕಾಗಿ ತನ್ನ ಸ್ವಸ್ಥಾನಕ್ಕೆ ಬಂದು ನಿಶ್ಚಿಂತನಾಗಿ ನೆಲಸಿದನು. ಅದರಂತೆ ತನ್ನಲ್ಲಿಯೇ ಇದೆ. ತನ್ನಲ್ಲಿಯೇ ಅವನ್ನರಸಿ ಹೊರಗೆ ಬಯಸದೆ, 'ಬ್ರಹ್ಮ ನಿರ್ವಾಣ ಹೊರಗೇನೂ ಇಲ್ಲ, ಹೊರಗೆಲ್ಲಾ ಸುಖ ಸೊನ್ನೆ' ಎನ್ನುವುದನ್ನು ಅರಿತು, ಬ್ರಹ್ಮಭೂತನಾಗಿಹೋಗಬೇಕು.

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇರತಾಃ ॥೨೫॥

ಆ ಬ್ರಹ್ಮನಿರ್ವಾಣವನ್ನು ಹೊಂದುವುದಕ್ಕೆ ಋಷಿಗಳು ಏನೇನನ್ನು ಸಾಧಿಸುತ್ತಾರೆ ಎನ್ನುವುದನ್ನು ಹೇಳುತ್ತಾರೆ: ೧. ಕಲ್ಮಷಗಳೆಲ್ಲವೂ ಕ್ಷೀಣಿಸಿರಬೇಕು; ಕಾಯಾ ವಾಚಾ ಮನಸಾ ನಿಷ್ಕಲ್ಮಷವಿರಬೇಕು. ೨. ಸಂಶಯಗಳನ್ನೆಲ್ಲ ಕತ್ತರಿಸಿರಬೇಕು; ಯಾವುದರಲ್ಲೂ ಸಂಶಯವಿಲ್ಲದೆ, ತನ್ನಲ್ಲಿಯೇ ತನಗೆ ನಂಬಿಕೆ ಇರಬೇಕು. ೩. ಆತ್ಮಸಂಯಮಿಯಾಗಿರಬೇಕು, ನಿಗ್ರಹಫಲ ಪೂರ್ತಿಯಾಗಿರಬೇಕು. ಮೇಲಾಗಿ ೪. ಸರ್ವಭೂತಹಿತದಲ್ಲಿ ನಿರತನಾಗಿರಬೇಕು.

ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥

ಕಾಮಕ್ರೋಧಗಳನ್ನು ಬಿಟ್ಟವರಾಗಿಯೂ ತಮ್ಮ ಚೇತನವನ್ನು ಯುಕ್ತರೀತಿಯಲ್ಲಿ ಇಟ್ಟಿರುವರಾಗಿಯೂ, ಆತ್ಮವನ್ನು ತಿಳಿದವರಾಗಿಯೂ ಇರುವ ಯತಿಗಳಿಗೆ ಸರ್ವಾವಸ್ಥೆಗಳಲ್ಲೂ ಬ್ರಹ್ಮನಿರ್ವಾಣವು ಪ್ರಾಪ್ತವೇ ಆಗಿರುವುದು. 'ದೃಗ್ದೃಶ್ಯವಿವೇಕ'ದಲ್ಲಿ ಶ್ರೀ ಶಂಕರರು ಹೇಳಿರುವಂತೆ

ದೇಹಾಭಿಮಾನಗಳಿತೇ ವಿಜ್ಞಾನೇ ಪರಮಾತ್ಮನಿ ।
ಯತ್ರ ಯತ್ರ ಮನೋ ಯಾಂತಿ ತತ್ರ ತತ್ರ ಸಮಾಧಿಃ ॥

ಜ್ಞಾನ ಪಕ್ವವಾಗಿ ಕಳಿತು ದೇಹಾಭಿಮಾನವು ಬಿದ್ದುಹೋಗಿ ಪರಮಾತ್ಮ ದರ್ಶನವು ಆತ್ಮನಿಗೆ ಆದಮೇಲೆ, ಎಲ್ಲೆಲ್ಲಿ ಮನ ಹೋದರೂ ಅಲ್ಲಲ್ಲಿ ಸಮಾಧಿ, ಬ್ರಹ್ಮನಿರ್ವಾಣ ಇರುವ ಅವಸ್ಥೆ. ಎಲ್ಲಾ ಬ್ರಹ್ಮಮಯ. ಅ. ೨. ಶ್ಲೋಕ ೭೨ ರಲ್ಲಿ, "ಅಂತ್ಯಕಾಲೇಪಿ" ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ, ಕೊನೆಯ ಕಾಲದಲ್ಲಾದರೂ ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆಂದು, ಸ್ಥಿತಪ್ರಜ್ಞನ ಕೊನೆಯ ಗತಿಯನ್ನು ಎಲ್ಲಾ ವಿವರಣೆಯಾದ ಮೇಲೆ ತಿಳಿಸಿದರು. ಆದರೆ ಇಲ್ಲಿ ೨೪, ೨೫, ೨೬ ನೆಯ ಶ್ಲೋಕಗಳಲ್ಲಿ ಬ್ರಹ್ಮನಿರ್ವಾಣಸ್ಥಿತಿಯನ್ನು ಜೀವಿತ

ಸ್ಥಿತಿಯಲ್ಲಿಯೇ, ಈಗಲೇ ಪಡೆಯುವ ಜ್ಞಾನಪರಾಕಾಷ್ಠತೆಯನ್ನು ಹೇಳಿದರು. ನಿರ್ವಾಣವೆಂದರೆ "ಬೆತ್ತಲೆ" ಎನ್ನುವ ಅಚ್ಚ ಕನ್ನಡಪದವನ್ನು, Naked ಎನ್ನುವ ಇಂಗ್ಲೀಷ್ ಪದವನ್ನು ಹೇಳಬಹುದು. ಮುಚ್ಚುಮರೆಯಿಲ್ಲದ ನಿಜ ಸ್ಥಿತಿ, ಕಪಟವಿಲ್ಲದ ಸಹಜಸ್ಥಿತಿ. ದೇವನಿಂದ ನಾವು ಬರುವಾಗ ಅದೇ ಸ್ಥಿತಿಯಲ್ಲೇ ಇಹಕ್ಕೆ ಬರುವೆವು. ಮುಚ್ಚುಮರೆ ಕಪಟವೆಲ್ಲಾ ನಾವು ಇಹದಲ್ಲಿ ಕಲಿಯುವೆವು. ಇರುವ ಸ್ಥಿತಿಯನ್ನು ಇತರ ವಿಷಯಗಳಿಂದ ಆಚ್ಛಾದಿಸುವೆವು. ನಿಜಜ್ಞಾನ ದೇವಸ್ಥಿತಿಯನ್ನು ಮಿಥ್ಯಾ ಅಜ್ಞಾನ ಪ್ರಾಪಂಚಿಕ ಸ್ಥಿತಿಗಳಿಂದ ಹೊದಿಸುವೆವು. ಇತರರೊಂದಿಗೆ ತೋರ್ಪಡೆಯ ನಡತೆಯಲ್ಲಿಯೇ ಜೀವನವನ್ನೆಲ್ಲ ನಡಸುವೆವು. ಇದರಲ್ಲಿ ನಮ್ಮ ತೋರ್ಪಡೆಯಲ್ಲಿ ನಮ್ಮ ನಿಜಸ್ಥಿತಿಯನ್ನು ನಮ್ಮಲ್ಲಿ ನೈಜದೇವಸ್ವಭಾವವನ್ನು ಮರೆವೆವು. ಆ ನಿಜಸ್ಥಿತಿಯನ್ನು ಅದರ ಇರವನ್ನರಿವುದೇ 'ಬ್ರಹ್ಮನಿರ್ವಾಣ'. ಇದೇನು ಹೊರಗಡೆಯಿಂದ ಹೊಸದಾಗಿ ಬರುವುದಲ್ಲ. ಇರವಿನ ಅರಿವು "Being Brahman, not Becoming Brahman" ಹೊಸ ರೂಪಲ್ಲ, ಹೊಸದಾಗಿ ಆಗಬೇಕಾದುದೇನೂ ಇಲ್ಲ. ನಮ್ಮ ರಾಜತ್ವವನ್ನು ಅರಿತು, ನಮ್ಮಲ್ಲಿರುವ ನಮ್ಮ ಸ್ವರಾಜ್ಯವನ್ನು (ಹೊರಗಿನ ಗುಲಾಮಗಿರಿಯನ್ನು ಕಿತ್ತೊಗೆದು) ನಮ್ಮದನ್ನಾಗಿ ಮಾಡಿಕೊಳ್ಳುವುದು.

ವಿಷ್ಣು, ಶಿವ ಮೂರ್ತಿಗಳು ಬೇರೆ ಎಲ್ಲೋ ಅಂತರಿಕ್ಷದಲ್ಲಿ ವಿಷ್ಣುಲೋಕ, ಶಿವ ಲೋಕಗಳಲ್ಲಿವೆ ಎಂದಲ್ಲ—ವಿಷ್ಣುತ್ತ್ವ, ಶಿವತ್ವ. ನಾವು ಸುಖವಾಗಿ ಸ್ವಾನಂದ ಸ್ವರೂಪವನ್ನರಿತು, ಪರರಿಗೂ ಸುಖವನ್ನು ಕೊಟ್ಟು, ಅವರ ಆನಂದನಿಜಸ್ವರೂಪವನ್ನು ನಮ್ಮಂತೆಯೇ, ನಮ್ಮಲ್ಲಿನ ಆತ್ಮವನ್ನು ಎಲ್ಲೆಲ್ಲಿಯೂ ಕಂಡು "ಸಚ್ಚಿದಾನಂದ"ಸ್ವರೂಪವನ್ನು ಈಗಲೇ, ಇಲ್ಲೇ ಅನುಭವಿಸುವುದು. ಕೈವಲ್ಯ, ಕೈಲಾಸ, ಎಲ್ಲಾ ಭಾವದಲ್ಲಿಯೂ ಎಲ್ಲೆಡೆಗಳಲ್ಲಿಯೂ ಬ್ರಹ್ಮನಿರ್ವಾಣ ಸ್ವಯಂ ಸಿದ್ಧವಾಗಿದೆ. ಅದನ್ನು ಜ್ಞಾನಿ ಅನುಭವಿಸುವನು.

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।<br>
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರ ಚಾರಿಣೌ ॥೨೭॥

ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।<br>
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥

ಇದನ್ನು ಸಾಮಾನ್ಯರು ಸಾಧಿಸಲು ಸಾಧ್ಯವಾಗುವಂತೆ ಕರ್ಮಯೋಗ ಜ್ಞಾನ ಯೋಗವನ್ನು ವಿವರಿಸಿದಂತೆ, ಸಂಕ್ಷೇಪವಾಗಿ ಎರಡು ಶ್ಲೋಕಗಳಲ್ಲಿ "ಧ್ಯಾನ ಯೋಗ"ವೆಂಬ ಮಾರ್ಗವನ್ನು ಹೇಳುತ್ತಾನೆ. ಇದರ ವ್ಯಾಖ್ಯೆ ಮುಂದಿನ ೬ನೆಯ ಅಧ್ಯಾಯವಾದ "ಧ್ಯಾನಯೋಗ" ಅಥವಾ ಅಭ್ಯಾಸಯೋಗದಲ್ಲಿ ಅಡಕ ವಾಗಿದೆ. ಅದಕ್ಕೆ ಪೀಠಿಕೆಯಾಗಿ, ಹೇಗೆ ಕರ್ಮಜ್ಞಾನಗಳಿಂದ ಧ್ಯಾನವನ್ನು ಸಾಧಿಸುವುದೆಂಬುದೂ ಸಾಮಾನ್ಯ ಜನರಿಗೆ, ಅದರಲ್ಲಿ ಆಸಕ್ತಿಯುಳ್ಳವರಿಗೆ ಸೂಚನೆ ಕೊಟ್ಟಿದ್ದಾನೆ. "ಬಾಹ್ಯವಿಷಯಗಳನ್ನು, ಇಂದ್ರಿಯಾಕರ್ಷಣವಸ್ತು ಗಳನ್ನು, ಇಂದ್ರಿಯಗಳ ಗೋಚರಕ್ಕೆ ಬಾರದಂತೆ ಹೊರಗೆ ಇರಿಸಿ, ಕಣ್ಣುಗಳನ್ನು ಹುಬ್ಬುಗಳ ನಡುವೆ ಇರಿಸಿ, ಮೂಗಿನ ಹೊಳ್ಳೆಗಳಲ್ಲಿ ಪ್ರಾಣಾಪಾನಗಳನ್ನು ಸಮನಾಗಿಮಾಡಿ (ಶ್ವಾಸೋಚ್ಛ್ವಾಸಗಳನ್ನು ಸಮನಾಗಿ ಎಳೆದು ನಿರೋಧಿಸಿ ಬಿಡುತ್ತ) ಯಾವನು ಇಂದ್ರಿಯ ಮನೋಬುದ್ಧಿಗಳನ್ನು ಇಚ್ಛಾ, ಭಯ, ಕ್ರೋಧಾದಿಗಳನ್ನು ಕಳೆದು (ಅವುಗಳ ವಿಷಯಕ್ಕೇ ಆಲೋಚನೆಗೇ ಹೋಗದೆ) ಸರ್ವ ವಿಷಯಗಳಲ್ಲಿಯೂ ವಿರಕ್ತನಾಗಿ ಮೋಕ್ಷಾಪೇಕ್ಷೆಯಲ್ಲಿರಿಸಿ, ಸದಾ ಈ ಇಹ ಬಂಧನದಿಂದ ಬಿಡುಗಡೆ ಹೊಂದಿ ಸ್ವತಂತ್ರನಾಗಲಪೇಕ್ಷೆಪಡುತ್ತಿರುವನೋ ಅವನು ಸದಾ ಮುಕ್ತನೇ ಆಗಿರುವನು. ಧ್ಯಾನಾವಸ್ಥೆಯೇ ಮುಕ್ತನ ಅವಸ್ಥೆ. ಆ ಸ್ಥಿತಿಯಲ್ಲಿದ್ದಾಗ ಬೇರೆ ಯಾವ ಅನುಭವವಿಲ್ಲದೆ, ಆತ್ಮ ಸ್ವಯಂಸಿದ್ಧ. "ಮುನಿರ್ಮೋಕ್ಷಪರಾಯಣಃ" ಈ ಮೋಕ್ಷಪರಾಯಣರು ಸನಾತನ ಪೂರ್ವದಲ್ಲಿ ಈ ಧ್ಯಾನಾವಸ್ಥೆಯಲ್ಲಿ ಮೌನವಾಗಿ ನಿರ್ಜನ ಪ್ರದೇಶಗಳಲ್ಲಿರುತ್ತ ಧ್ಯಾನಮಗ್ನ ರಾಗಿರುತ್ತಿದ್ದರು; ಈ ಧ್ಯಾನಯೋಗವನ್ನು ಅಭ್ಯಾಸಿಸಿ ಆನಂದಾವಸ್ಥೆಯಲ್ಲಿ ತಲ್ಲೀನರಾಗಿ ಈ ಯೋಗವನ್ನು ಶಿಷ್ಯರಿಗೂ ಕಲಿಸಿ ಕೊಡುತ್ತಿದ್ದರು. ಈ ಧ್ಯಾನಯೋಗವು ಬಹು ಮುಖ್ಯವಾದ ಮೋಕ್ಷಮಾರ್ಗಗಳಲ್ಲೊಂದಾಗಿತ್ತು. ಇದೇ ತಪಸ್ಸು. ಇದರಲ್ಲಿ ನಿರತರಾದ ತಪಸ್ವಿಗಳು, ಮೋಕ್ಷಕ್ಕಾಗಿ ತಪಿಸು ತ್ತಿದ್ದವರೇ. ನಮ್ಮ ಹಿಂದಿನ ಋಷಿಗಳು, ಗುರುಗಳು, ಸಾಧಿಸಿ ತಮ್ಮದನ್ನೇ ಮಾಡಿಕೊಂಡು ತಾವೂ ಶಾಂತಿಯನ್ನನುಭವಿಸಿ ಇತರರಿಗೆ ಗುರುಗಳಾಗಿ ಸರ್ವರ ಹಿತವನ್ನು ಯಾವಾಗಲೂ ಬಯಸುತ್ತಿದ್ದರು.

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।<br>
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥

ಎಲ್ಲದರಲ್ಲಿಯೂ ಅಂತರ್ಯಾಮಿಯಾಗಿ, ನಾನು ಯಜ್ಞ ತಪಸ್ಸುಗಳಲ್ಲಿ ಭೋಕ್ತೃ ವಾಗಿದ್ದೇನೆ. ಎಲ್ಲದರ ಫಲವನ್ನು ಉಣ್ಣುತ್ತೇನೆ. ಎಲ್ಲಾ ಚರಾಚರವಸ್ತು ಪ್ರಪಂಚಕ್ಕೂ ಮಹೇಶ್ವರನಾಗಿದ್ದೇನೆ. ಮೇಲಾಗಿ ಎಲ್ಲ ಭೂತಗಳಿಗೂ (ಸಮಸ್ತ ಪ್ರಾಣಿಗಳಿಗೂ) ಹಿತಚಿಂತಕನಾಗಿದ್ದೇನೆ. ಅವರಿಂದ ಯಾವ ಅಪೇಕ್ಷೆಯೂ ಇಲ್ಲದೆ ಅವರ ಕಲ್ಯಾಣವನ್ನೇ ಎಸಗುತ್ತಿದ್ದೇನೆ. ಈ ರೀತಿಯಾಗಿರುವ ಆತ್ಮ ಸ್ವರೂಪವನ್ನು ತಿಳಿದ ಜ್ಞಾನಯೋಗಿಯು ಶಾಂತಿ ಹೊಂದುವನು. ಅವನು ಸದಾ ಶಾಂತನು.

ಉಪನಿಷತ್ತತ್ತ್ವವನ್ನು ಹೇಳಬೇಕೆಂದು ಕೇಳಿದಾಗ ಕೇನೋಪನಿಷತ್ತಿನ ಕೊನೆಯಲ್ಲಿ "ತಸ್ಯೈ, ತಪೋ, ದಮಃ, ಕರ್ಮೇತಿ, ಪ್ರತಿಷ್ಠಾ. ವೇದಾಸ್ಸ ರ್ವಾಂಗಾನಿ ಸತ್ಯಮಾಯತನಂ ಯೋವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನಂತೇ ಸ್ವರ್ಗಲೋಕೇ ಜ್ಯೇಯೇ ಪ್ರತಿತಿಷ್ಠತಿ, ಪ್ರತಿರಕ್ಷತಿ" ಎಂದು ಅಜೇಯವಾದ ಅನಂತವಾದ ಸ್ವರ್ಗಲೋಕದಲ್ಲಿ ಪಾಪವನ್ನೆಲ್ಲ ಹತಮಾಡಿ ಈ ತತ್ತ್ವವನ್ನು ತಿಳಿದವನು ಸ್ಥಾಪಿತನಾಗುವನು, ಎಂದು ಪುನರುಕ್ತಿಯಲ್ಲಿ ಹೇಳಿ "ಆ ತತ್ತ್ವವು, ತಪ, ದಮ, ಮತ್ತು ಕರ್ಮದಲ್ಲಿ ಪ್ರತಿಷ್ಠಿತವಾಗಿದೆ (ಈ ಮೂರೇ ಅದಕ್ಕೆ ಅಡಿಗಲ್ಲು, ಇವುಗಳ ಪಾಯದ ಮೇಲೆ ಆ ತತ್ತ್ವವು ಕಟ್ಟಲ್ಪಟ್ಟಿದೆ, ಇದರ ಮೇಲೆ ನಿಂತು ಪ್ರತಿಷ್ಠಿತವಾಗಿದೆ.) ವೇದಗಳೇ ಸರ್ವ ಅಂಗಗಳು, ಸತ್ಯವೇ ಸ್ಥಾನ" ಎಂದು ಉಪದೇಶವಾಗಿರುವುದು. ಆ ಸತ್ಯ ಸ್ಥಾನವನ್ನು ನಿತ್ಯವಾಗಿ ಪಡೆಯಬೇಕಾದರೆ ಸತ್ಯದಲ್ಲೊಂದಾಗಿ ಮಿಳಿತವಾಗ ಬೇಕು; ಆ ಸ್ಥಾನ ತಲಪಬೇಕು. ಅದಕ್ಕೇ ಭಗವಂತ ಉಪಾಯ ಸೂಚನೆ ಮಾಡುತ್ತಾನೆ. ಇದೂ ಒಂದು ಮಾರ್ಗ. "ತಪ" ಧ್ಯಾನಯೋಗ, ಈ ತಪವ ನ್ನಾಚರಿಸುವುದೂ ಒಂದು ಸತ್ಕರ್ಮವೇ. ಆ ಸ್ಥಾನ ತಲಪಲು ತದೇಕಧ್ಯಾನ ದಿಂದ ತಪಿಸಬೇಕು, ಉರಿಯಬೇಕು. ಆ ಧ್ಯಾನವು ಉಜ್ವಲವಾಗಬೇಕು. ಅದೇ ತಪೋಮಾರ್ಗ. ತದಂಗವಾಗಿ, ದಮ, "ವಿಗತೇಚ್ಛಾಭಯಕ್ರೋಧ" ಇತ್ಯಾದಿ.

ಇದುವರೆಗೆ ಕೇಳಿದುದನ್ನೆಲ್ಲ ಅಭ್ಯಾಸಮಾಡಲು 'ಶ್ರುತಶಾಸ್ತ್ರಾಭ್ಯಾಸ' ಏನೇನು ಅವಶ್ಯಕ, ಏನೇನು ಮಾಡಬೇಕು, ಏನೇನು ಸಾಧಿಸಬೇಕು, ಏನೇನು ಗಮನದಲ್ಲಿಡಬೇಕು, ಏನೇನು ಅಭ್ಯಸಿಸಬೇಕೆಂದು ಹೇಳುವುದಕ್ಕಾಗಿ ಮುಂದಿನ ಅಧ್ಯಾಯಕ್ಕೆ ಪೀಠಿಕೆಯಾಗಿ ಸಂಕ್ಷೇಪವಾಗಿ ಧ್ಯಾನಯೋಗದ ಸೂಚನೆ ಕೊಟ್ಟ

ದ್ದಾನೆ ಪರಮಾತ್ಮ. ಆ ಧ್ಯಾನದ ಧ್ಯೇಯವೂ ಗುರಿಯೂ ತಾನೇ ಎಂದು ಹೇಳಿದ್ದಾನೆ. ಲೋಕದಲ್ಲಿ ಎಲ್ಲರೂ ಮಾಡುವ ಯಜ್ಞವೂ ತಪಸ್ಸೂ ಎಲ್ಲಿಗೆ ಹೋಗುತ್ತಪ್ಪಾ ಎಂದರೆ, ಯಾರು ಊಟಮಾಡುತ್ತಾರಪ್ಪಾ ಎಂದರೆ, "ಸರ್ವ ಲೋಕಮಹೇಶ್ವರಃ"—ಸಮಸ್ತಲೋಕಕ್ಕೂ ಆ ಯಜ್ಞಫಲ ತಲಪುತ್ತೆ. ಆ ಮಹೇಶ್ವರನು ಸರ್ವಲೋಕವ್ಯಾಪಿ, ಸರ್ವಾಂತರ್ಯಾಮಿ. ಸರ್ವರ ಹೃದಯಗಳ ಲ್ಲಿದ್ದಾನೆ. ಎಲ್ಲ ಭೂತಗಳ ಹಿತಚಿಂತನೆ ಮಾಡುತ್ತಿದ್ದಾನೆ. ನಾವು ಮಾಡುವ ಯಜ್ಞ, ತಪಸ್ಸು ಯಾವುದೂ ನಿಷ್ಪ್ರಯೋಜನವಾಗುವುದಿಲ್ಲ. ಅದರ ಫಲ ನಮಗೆ ಬೇಡ. ಅದು ಸರ್ವಭೂತಗಳ ಹಿತಕ್ಕಾಗಿ, ಸರ್ವಲೋಕಹೃದಯೇ ಶ್ವರನು ಅನುಭವಿಸುತ್ತಾನೆ. ಈ ತಿಳಿವಳಿಕೆ ಬಂದ ಮೇಲೆ "ಜ್ಞಾತ್ವಾ ಮಾಂ" ಎಲ್ಲರಲ್ಲಿಯೂ ಇರುವ, ನಮ್ಮಲ್ಲಿಯೂ ಇರುವ ಮಹೇಶ್ವರನ ಪ್ರೀತ್ಯರ್ಥವಾಗಿ ಯಜ್ಞತಪವನ್ನಾಚರಿಸುವವರಿಗೆ ಶಾಂತಿ ಲಭಿಸದೆ ಇನ್ನೇನು? ಆ ಶಾಂತಿಯೇ ಮುಕ್ತಿ. ಅದೂ ಯಜ್ಞತಪವನ್ನು ಮಾಡುತ್ತ, ಜೀವಿಸುತ್ತಿರುವಾಗಲೇ ಜೀವನ್ಮುಕ್ತಿ. ಆ ಅವಸ್ಥೆಯಲ್ಲಿ ಕರ್ತೃವೂ ಅವನೇ, ಭೋಕ್ತೃವೂ ಅವನೇ. ನಮ್ಮದೇನಿದೆ? ಬ್ರಹ್ಮನಿರ್ವಾಣ.

ಈ ಕರ್ಮಸಂನ್ಯಾಸವೆಂಬ ಯೋಗದಲ್ಲಿ ಜ್ಞಾನಿಗಳಿಗೆ ಪೂರ್ಣ ಕರ್ಮತ್ಯಾಗ ಸಂನ್ಯಾಸದಿಂದ ಆಗುವ ಮೋಕ್ಷಫಲವೇ ಪೂರ್ಣಜ್ಞಾನಿಗಳಲ್ಲದೆ ಸಂಸಾರದಲ್ಲಿ ತೇಲುತ್ತಿರುವ ಕಾರ್ಮಿಕರಿಗೂ ಕರ್ಮಫಲಸಂನ್ಯಾಸದಿಂದ (ತ್ಯಾಗದಿಂದ) ಅದೇ ಮೋಕ್ಷಫಲ ಲಭಿಸುವುದೆಂದು ಅಭಯಪ್ರದಾನಮಾಡಿ, ಆ ಕರ್ಮಫಲಸಂನ್ಯಾಸ ವನ್ನು ಮಾಡುವ ಸುಲಭ ರೀತಿಯನ್ನು ಸುಲಭವಾಗಿ ಜೀರ್ಣಿಸಿಕೊಂಡು ಸುಲಭವಾಗಿ ಆಚರಿಸಿ, ಸುಲಭವಾಗಿ ಅದೇ ಶಾಂತಿಯನ್ನು ಕೊಡುವ ಅಮೃತ ಪಾನವನ್ನು ಕಾರುಣ್ಯದಿಂದ ಮಾಡಿಸಿ, ಎಲ್ಲರ ಉದ್ಧಾರಕ್ಕೂ ಉಪದೇಶಮಾಡಿ ದ್ದಾನೆ ಸ್ವಾಮಿ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನಸಂವಾದದಲ್ಲಿ
ಕರ್ಮಸಂನ್ಯಾಸವೆಂಬ ಐದನೆಯ ಅಧ್ಯಾಯ ಸಂಪೂರ್ಣ.

# ಆರನೆಯ ಅಧ್ಯಾಯ: ಧ್ಯಾನಯೋಗ

## ಆತ್ಮಸಂಯಮ ಯೋಗ, ಧ್ಯಾನಯೋಗ, ಅಭ್ಯಾಸಯೋಗ, ಸಾಧನಾಧಿಕಾರಿಯ ಬಹಿರಂಗಾಂತರಂಗ ಧ್ಯಾನಯೋಗಾದಿಗಳ ವಿವರಣೆ

"ಗೀತೆಯ ಮೊದಲನೆಯ ಐದು ಅಧ್ಯಾಯಗಳಲ್ಲಿ ಬಾಳಿನ ಎಲ್ಲ ಶಾಸ್ತ್ರಾರ್ಥ ಬಂದುಹೋಯಿತು" ಎಂದು ವಿನೋಬಾರವರು ಅಭಿಪ್ರಾಯಪಟ್ಟಿದ್ದಾರೆ. ಗೀತೆಯಲ್ಲಿ ಹಿಂದಿನ ಅಧ್ಯಾಯದ ಕೊನೆಯಲ್ಲಿ ಪ್ರಸ್ತಾಪವಾದ ವಿಷಯವನ್ನೇ ಹಿನ್ನೆಲೆಯಾಗಿಟ್ಟುಕೊಂಡು ಮುಂದಿನ ಅಧ್ಯಾಯ ಆರಂಭಿಸುತ್ತಾನೆ ಸ್ವಾಮಿ. ಹಿಂದಿನ ಅಧ್ಯಾಯದ ಕೊನೆಯ ಶ್ಲೋಕಗಳ ಬ್ರಹ್ಮನಿರ್ವಾಣ, ಜ್ಞಾನಯಜ್ಞ, ಧ್ಯಾನ, ಶಾಂತಿಯ ವಿಷಯಗಳನ್ನೆ ವಿವರಿಸಿ ವೈರಾಗ್ಯ ಅಭ್ಯಾಸಗಳಿಂದ ಅವು ಗಳನ್ನು ಸಾಧಿಸುವ ರೀತಿಯನ್ನು ಉಲ್ಲೇಖಿಸಿದ್ದಾನಾದುದರಿಂದ, ಆರನೆಯ ಅಧ್ಯಾಯವೂ ಹಿಂದಿನ ಅಧ್ಯಾಯದ ವಿಷಯ ಪ್ರಸಂಗವೇ. ಕೆಲವರು ಗೀತೆ ಯನ್ನು ಕರ್ಮಷಟ್ಕ, ಉಪಾಸನಾಷಟ್ಕ, ಜ್ಞಾನಷಟ್ಕ ಎಂದು ಆರಾರು ಅಧ್ಯಾಯಗಳಾಗಿ ಉಪದೇಶಭಾಗವಾಗಿದೆಯೆಂದು ಭಾವಿಸುತ್ತಾರೆ. ಇನ್ನು ಕೆಲವರು ಪ್ರಖ್ಯಾತ ಉಪನಿಷತ್ತಿನ ನಾಲ್ಕು ಮಹಾವಾಕ್ಯಗಳಲ್ಲಿನ "ತತ್ತ್ವ ಮಸಿ" ಎಂಬುದರ ತತ್ ಪದಾರ್ಥ ವಿವರಣೆ, ತ್ವಂಪದಾರ್ಥ ವಿವರಣೆ, ಅಸಿ ಪದಾರ್ಥ ವಿವರಣೆ ಮಾಡಿ, ಅರ್ಥಕೊಡುವ ಉಪದೇಶವೆಂದು ಗೀತೆಯನ್ನು ಆರಾರು ಅಧ್ಯಾಯಗಳ ಮೂರು ಭಾಗ ಮಾಡಿದ್ದಾರೆ.

ವಿನೋಬಾರವರ ವಿಭಜನೆಯಲ್ಲೂ ಅರ್ಥವಿದೆ. ಚತುರ್ವಿಧ ಪುರುಷಾರ್ಥ ಗಳಾದ ಧರ್ಮ,ಅರ್ಥ, ಕಾಮ, ಮೋಕ್ಷಗಳ ಸಾಧನೆಗಾಗಿ ಮೊದಲನೆಯದಾದ 'ಧರ್ಮದ ವಿವರಣೆಯ ಅಂಗವಾಗಿ ಐದು ಅಧ್ಯಾಯಗಳಲ್ಲಿ "ಬಾಳಿನ ಎಲ್ಲ ಶಾಸ್ತ್ರಾರ್ಥವೂ ಬಂದುಹೋಯಿತು." ಎರಡನೆಯ ಐದು ಅಧ್ಯಾಯಗಳಲ್ಲಿ ಅದರ ಸಾಧನೆಗೆ ಬೇಕಾದ ಸಂಪತ್ತು, ಅರ್ಥವೆಂಬ ಎರಡನೆಯ ಪುರುಷಾರ್ಥದ ವಿಷಯವೆಂದು ಭಾವಿಸಬಹುದು. ಅರ್ಥವೆಂದರೆ ಹಣ ಒಂದೇ ಎಂದಲ್ಲ. ಅದರಲ್ಲಿ ಹಿತ ಕಲ್ಯಾಣ ಎಲ್ಲ ಸೇರಿಹೋಯಿತು. ಜೀವನದಲ್ಲಿ ಆತ್ಮಹಿತ, ಪರಹಿತ,

ಆತ್ಮಕಲ್ಯಾಣ, ಪರರ ಕಲ್ಯಾಣ, ಆತ್ಮಸಂಪತ್ತು, ಪರರ ಸಂಪತ್ತು ಎಲ್ಲದಕ್ಕೂ ಮಾರ್ಗವಾದುದೇ ಪುರುಷಾರ್ಥ.

ಮೂರನೆಯ ಐದು ಅಧ್ಯಾಯಗಳಲ್ಲಿ— ಹನ್ನೊಂದನೆಯ ಅಧ್ಯಾಯದ ವಿಶ್ವ ರೂಪದರ್ಶನದಿಂದ, ಹನ್ನೆರಡರ ಭಕ್ತನ ನಿದರ್ಶನದಿಂದ ಕಾಮವೆಂಬ ಮೂರ ನೆಯ ಪುರುಷಾರ್ಥದ ಅರ್ಥಭಾವವಿದೆ. ಅರ್ಜುನನಿಗೆ ಭಗವಂತನ ವಿಶ್ವರೂಪ ವನ್ನು ನೋಡಬೇಕೆಂಬ ಹಿರಿಯ ಆಸೆಯೇ ಈ ಕಾಮದ ಅಂಕುರ. ಕಾಮವು ಬರಿಯ ಪಶುವೃತ್ತಿಯ ವಿಷಯಸಂಭೋಗದ ಆಸೆ ಒಂದೇ ಎಂದು ತಿಳಿಯ ಬಾರದು. ಪವಿತ್ರ ವಸ್ತುಗಳಲ್ಲಿನ ಪ್ರೀತಿಯೂ ಕಾಮದ ಊರ್ಧ್ವವಿಕಾಸವೇ. ಬಸುರಿಯ ಬಯಕೆಯೂ ಇಚ್ಛೆಯೇ. ನಾರಾಯಣನನ್ನು ನರನಾಗಿ ಹೊತ್ತಿ ರುವ ಪ್ರಕೃತಿಯ ನಿರ್ದೋಷ ಇಚ್ಛೆಗಳು. ಪರಮ ಭಕ್ತನಾಗಿ ಸೇವಿಸು ವಾಗಲೂ ಭಕ್ತಿಯ ವಿಷಯದಲ್ಲಿ ಪುತ್ರವಾತ್ಸಲ್ಯ, ಸಖ್ಯವಾತ್ಸಲ್ಯ, ಪ್ರಿಯೆಯ ವಾತ್ಸಲ್ಯ ಇತ್ಯಾದಿ ಏಕಾಂತಭಕ್ತಿಯವರೆವಿಗೆ ಪರವಸ್ತುವಿನಲ್ಲೇ ರಮಿಸುವ ನಿಷ್ಕಾಮಪ್ರೇಮ. ಮನುಷ್ಯನ ಪವಿತ್ರಕಾಮವಾದ ಭಗವದ್ಭಕ್ತಿಯು ಪುರು ಷೋತ್ತಮಯೋಗದಲ್ಲಿ ಸಮಾಪ್ತಿಹೊಂದಿತು. ಅನಂತರ ಮೋಕ್ಷಸಾಧನೋ ಪಾಯ ಉಳಿದ ಮೂರು ಅಧ್ಯಾಯಗಳಲ್ಲಿ ದೈವಾಸುರ ಸಂಪತ್ತು, ಶ್ರದ್ಧಾ ತ್ರಯ ವಿಭಾಗದ ವಿಸ್ತರಣೆಯಾದ ಮೇಲೆ, ಮೋಕ್ಷಸಂನ್ಯಾಸಯೋಗದಲ್ಲಿ ಮುಕ್ತಾಯವಾಯಿತೆಂದು ನನ್ನ ಅಭಿಪ್ರಾಯ. ಲೋಕದಲ್ಲಿ ಪುರುಷಾರ್ಥಸಾಧ ನೆಗೂ ಮಧ್ಯ ಮಾರ್ಗದಲ್ಲಿ ನಡೆದು ಸಾಧಾರಣ ಜನರು ಕೂಡ ಚತುರ್ವಿಧ ಪುರುಷಾರ್ಥಗಳನ್ನು ಹೇಳಿರುವ ಕರ್ಮ, ಜ್ಞಾನ, ಭಕ್ತಿ, ಧ್ಯಾನ ರಾಜಯೋಗ ಗಳಿಂದ ಹೇಗೆ ಸಾಧಿಸಿ ಜೀವನ್ಮುಕ್ತರಾಗಬಹುದೆಂಬ ವಿಷಯಕ್ಕೆ ಸಹಾಯ ವಾಗುವಂತೆ, ಶಾಸ್ತ್ರ, ವೇದ, ಉಪನಿಷತ್ತುಗಳನ್ನೆಲ್ಲ ಸೂರೆಮಾಡಿ, ಭಗವಂತ ಪಾಮರರ ಉದ್ಧಾರಕ್ಕಾಗಿ ಗೀತೆಯನ್ನು ಕರುಣಿಸಿದ್ದಾನೆ.

ಸತ್ಯವನ್ನು ಸುವ್ಯವಸ್ಥಿತವಾಗಿ ಬೋಧಿಸುವ ಶಾಂತ ಜ್ಞಾನ ಚರ್ಚೆಯು ನಡೆದು, ಅನೇಕ ದೇವತಾವಾದದ ಕಡೆಗೆ ಬಂದೆವು, ಈ ಐದು ಅಧ್ಯಾಯ ಗಳಲ್ಲಿ. ಈ ಆರನೆಯ ಅಧ್ಯಾಯದಲ್ಲಿ ದೇವಕಲ್ಪನೆಯಿಂದ ಆತ್ಮಕಲ್ಪನೆಯ ಕಡೆಗೂ, ಮನಸ್ಸಿನ ಪ್ರಾರ್ಥನೆಯಿಂದ ತತ್ತ್ವದ ಕಡೆಗೂ, ಸೂಕ್ತಿಗಳಿಂದ ಅಂತರ್ಜ್ಞಾನದ ಕಡೆಗೂ ವಿಕಾಸವಾಗಿದೆ. ಹೊರದೃಷ್ಟಿಯನ್ನು ಒಳಗಡೆಗೆ

ತಿರುಗಿಸಿದ ಕೃಷ್ಣ ಪರಮಾತ್ಮ. ಉಪನಿಷತ್ತುಗಳ ವಾಕ್ಯಗಳು ಧಾರಾಳವಾಗಿ ಬಂದಿವೆ; ಶ್ರುತ ಶಾಸ್ತ್ರ ಅಭ್ಯಾಸವಿಧಿಯನ್ನು ಈ ಅಧ್ಯಾಯದಲ್ಲಿ ಹೇಳಿದ್ದಾನೆ. ಶಾಸ್ತ್ರದಲ್ಲಿ ಮುಖ್ಯವಾದ ಸಂಕಲ್ಪತ್ಯಾಗ, ಫಲತ್ಯಾಗ, ಆತ್ಮ, ಕೂಟಸ್ಥ ಯೋಗಾಭ್ಯಾಸ, ಮನಸ್ಸನ್ನು ನಿಗ್ರಹಮಾಡುವುದಕ್ಕೆ ದಾರಿಗಳು, ಸರ್ವತ್ರ ಸಮದರ್ಶನ ಎಲ್ಲ ವಿವರಿಸಿ "ಯೋಗಿಯಾಗು" "ನನ್ನನ್ನು ಭಜಿಸು" ಎಂದು ಸಮಾಪ್ತಿಮಾಡಿದ್ದಾನೆ. ಈ ಅಧ್ಯಾಯದಲ್ಲಿ "ಹೊರಗೆ ಏನೂ ಇಲ್ಲ. ಎಲ್ಲವೂ ಒಳಗೇ ಇದೆ, ಹೊರಗೆ ನೋಡಬೇಡ, ಒಳನೋಟ ಬರಲಿ, ಎಲ್ಲೆಲ್ಲಿ ಕಾಣುವುದೆಲ್ಲ ಆತ್ಮದಲ್ಲೇ ಇದೆ. ಆತ್ಮದರ್ಶನಮಾಡಿ, ಅಲ್ಲೇ ನನ್ನನ್ನು ಕಾಣು" ಎಂದು ಆತ್ಮೋದ್ಧಾರದ ಮೂಲಮಂತ್ರವನ್ನು ಘಂಟಾಘೋಷವಾಗಿ ಸಾರಿದ್ದಾನೆ.

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥೧॥

ಯಾವನು ಫಲದಾಶ್ರಯವಿಲ್ಲದೆ ಕಾರ್ಯಕರ್ಮಗಳನ್ನು ಮಾಡುತ್ತಾನೋ ಅವನು ಸಂನ್ಯಾಸಿಯೂ ಯೋಗಿಯೂ ಆಗಿರುವನು, ಅಗ್ನಿಯನ್ನಾಗಲಿ ಕ್ರಿಯೆಯನ್ನಾಗಲಿ ಬಿಟ್ಟವನು ಮಾತ್ರವೆಂದೇ ಅಲ್ಲ. ಕರ್ಮಯೋಗಿಗೂ ಕರ್ಮಸಂನ್ಯಾಸಿಗೂ ಭೇದವಿಲ್ಲವೆಂದು ನಾವು ಮುಂಚೆಯೇ ನೋಡಿದ್ದೇವೆ. ಈಗ ಬಹಿರ್‌ವ್ಯಾಪಾರಕ್ಕೆ ಹೆಚ್ಚು ಬೆಲೆಯಿಲ್ಲ, ಅಂತಃಕರಣಕ್ಕೆ ಹೆಚ್ಚು ಬೆಲೆ ಎಂದು ನಿರ್ಧಾರವಾಯಿತು. ಹೊರಗಿನ ತ್ಯಾಗ ಮುಖ್ಯವಲ್ಲ, ಒಳಗಿನ ಸಂಕಲ್ಪತ್ಯಾಗ ಮುಖ್ಯ.

ಯಂ ಸಂನ್ಯಾಸಮಿತಿಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥೨॥

ಯಾವುದನ್ನು ಶ್ರುತಿಗಳು ಸಂನ್ಯಾಸವೆಂದು ಹೇಳುವುವೋ ಅದು ಯೋಗವೆಂದು ತಿಳಿ. ಸಂಕಲ್ಪವನ್ನು ತ್ಯಾಗಮಾಡದವನು ಯೋಗಿಯಾಗಲಾರನು. ವಾಸಿಷ್ಠ ರಾಮಾಯಣದಲ್ಲಿ ಈ ಎರಡು ಶ್ಲೋಕಗಳ ಭಾವವೂ ಎರಡಾವರ್ತಿ ಬಂದಿದೆ. ವಸಿಷ್ಠರು "ನಾನು ಕೈ ಎತ್ತಿ ಕೂಗಿ ಕೂಗಿ ಹೇಳುತ್ತೇನೆ, ಆದರೆ ಒಬ್ಬರೂ ಕೇಳುವುದಿಲ್ಲ. 'ಅಸಂಕಲ್ಪಃ ಪರಂಶ್ರೇಯಃ' – ಸಂಕಲ್ಪರಹಿತವಾಗಿರುವುದೇ ಪರಮಶ್ರೇಯಸ್ಸು, ಅದೇಕೆ ಅದನ್ನು ಹೃದಯದಲ್ಲಿ ಧರಿಸುವುದಿಲ್ಲ? ಸ ಕಿಮಂತರ್ನಭಾವ್ಯತೇ" ಎಂದು ಸಾಧಕರಿಗೆ ಕರುಣಾಪೂರಿತರಾಗಿ ಆಕ್ರೋಶದಿಂದ ದೃಢವಾಗಿ ಹೇಳಿದ್ದಾರೆ. (ಪರಮಾರ್ಥಸ್ವರೂಪವರ್ಣನ ಸರ್ಗದಲ್ಲಿ ೯೪ ಶ್ಲೋಕ.)

ಮುಂದೆ ೯೭ ನೆಯ ಶ್ಲೋಕದಲ್ಲಿ "ಬಹುನಾತ್ರ ಕಿಮುಕ್ತೇನ ಸಂಕ್ಷೇಪಾದ ದಮುಚ್ಯತೆ ಸಂಕಲ್ಪನಂ ಪರೋ ಬಂಧಸ್ತಥಭಾವೊ ವಿಮುಕ್ತತಾ"—ಬಹುವಾಗಿ ಹೇಳಲೇಕೆ, ಸಂಕ್ಷೇಪವಾಗಿ ಇಷ್ಟೇ: "ಸಂಕಲ್ಪವೇ ಪರಕ್ಕೆ ಬಂಧನ, ಅದರ ಅಭಾವವೇ ವಿಮುಕ್ತತೆ" ಎಂದಿದ್ದಾರೆ. ಈ ಗ್ರಂಥದ "ತಾತ್ಪರ್ಯಪ್ರಕಾಶ" ಎಂಬ ವ್ಯಾಖ್ಯಾನದಲ್ಲಿ ವ್ಯಾಖ್ಯಾನಕಾರರು ಬರೆಯುತ್ತಾರೆ: ಇದನ್ನು ಪರಮ ಕಾರುಣಿಕ ವಸಿಷ್ಠರು, ಸರ್ವ ಜನರಿಗೂ ವಿಷಯಸಂಕಲ್ಪತ್ಯಾಗ ವಿನಾ ಮೋಕ್ಷವು ಸಿದ್ಧಿಸುವುದಿಲ್ಲ. ಆದ್ದರಿಂದ ಆ ಸಂಕಲ್ಪತ್ಯಾಗವು ಅತ್ಯವಶ್ಯಕವಾದ ಕಾರ್ಯ ಎಂದು ಸಮಗ್ರ ವಸಿಷ್ಠ ಉಪದೇಶರಹಸ್ಯವನ್ನೂ ಒಂದೇ ಮಾತಿನಲ್ಲಿ ಆಕ್ರೋಶದಿಂದಲಾದರೂ ದೃಢೀಕರಿಸಿದ್ದಾರೆ. ಸಂಕಲ್ಪವಿಲ್ಲದೆ ಕಾರ್ಯ ನಡೆಯುವುದೇ ಇಲ್ಲವೆಂದು ಹೇಳುವರು. ಪ್ರಪಂಚದಲ್ಲಿ ಯಾರಾಗಲಿ, ಯಾವುದನ್ನು ಮಾಡಿದರೂ ಅದರ ಉದ್ದೇಶವಿದ್ದೇ ಇರುತ್ತದೆ. ಇಂತಹುದು ನನಗೆ ಪ್ರಾಪ್ತಿಯಾಗಬೇಕೆಂದು, ಇಂಥಾ ಫಲಕ್ಕಾಗಿ ನಾನು ದುಡಿಯುತ್ತೇನೆಂದು ಉದ್ದೇಶಿಸುವುದೇ ಸಂಕಲ್ಪ. ಭೂಮಿಯಲ್ಲಿ ಫಸಲು ಪಡೆಯಬೇಕೆಂದು ಅಭಿಲಾಷೆಯುಳ್ಳವನು, ಭತ್ತದ ಪೈರು ತೆಗೆಯಬೇಕೆಂದು ಸಂಕಲ್ಪಿಸಿದರೆ ಅದಕ್ಕೆ ಸರಿಯಾಗಿ ಭೂಮಿ ಹದಮಾಡಿಕೊಂಡು, ಸಲಕರಣೆಗಳನ್ನು ಒದಗಿಸಿಕೊಳ್ಳುತ್ತಾನೆ. ಕಬ್ಬು ಬೆಳೆಯಬೇಕು ಎಂದಿದ್ದರೆ, ಅದಕ್ಕೆ ತಕ್ಕ ಕಾರ್ಯಮಾಡುತ್ತಾನೆ. ಹೊಗೆಸೊಪ್ಪು ಬೆಳೆಯಬೇಕು ಎಂದೆನಿಸಿದರೆ ಅದರ ಏರ್ಪಾಟೇ ಬೇರೆ. ಹೀಗೆ ಫಲಾಪೇಕ್ಷೆಯಿರುವವರು ಸಂಕಲ್ಪವಿಲ್ಲದೆ ಕಾರ್ಯವನ್ನು ಷುರುಮಾಡುವುದಿಲ್ಲ. ದೇವಕಾರ್ಯಗಳಲ್ಲಿ, ಸಕಾಮ ಪೂಜೆಗಳಲ್ಲಿ ಕೂಡ ಮೊದಲು ಮಂತ್ರ 'ಮಂತ್ರಸಂಕಲ್ಪ' ಮಾಡಿ ಎಂದೇ ಜೋಯಿಸರು ಆರಂಭಮಾಡಿಸುತ್ತಾರೆ. "ನಿಮಗೆ ಬೇಕಾದ್ದು ಪ್ರಾರ್ಥನೆಮಾಡಿಕೊಳ್ಳಿ" ಎಂದು ನಮಸ್ಕಾರ ಮಾಡಿದ ಮೇಲೆ ಎಚ್ಚರಿಸುತ್ತಾರೆ. "ಸರ್ವಾಭೀಷ್ಟಸಿದ್ಧಿರಸ್ತು" ಎಂದು ಹರಸುತ್ತಾರೆ. ಇದೆಲ್ಲಾ ಸಂಕಲ್ಪಕರ್ಮ. ಯಾವನು ಸಂಕಲ್ಪಮಾಡುತ್ತಾನೋ ಅವನಿಗೆ ಕಾಮ ಉಂಟಾಗುತ್ತದೆ. ಆ ಕಾಮದಿಂದ ಕರ್ಮವನ್ನು ಮಾಡಲೇಬೇಕಾಗುತ್ತದೆ. ಇದು ಕರ್ಮಯೋಗವಲ್ಲ. ಈ ಸ್ವಾರ್ಥ ಸಂಕಲ್ಪವನ್ನು "ಸಂನ್ಯಸ್ತ" ಮಾಡಿದ ಹೊರತು ಯೋಗಿಯಾಗಲಾರನು. ಇದಲ್ಲದೆ ನಿತ್ಯನೈಮಿತ್ತಿಕ ಕರ್ಮಗಳನ್ನು ಯಾವ ಫಲಾಪೇಕ್ಷೆಯೂ ಇಲ್ಲದೆ, ಭಗವತ್‌ಪ್ರೀತಿಗಾಗಿ, "ಮಮೋಪಾತ್ತ ದುರಿತಕ್ಷೇದ್ವಾರ" ಎಂಬ ಸಂಕಲ್ಪವು

ಕೂಡ ಇಲ್ಲದೆ "ಪರಮೇಶ್ವರ ಪ್ರೀತ್ಯರ್ಥಂ" ಎಂದೇ ಮಾಡಬೇಕು. ಫಲೋದ್ದೇಶಸಂಕಲ್ಪವನ್ನು ಬಿಟ್ಟು, ಈಶ್ವರನು ಸಂತುಷ್ಟನಾಗಬೇಕೆಂಬ ಇಚ್ಛೆಯೂ ಒಂದು ಸಂಕಲ್ಪವಾಯಿತೆನ್ನಬಹುದು. ಆದರೆ ಈ ಸದಿಚ್ಛೆ ಇವನಿಗೆ ಉಳಿದ ಸಂಕಲ್ಪಗಳ (ಇತರ ಕೆಳದರ್ಜೆಯ ಇಚ್ಛೆಗಳ) ತ್ಯಾಗಕ್ಕೆ ಕಾರಣವಾಗುತ್ತೆ, ಹತ್ತಲು ಮೆಟ್ಟಲಾಗುತ್ತೆ. ಧ್ಯಾನಕ್ಕೆ ಅಸಾಧಾರಣವಾದ ಮುಖ್ಯ ಧರ್ಮವಾದ, ಚಿತ್ತವು ಅಲುಗಾಡದಿರುವುದನ್ನು ಈ ಫಲಸಂಕಲ್ಪತ್ಯಾಗ ಕರ್ಮಯೋಗವು ಕಲಿಸಿಕೊಡುತ್ತದೆ. ಕರ್ಮದಲ್ಲಿ ಚಿತ್ತವಿಕ್ಷೇಪಕ್ಕೆ ಯಾವ ಕಾರಣವೂ ಇಲ್ಲದಂತೆ, ಸಂಕಲ್ಪತ್ಯಾಗಮಾಡಿ, ಕರ್ಮಯೋಗಮಾಡಿ, ಧ್ಯಾನಯೋಗಕ್ಕೆ (ಪರಮಾತ್ಮ ಚಿಂತನೆಗೆ) ಅರ್ಹರಾಗಬೇಕು. ಅದೇ ಕರ್ಮಯೋಗ. ಕರ್ಮಯೋಗವು ಸಾಧನೆಯೂ ಹೌದು, ನಿಷ್ಠೆಯೂ ಹೌದು. ಆದರೆ ಸಂನ್ಯಾಸವು ಬರೀ ನಿಷ್ಠೆ, ಅಂತಿಮ ಅವಸ್ಥೆ. ಈ ಕರ್ಮಯೋಗದಿಂದ ಬಂದ ಸ್ಥಿತಿ, ಈ ಮರ್ಮ ಅರ್ಥವಾಗದೆ, ಸಂನ್ಯಾಸದ ಅರಿವೇ ಇಲ್ಲದೆ, ಭಿಕ್ಷೆಗೆ, ಪಾದಪೂಜೆಯಲ್ಲಿ ಮೆರೆಯುವುದಕ್ಕೆಂದು ಕಾಷಾಯದಂಡ ಧರಿಸಿದವರಿಗೆ ಸಿದ್ಧಿ ಎಂತಾಗುವುದು?

"ಏನು ಪೂಜಾರ್‍ರು ಆಶ್ರಮ ಸ್ವೀಕಾರಮಾಡಿಬಿಟ್ಟಿರಲ್ಲಾ?" ಎಂದು ಒಬ್ಬ ವಿಧುರಪೂಜಾರಿಯನ್ನು ಕೇಳಲು, ಆತ "ನಮ್ಮಂಥ ಬಡಪಾಯಿಗಳಿಗೆ ಎರಡನೆಯ ಮದುವೆಗೆ ಯಾರು ಹೆಣ್ಣು ಕೊಡುತ್ತಾರೆ, ಸ್ವಾಮಿ?" ಎಂದ ವೃದ್ಧ ಸಂನ್ಯಾಸಿ. ಯಾರಾದರೂ ತಕ್ಕ ಬಂದೋಬಸ್ತಾದ ವಯಸ್ಸಾದ ಹೆಣ್ಣು ಕೊಡುವವರು ಸಿದ್ಧರಿದ್ದರೆ ಎಂದಿಗೂ ಸಂನ್ಯಾಸಕ್ಕೆ ಕೈಹಾಕುತ್ತಿರಲಿಲ್ಲವೇನೋ ಆ ಪುಣ್ಯಾತ್ಮ! ಯೋಗದಲ್ಲಿ ಪ್ರತಿಷ್ಠಿತನಾಗುವುದಕ್ಕೂ, ಸಂಕಲ್ಪತ್ಯಾಗ, ನಿಷ್ಕಾಮಫಲಕರ್ಮದ ಅರ್ಹತೆ ಬೇಡವೆ? ದುಡಿದವನಿಗೇ ಅಲ್ಲವೆ ಚೆನ್ನಾಗಿ ನಿದ್ರೆ ಹತ್ತುವುದು? ಕರ್ಮಯೋಗದಿಂದಲೇ ಅಲ್ಲವೆ ಚಿತ್ತಕಲ್ಮಷ ಕಳೆದು, ಚಿತ್ತ ಸ್ಥೈರ್ಯ ಬರುವುದು? ಜಪಸರವು ಜಪಕ್ಕೆ ಸಹಾಯಕವಾಗಿರುವಂತೆ ಜಪಸರವಿಲ್ಲದಿದ್ದರೂ ಅನಂತರ ಜಪ ನಡೆಯುವಂತೆ, ಕರ್ಮಯೋಗವು ಪರಮಾತ್ಮ ಧ್ಯಾನಕ್ಕೆ ಸಹಾಯ. ಮೊದಲು ಕರ್ಮಸಾಧನದಿಂದ ಪರಮಾತ್ಮನನ್ನು ಕಾಣುವುದು, ಅನಂತರ ಅಕರ್ಮನಾಗಿ, ಧ್ಯಾನದಲ್ಲೇ ಪರಮಾತ್ಮಚಿಂತನ ಮಾಡುವುದು.

ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥

ಯೋಗದಲ್ಲಿ ಆರೂಢನಾಗಲು ಇಚ್ಛೆಯುಳ್ಳ ಮುನಿಗೆ ಆ ಯೋಗಪ್ರಾಪ್ತಿಗೆ ನಿತ್ಯಕರ್ಮವೇ ಸಾಧನ—ಕಾರಣ. ಆ ಯೋಗದಲ್ಲಿ ಆರೂಢನಾದವನಿಗೆ ಶಮವೇ ಸಾಧನ—ಕಾರಣ. ಪರಮೋಚ್ಚಸ್ಥಿತಿ ಸಿಗಲೆಂದು ಸರ್ವಸಾಮಾನ್ಯ, ನಿತ್ಯವ್ಯವಹಾರಗಳನ್ನು ಹೇಗೆ ಶುದ್ಧಗೊಳಿಸಿಕೊಂಡು ಸಿದ್ಧನಾಗಬೇಕೆಂದು ಕಲಿಸುತ್ತದೆ, ಈ ಗೀತಾಶಾಸ್ತ್ರ. ಸಾಧನವೂ ಶುದ್ಧವಾಗಿರಬೇಕು, ಗುರಿಯೂ ಶುದ್ಧವಾಗಿರಬೇಕು. "ಏನ ಕೇನ ಪ್ರಕಾರೇಣ ಋಣಂ ಕೃತ್ವಾ ಘೃತಂ ಪಿಬೇತ್" ಮಾರ್ಗವಲ್ಲ. ಪ್ರತಿಕ್ಷಣದ ಪ್ರತಿಕಾರ್ಯವನ್ನೂ ಮನೋವಾಕ್ ಕಾಯಕರ್ಮಗಳನ್ನೂ ಸರ್ವದಾ ಶುದ್ಧಗೊಳಿಸಲು ಪ್ರಯತ್ನ—ಈ ಕರ್ಮ ಯೋಗದ್ದು—ಗುರಿ ಸೇರಿದ ಮೇಲೆಯೋ, ಅಲ್ಲಿ ಆರೂಢವಾಗಿರುವುದಕ್ಕೆ 'ಶಮ' ಪ್ರಯತ್ನ. ದ್ವಾದಶಭಾವಗಳಲ್ಲಿ ಒಂದು ಭಾವ 'ಶಮ.' "ಶಮದಮಾದಿ" ಅಷ್ಟಾಂಗಗಳಲ್ಲಿ ಮೊದಲನೆಯದು ಶಮ—ತನ್ನ ಮೇಲೆ ಕಾವಲು.

> ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।
> ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥೪॥

ಯಾವಾಗ ಇಂದ್ರಿಯ ಅರ್ಥಗಳಲ್ಲಿ (ಶಬ್ದಾದಿ ಶಮಗಳಲ್ಲಿ) ತತ್ಸಾಧನವಾದ ಕರ್ಮಗಳಲ್ಲಿ (ಅವುಗಳನ್ನು ದೊರಕಿಸಿಕೊಳ್ಳುವ ಆಸಕ್ತಿಯಿಲ್ಲದೆ, ಸರ್ವಸಂಕಲ್ಪ ಸಂನ್ಯಾಸಮಾಡುವನೋ (ತ್ಯಾಗಮಾಡುವನೋ) ಆಗ ಆ ಸಾಧಕನನ್ನು ಯೋಗಾ ರೂಢನೆಂದು ಹೇಳುತ್ತಾರೆ. ಸರ್ವಸಂಕಲ್ಪತ್ಯಾಗವೆಂದರೆ—ಇಂದ್ರಿಯನಿಗ್ರಹ, ವಿಷಯಗಳಿಗೆ ಮನಕೊಡದಿರುವಿಕೆ, ಮನೋನಿಗ್ರಹ, ಇಂದ್ರಿಯಗಳ ಬಯಕೆ ಯನ್ನು ಮನೋಗತಮಾಡಬೇಕೆಂದು ಮನಸ್ಸು ಓಡದಿರುವುದು, ಇಂದ್ರಿಯ ಮನಗಳ ಸಂಗಮದಿಂದ ಏನು ಬಯಕೆ ಹುಟ್ಟಿದರೂ, ಅದನ್ನು ಸಫಲವನ್ನಾಗಿ ಮಾಡಿಕೊಳ್ಳಲು ಆಸಕ್ತಿ ತೋರದೆ, ತ್ಯಾಗ ಮಾಡಿದರೆ ಸರ್ವಸಂಕಲ್ಪ ಸಂನ್ಯಾಸ ವಾಯಿತು. ಆ ಸ್ಥಿತಿಗೆ ಬಂದರೆ ಯೋಗದಲ್ಲಿ ಸ್ಥಿರವಾಗಿ ಸ್ಥಾಪಿತವಾಗಲು (ಆರೂಢ) ಸಾಧ್ಯವಾಗುತ್ತದೆ. ಅಲ್ಲದೆ, ಇಲ್ಲಸಲ್ಲದ ಜನವೆಲ್ಲ ಯೋಗಾರೂಢ ರೆಂದರೆ ನಾಚಿಕೆಗೀಡಾಗುವುದು; ಮಾರ್ಜಾಲ ಸಂನ್ಯಾಸವೋ, ಬಕಧ್ಯಾನವೊ ಆಗಿ, ಯೋಗವೇಷದಿಂದ ಏನೋ ಸಂಕಲ್ಪ ಸಾಧಿಸಲು 'ಆರೂಢ'ರಾದಂತಾಗು ವುದು. ರಾವಣನು ಸಂನ್ಯಾಸಿವೇಷ ಧರಿಸಿದನು, ಅರ್ಜುನನೂ ಸಂನ್ಯಾಸಿ ಯಾದನು. ಆದರೆ ಸಂಕಲ್ಪದಿಂದ, ನ್ಯಾಸವೆಂದರೆ ಬಿಡುವುದು; ಸಂಕಲ್ಪ

ಬಿಡುವುದು. ಈ ಇಬ್ಬರೂ ಕನ್ಯಾಪಹಾರಕ್ಕೆ, ಮೋಸಕೃತ್ಯಕ್ಕೆ ಸಹಾಯಕ್ಕಾಗಿ ರಾವಣನೂ, ಪ್ರಣಯಕೇಳಿಗೆ ಸಹಾಯಕ್ಕಾಗಿ ಅರ್ಜುನನೂ ಸಂನ್ಯಾಸಿಗಳಾಗಿ, ಸಂನ್ಯಾಸವೇಷಕ್ಕೇ ಅಪಹಾಸ್ಯತಂದರು. ನಮ್ಮ ಪುಣ್ಯಭೂಮಿ ಭಾರತದಲ್ಲಿ ಈಗಲೂ ಸಂನ್ಯಾಸಿಗಳಿಗೆ ಸನ್ಮಾನವಿದೆ. ಬರೀ ಕಾವಿ ಧರಿಸಿದ, ದಂಡಕಮಂಡಲಧಾರಿಗಳಿಗೂ, ಯಾವ ಹುತ್ತದಲ್ಲಿ ಯಾವ ಹಾವಿದೆಯೋ, ಯಾವ ನೀರಿನಲ್ಲಿ ಯಾವ ತೀರ್ಥವಿದೆಯೋ ಎಂಬ ಭಾವನೆಯ ಮೇಲೆಯೇ ಅಪರಿಚಿತ ಸಂನ್ಯಾಸಿಗಳಿಗೆ ಕೂಡ ಮರ್ಯಾದೆ ಇದೆ. ಆದರೆ ಕಪಟ ಸಂನ್ಯಾಸಿಗಳು ಜಾಸ್ತಿಯಾಗಿ "ಉದರನಿಮಿತ್ತಂ ಬಹುತರ ವೇಷಃ" ಎಂಬಂತೆ ಸಂನ್ಯಾಸಿಗಳು ಜಾಸ್ತಿಯಾಗಿಬಿಟ್ಟಿದ್ದಾರೆ. ಅದಕ್ಕೇ ಪರಮಾತ್ಮ ಸಂನ್ಯಾಸಿಯಾಗಲು ಅರ್ಹತೆ ಪಡೆಯುವುದಕ್ಕೆ ಬಿಗಿಯಾದ ನಿಯಮಗಳನ್ನು ಹಾಕಿರುವುದು. ಸಂನ್ಯಾಸಿಯಾಗಿ ಆಮೇಲೆ ಆ ಧರ್ಮ ನಿರ್ವಹಿಸಲು ಸಾಧ್ಯವಾಗದಂತೆ ತೋರಿದರೆ ಹಿಂದಿರುಗಿ ಗೃಹಸ್ಥಾಶ್ರಮಕ್ಕೆ ಬರಲಾಗದಿರುವುದರಿಂದ ಸುಲಭಸಾಧ್ಯವಾದ ಕರ್ಮಯೋಗವನ್ನೇ ಹೊಗಳಿರುವುದು.

ಉದ್ಧರೇದಾತ್ಮನಾಽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥೫॥

ಆತ್ಮನನ್ನು ಆತ್ಮದಿಂದಲೇ ಉದ್ಧರಿಸಬೇಕು. ಅವಿವೇಕದಿಂದ ಆತ್ಮನನ್ನು ನಾಶಗೊಳಿಸಬಾರದು. ಆತ್ಮಕ್ಕೆ ಆತ್ಮವೇ ಬಂಧುವು, ಆತ್ಮಕ್ಕೆ ಆತ್ಮವೇ ಶತ್ರುವು. ಉದ್ಧಾರವೆಂದರೆ ಉತ್ + ಧಾರ = ಮೇಲಕ್ಕೆ ಹಿಡಿದು ಎತ್ತುವುದು. ಅವಸಾದವೆಂದರೆ ಕೆಳಕ್ಕೆ ತಳ್ಳುವುದು. ಈ ಶ್ಲೋಕವು ಪ್ರಸಿದ್ಧವಾದ ಬುದ್ಧತತ್ತ್ವಗಳನ್ನು ಮನಸ್ಸಿಗೆ ತರುತ್ತದೆ. 'ಆತ್ಮಾ ಹಿ, ಆತ್ಮನೋ ಗತಿಃ" "ಅತ್ತಸರಣಾ, ಅನನ್ನಸರಣಾ" ಎಂಬ ಬೌದ್ಧಮಂತ್ರಸೂತ್ರಗಳು, ಆತ್ಮನಿಂದಲೇ ಆತ್ಮ ಉದ್ಧಾರವಾಗಬೇಕೆಂದು ಸಾರುತ್ತದೆ. ಶ್ರೀಕೃಷ್ಣನೇ ಅಲ್ಲವೆ, ಯುಗಾನಂತರ ಬೌದ್ಧಾವತಾರತಾಳಿ ಜನರನ್ನುದ್ಧರಿಸಿದುದು? ಸ್ವಾಮಿಯ ಬೀಜಮಂತ್ರವು ಅವತಾರವತಾರಗಳಲ್ಲೂ ಇದೇ. ಆದುದರಿಂದಲೇ ಆತ್ಮಶಕ್ತಿಯು ಅಗಾಧವೆಂದೂ ಅದನ್ನೆ ಶರಣುಹೋಗಬೇಕೇ ಹೊರತು, ಅನ್ಯರನ್ನು ಶರಣುಹೋಗಬಾರದೆಂದೂ ವಿಧಿಸಿದ್ದಾನೆ ಬುದ್ಧಪರಮಾತ್ಮ. ಒಳಗೆ ಪರಮಾತ್ಮನೇ ಚಿದಂಶನಾಗಿ ಜೀವಾತ್ಮನಾಗಿ ಆರೂಢನಾಗಿದ್ದಾನೆ. "ನಿತ್ಯಃ, ಸರ್ವಗತಃ, ಸ್ಥಾಣುಃ, ಸನಾತನಃ" (೨, ೨೪)

ಮತ್ತು "ಪ್ರಭುಃ, ಸಾಕ್ಷೀ, ನಿವಾಸಃ, ಶರಣಂ, ಸುಹೃತ್" (೯.೧೮) ರಲ್ಲಿ ಬಂದಿರುವಂತೆ ನನ್ನೊಳಗಿನ ಪರಮಾತ್ಮನೇ ಸರ್ವಗತಃ. ಇನ್ನು ಅನ್ಯರನ್ನು ಶರಣುಹೋಗುವುದು ತಾನೆ ಎಂತು? ಅವನೇ ನಾಥ, ಅವನೇ ಗತಿ, ಅವನನ್ನೆ ಶರಣುಹೋಗದೆ ಅನ್ಯರು ಗತಿ ಎಲ್ಲುಂಟು ನಮಗೆ? ಏನೇ ಇರಲಿ, ಏನೇ ಬರಲಿ, ಏನೇ ಆಗಲಿ, ಆತ್ಮಾವಲಂಬಿಯಾದವನು ಉದ್ಧಾರವಾಗುವನು. ತನ್ನಲ್ಲಿಯೇ ತನಗೆ ನಂಬಿಕೆ ಇಲ್ಲದೆ ತನ್ನನ್ನು ತಾನೇ ನಾಶಮಾಡಿಕೊಳ್ಳಬಾರದು. "ಸಂಶಯಾತ್ಮಾ ವಿನಶ್ಯತಿ" ಎಂದು ಪರಮಾತ್ಮ ಹೇಳಿದಾನಲ್ಲಾ—ಆ ಸಂಶಯಾತ್ಮನೆಂದರೆ ಯಾರು? ತನ್ನಲ್ಲೇ ತನಗೆ ನಂಬಿಕೆ ಇಲ್ಲದವನು, ತನ್ನಲ್ಲಿಯೇ ತಾನು ಸಂದೇಹಪಟ್ಟುಕೊಳ್ಳುವನು. ತನ್ನಲ್ಲಿರುವ ಆತ್ಮನನ್ನು ಕಂಡಿದ್ದರೆ ತಾನೆ, ಅದರ ಬಲವನ್ನು, ಆತ್ಮಬಲವನ್ನು ಸಂಶಯಾತ್ಮನು ಪಡೆದಾನು?

> ಬಂಧುರಾತ್ಮಾಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ
> ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥

ಯಾವ ಆತ್ಮ ಯಾವ ಆತ್ಮನನ್ನು ಹೇಗೆ ಉದ್ಧರಿಸುವುದು ಎನ್ನುವದಕ್ಕೆ ಪರಮಾತ್ಮ ಹೇಳುತ್ತಾನೆ: ಯಾವ ಆತ್ಮನು ಈ ಶರೀರ ವಿಷಯ ಸಂಘಾತವನ್ನು ವಿವೇಕಯುಕ್ತವಾದ ಅಂತರಾತ್ಮನಿಂದ (ಮನೋನಿಗ್ರಹಬುದ್ಧಿ) ಜಯಿಸಿರುವನೋ ಆ ಆತ್ಮನಿಗೆ, ಆತ್ಮನೇ, (ತನ್ನ ಸ್ವರೂಪ) ಬಂಧುವು. ಅಜಿತಾತ್ಮನಿಗೆ, ಆ ಸ್ವೇಚ್ಛಾವೃತ್ತಿಯ ಆತ್ಮನೇ ಶತ್ರುಭಾವದಿಂದ, ಬಾಹ್ಯಶತ್ರುವಿನಂತೆ ವರ್ತಿಸುವನು. ಯಾರಿಗೂ ಹೊರಗಿನ ಮಿತ್ರನೂ ಇಲ್ಲ, ಹೊರಗಿನ ಶತ್ರುವೂ ಇಲ್ಲ. ನಮಗೆ ನಾವೇ ಬಂಧುಗಳು (ಮಿತ್ರ); ನಮಗೆ ನಾವೇ ಶತ್ರುಗಳು. ಹೊರಗಿನವರನ್ನು ಹೊಣೆಗಾರನನ್ನು ಮಾಡಿ ಯಾರ ಮೇಲೂ ಅನುಕೂಲ ಪ್ರತಿಕೂಲಾದಿಗಳಿಗೆ ಭಾರ ಹಾಕುವಂತಿಲ್ಲ. ಎಲ್ಲದಕ್ಕೂ ನಾವೇ ಹೊಣೆ. ಇದರಲ್ಲಿ ಭಾರಿ ಸ್ವಾವಲಂಬನತತ್ತ್ವವಿದೆ. ಹೊರಗಡೆ ಯಾರ ಆಶ್ರಯಕ್ಕಾದರೂ ತಡಕಾಡಲವಕಾಶವಿಲ್ಲದಾಗ, ಹೊರಗಣವರ ಮೇಲೆ ಯಾವುದಕ್ಕೂ ದೂರು ಹೊರಿಸಲು ಅವಕಾಶವಿಲ್ಲದಾಗ, ನಮ್ಮ ಶುಭಾಶುಭಗಳನ್ನು ಕೊಟ್ಟವ ಒಬ್ಬ ದೇವನಾಗಲಿ, ದೈತ್ಯನಾಗಲಿ ಇರುವನೆಂಬ ಭಾವನೆಯೇ ಅಳಿದು, ಎಲ್ಲಾ ಶುಭಾಶುಭಗಳಿಗೂ ನಾವೇ ಅಂತರಾತ್ಮಸಾಕ್ಷಿಯಾಗಿ, ಕಾರಣರೆಂದು ದೃಢವಾದಾಗ, ನನ್ನ ಹಣೆಬರಹಕ್ಕೆ ನಾನೇ ಹೊಣೆ ಎಂಬ ತತ್ತ್ವ ಬಂದು, ಆತ್ಮೋದ್ಧಾರ

ವಾಗಲು, ನಮ್ಮಲ್ಲಿರುವ ಉಚ್ಚ, ಅಮೂಲ್ಯ, ಮತ್ತು ಹೆಚ್ಚಿನ ತೇಜಸ್ಸು ಹೊರ ಸೂಸಿ ಪ್ರಕಾಶಿಸಿ ಕೆಲಸಮಾಡಿ, ನಮ್ಮನ್ನು ಉನ್ನತ ಪವಿತ್ರಸ್ಥಾನಕ್ಕೆ ಸೇರಿಸಲು ಅವಕಾಶವಾಗುತ್ತದೆ. ಇದಕ್ಕಾಗಿಯೇ ಸ್ವಾಮಿಯು ಆತ್ಮಾವಲಂಬಿಯಾಗಲು "ನಿನಗೆ ನೀನೇ ಶತ್ರು, ನಿನಗೆ ನೀನೇ ಮಿತ್ರ" ಎಂದು ಹೊರೆಯನ್ನೆಲ್ಲ ಅರ್ಜುನನ ಮೇಲೆ ಹಾಕಿಬಿಟ್ಟು, ತನ್ನ ಮೇಲೆ ಏನೂ ಇಟ್ಟುಕೊಳ್ಳದೆ. ಅರ್ಜುನನಿಗೆ ಈ ತತ್ತ್ವದಿಂದ ಆತನಲ್ಲಿ ಅಡಗಿರುವ ಗಾಢವಾದ, ಗೂಢವಾದ ಆತ್ಮಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳಲು ಸೂಚಿಸಿದ—ದೀನಬಂಧು. ಪ್ರಪಂಚದಲ್ಲಿ ಬರುವ ಕಷ್ಟ, ಪರದಾಟಗಳೆಲ್ಲ ಈ ನಮ್ಮ ನಮ್ಮ ಆತ್ಮಶಕ್ತಿಯು ನಮಗೆ ವೇದ್ಯವಾಗದಿರುವುದರಿಂದಲೆ. ಈ ಉಚ್ಚಕಾಂಕ್ಷೆ ಬಾರದಿದ್ದರೆ ಹೆಜ್ಜೆ ಮುಂದೆ ಸಾಗದು. ಸಂಶಯ ಬಂದರೆ, ಪರಾವಲಂಬನೆಯಾದರೆ, ನಡೆಯದು.

> ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
> ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥೭॥

ಯಾರ ಆತ್ಮನು ಆತ್ಮನಿಗೆ ಬಂಧುವೆನ್ನುವದನ್ನು ಸ್ಪಷ್ಟೀಕರಿಸಿ, ಶೀತೋಷ್ಣ, ಸುಖದುಃಖ, ಮಾನಾಪಮಾನಗಳ ದ್ವಂದ್ವಗಳಲ್ಲಿ ವಿಜಿತಾಂತಃಕರಣವುಳ್ಳವನು, ಪ್ರಶಾಂತಚಿತ್ತದಿಂದ ಪರಮಾತ್ಮನಲ್ಲಿ, ಎಲ್ಲರ ಮಹಾತ್ಮದಲ್ಲಿ ಸ್ಥಿತವಾಗಿರುವನು.

> ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
> ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥೮॥

ಯಾವನು ಕಲ್ಲು ಕಾಂಚನಗಳನ್ನು ಸಮನಾಗಿ ಭಾವಿಸಿ, ಜ್ಞಾನವಿಜ್ಞಾನಗಳಿಂದ ತೃಪ್ತನಾಗಿ, ಜಿತೇಂದ್ರಿಯನಾಗಿ, ನಿರ್ವಿಕಾರನಾಗಿ, ಸ್ಥಿರವಾಗಿರುವನೋ (ಕೂಟಸ್ಥ) ಆ ಯುಕ್ತನು ಯೋಗಿ ಎಂದು ಹೇಳಲ್ಪಡುವುದು ಕೂಟಸ್ಥನೆಂದರೆ ಅಡಿಗಲ್ಲಿನಂತೆ ನಿರ್ವಿಕಾರಿಯು, ಎಷ್ಟೇ ಏಟು ಬಿದ್ದರೂ ಮಾರ್ಪಡನು. ಯಾವನು ಸುಹೃತ್ (ಪ್ರತ್ಯುಪಕಾರಾಪೇಕ್ಷೆಯಿಲ್ಲದೆ ಉಪಕಾರ ಮಾಡುವವ) ಮಿತ್ರ (ಪ್ರತ್ಯುಪಕಾರಾಪೇಕ್ಷೆಯಿಂದ ಉಪಕಾರ ಮಾಡುವವ) ಉದಾಸೀನ (ಉಪಕಾರದ ಗಮನವೇ ಇಲ್ಲದವ) ಮಧ್ಯಸ್ಥ (ತಟಸ್ಥ) ಶತ್ರು (ದುಷ್ಟ, ಉಪಕಾರ ಮಾಡಿದರೂ ಅಪಕಾರ ಮಾಡುವವ) ಬಂಧು (ನೆಂಟ) ಸತ್ಪುರುಷರು (ಸಾಧು) ಪಾಪಿಗಳು (ಪಾಪಿಗಳಲ್ಲೂ ಎಂದು ಪಾಪೇಷು ಎಂದು ಒತ್ತಿ ಹೇಳಿದ್ದಾನೆ ಪರಮಾತ್ಮ) ಎಲ್ಲರಲ್ಲಿಯೂ ಸಮಬುದ್ಧಿಯುಳ್ಳವನು ಶ್ರೇಷ್ಠನೆನಿಸು

ವನು. ಯೋಗಾರೂಢರ ವಿಷಯ ಪ್ರಸ್ತಾಪಿಸುತ್ತಿರುವದರಿಂದ ಯೋಗಿಗಳಲ್ಲೂ ಶ್ರೇಷ್ಠನೆನಿಸಿಕೊಳ್ಳುವನು.

ಈ ಮೂರು ಶ್ಲೋಕಗಳಲ್ಲಿ ಪರಮಾತ್ಮ "ಕೂಟಸ್ಥ"ನನ್ನು ತಂದು, ಯಾವುದಕ್ಕೂ ಜಗ್ಗದೆ, ಯಾವುದಕ್ಕೂ ಸಗ್ಗದೆ, ನಿರ್ವಿಕಾರಿಯಾಗಿ ಸ್ಥಿರವಾಗಿ ಶಾಶ್ವತವಾಗಿರುವ ಅಡಿಗಲ್ಲಿನಂತಿರಲು ಸಮಬುದ್ಧಿಯನ್ನು ಬೋಧಿಸಿದ್ದಾನೆ.

"ಶೀತ ಉಷ್ಣ" ದ್ವಂದ್ವ ತಂದ ಪರಮಾತ್ಮ, ಪ್ರಕೃತಿಯ ಹಿತಾಹಿತ ತೋರಲು ಸಂಕೇತವಾಗಿ "ಸುಖದುಃಖ" ತಂದ, ಇಂದ್ರಿಯ ವಿಷಯಗಳ ದ್ವಂದ್ವ ಅನುಕೂಲ ಪ್ರತಿಕೂಲ ತೋರಿಸಲೋಸುಗ. "ಮಾನಾಪಮಾನ" ತಂದ, ಮನಸ್ಸಿನ ದ್ವಂದ್ವ ತೋರಿಸಲೋಸುಗ. ಹೇಗೆ ಹೊರಗಿನ ಪ್ರಕೃತಿಯ, ಶರೀರೇಂದ್ರಿಯಗಳ, ಮನಸ್ಸಿನ ಹೊಡೆತಗಳಿಂದ ದ್ವಂದ್ವಾತೀತರಾಗಬೇಕೆಂದು, ಹೊರ ವ್ಯಾಪಾರದಲ್ಲಿ ದ್ವಂದ್ವಾತೀತನಾಗಿ ಹೇಗೆ ಸಮತ್ವ ಪಡೆಯಬೇಕೆಂದು ತೋರಲು, ಕಲ್ಲು ಕಾಂಚನಗಳನ್ನು ತಂದ. ಜ್ಞಾನ ವಿಜ್ಞಾನಗಳಿಂದ ತೃಪ್ತನಾಗಬೇಕು. ಇಹಪರಗಳೆರಡರ ತಿಳಿವಳಿಕೆಯೂ ಬಂದುಹೋಯಿತು. ಜ್ಞಾನ ವಿಜ್ಞಾನಗಳಲ್ಲಿ ತೃಪ್ತಿಯಾಗದೆ, ಪಡೆಯಬಹುದಾದ, ಅಜೀರ್ಣವಾಗದೆ ಸೇವಿಸಬಹುದಾದ, ವಸ್ತುಗಳಲ್ಲಿ ಮುಖ್ಯವಾದುದು ಜ್ಞಾನವಿಜ್ಞಾನ; ಇದಕ್ಕೆ ಕೊನೆಯೇ ಇಲ್ಲ, ಇದಕ್ಕೆ ಆತ್ಮತೃಪ್ತಿಯೇ ಕೊನೆ. ಕಲಿತ ವಿಷಯಗಳೆಲ್ಲ ಈ ಆತ್ಮತೃಪ್ತಿ ಸಹಾಯಕವಾಗಬೇಕು. ಆಗಲೇ ಜಿತೇಂದ್ರಿಯತ್ವ ಬಂದು, ಕೂಟಸ್ಥ—ನಿರ್ವಿಕಾರಿಯಾಗುವುದು. ಆಗ ಯುಕ್ತ—ಸಮತೂಕನಾಗುತ್ತಾನೆ.

> ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।
> ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥೯॥

ವ್ಯವಹಾರದಲ್ಲಿ ಸಮಬುದ್ಧಿಯನ್ನು ಹೇಗೆ ಸಾಧಿಸಬೇಕೆಂಬುದಕ್ಕೆ, ತನ್ನೊಡನೆ ನಿತ್ಯವ್ಯವಹಾರವ್ಯಾಪಾರಕ್ಕೆ ಬರುವ ಎಲ್ಲ ವ್ಯಕ್ತಿಗಳೊಡನೆಯೂ, ಸಮಾಜದಲ್ಲಿನ, ಜನಾಂಗದಲ್ಲಿನ ಉಪಯುಕ್ತ, ಅನುಪಯುಕ್ತ ಉದಾಸೀನರಲ್ಲೇ ಅಲ್ಲದೆ, ಶತ್ರುಗಳಲ್ಲಿಯೂ, ದುಷ್ಟರಲ್ಲಿಯೂ, ಪಾಪಿಗಳಲ್ಲಿಯೂ, ಬಂಧುಗಳಂತೆ ಸದ್ಬುದ್ಧಿಯಿಂದ ಸಮಬುದ್ಧಿಯುಳ್ಳವನು ಶ್ರೇಷ್ಠನೆನಿಸುವನು.

೫ನೆಯ ಅಧ್ಯಾಯ ೧೮ನೆಯ ಶ್ಲೋಕದಲ್ಲಿಯೂ ಸಮದರ್ಶನ ಬಂದಿದೆ. ಅಲ್ಲಿ ಹೇಳಿರುವುದು "ಪಂಡಿತಾಃ ಸಮದರ್ಶಿನಃ" ಎಂದು ಜ್ಞಾನಿಯ ಸಮ

ದೃಷ್ಟಿ. ದೃಷ್ಟಿಯಲ್ಲಿನ ಎಲ್ಲಾ ತರಹ ವ್ಯಕ್ತಿಗಳನ್ನೂ ಸೂಚಿಸಿ, ಸತ್ತ್ವಗುಣ ಪ್ರಧಾನಿಯಾದ ಬ್ರಾಹ್ಮಣನಲ್ಲಿಯೂ, ರಜೋಗುಣ (ಪರೋಪಕಾರಿ ಧೇನು) ಪ್ರಧಾನಿಯಾದ ಹಸುವಿನಲ್ಲಿಯೂ, ತಮೋಗುಣಪ್ರಧಾನಿಯಾದ ಆನೆ ಯಲ್ಲಿಯೂ, ಗುಣವಿಭಾಗ ಭೇದದೃಷ್ಟಿಯಿಲ್ಲದೆ, ಸಮಷ್ಟಿಸೃಷ್ಟಿಯನ್ನು ಒಂದೇ ದೃಷ್ಟಿಯಿಂದ ಕಾಣುವುದು. ಆದರೆ ಇಲ್ಲಿ ಹೇಳುವುದು ಸಾಧಕನು ಯೋಗಿಯು—ಕರ್ಮಯೋಗಿಯು "ಸಮಬದ್ಧಿ" ವ್ಯವಹಾರದಲ್ಲಿ ಎಂತು ವರ್ತನೆಯನ್ನು ಅಭ್ಯಾಸಮಾಡಬೇಕೆಂದು. "ಸಮಬುದ್ಧಿ" ಎಂದು ಹೇಳಿದೆಯೆಂದು ಎಲ್ಲರಲ್ಲಿಯೂ ಒಂದೇ ಸಮನಾಗಿ ನಡೆಯಬೇಕೆಂದಲ್ಲ. ಗುರುವಿಗೆ ದೂರದಿಂದ ನಮಸ್ಕಾರ ಮಾಡುವವನು ಬಾಲ, ತಾಯಿಯ ತೊಡೆಯ ಮೇಲೆ ಹೋಗಿ ಕೂಡುವನು. ಒಂದು ಗುರುಭಕ್ತಿ, ಒಂದು ಮಾತೃಭಕ್ತಿ. ಎರಡೂ ಭಕ್ತಿಯೇ. ಹೂವನ್ನು ಕೈಯಲ್ಲಿ ತೆಗೆದು ಪೂಜಿಸಿ ಆನಂದಿಸಬಹುದು. ಬೆಂಕಿಗೆ ದೂರದಿಂದಲೇ ಧೂಪ ಹಾಕಿ ಪೂಜಿಸಿ ಆನಂದಿಸಬೇಕು. ಒಂದಕ್ಕೆ ಹತ್ತಿರದ ಆಲಿಂಗನ, ಒಂದಕ್ಕೆ ದೂರದಿಂದ ನಮಸ್ಕಾರ.

ಎರಡರಲ್ಲೂ ಸಮದೃಷ್ಟಿ ಇದ್ದರೂ, ಆದರದರ ಯೋಗ್ಯತೆಗೆ ತಕ್ಕಂತೆ, ಬಾಹ್ಯ ವ್ಯವಹಾರ ಸಂದರ್ಭಗಳಿಗೆ ತಕ್ಕಂತೆ ಹೊರವ್ಯಾಪಾರವಾದರೂ, ಸನ್ನಿವೇಶಕ್ಕೆ ತಕ್ಕಂತೆ ವ್ಯವಹಾರವಾದರೂ, ಒಳಗಡೆ ಕಣ್ಣು ನೋಟದಲ್ಲಿ ಎಲ್ಲ ಒಂದೇ. ಎಲ್ಲರಿಗೂ ಸಹೃದಯ, ಎಲ್ಲರಿಗೂ ಅಂತರಾತ್ಮಾಲಿಂಗನ; ನಮ್ಮಲ್ಲಿನ ಅಂತ ರಾತ್ಮ ಅಲ್ಲಿರುವ ಅಂತರಾತ್ಮನೊಡನೆ ಮಿಳಿತವಾಗುವುದು.

ಎರಡೆಡೆಯಲ್ಲಿಯೂ 'ಪಾಪೇಷು' 'ಶ್ವಪಾಕೇಚ' ಎಂದು ಪತಿತರಲ್ಲಿ ಪತಿತ ರಾದವರನ್ನು ಸೇರಿಸಿದೆ. ಸಮದರ್ಶನವು ಅವರಿಗೆ ಅಧಿಕವಾಗಿ ನೆರವಾಗುವುದು. ಅವರಲ್ಲಿ ಜ್ಞಾನಿಗಳು, ಯೋಗಿಗಳು ಸಹೃದಯ ತೋರಿದರೆ, ಅವರ ಕೈವಲ್ಯಕ್ಕೆ ಎಡೆಯಾಗುವುದು. ಪಾಮರರನ್ನು ಅಲಕ್ಷ್ಯದಿಂದ ನೋಡದೆ, ಅವರಲ್ಲಿಯೂ ಅಂತಃಕರಣ ಕಾರುಣ್ಯದೃಷ್ಟಿಯಿಂದ ಅವರ ಅಭ್ಯುದಯಕ್ಕಾಗಿ ಪ್ರಾರ್ಥನಾಭಾವ ದಿಂದ ಪಾಪಿಯಾಗಲಿ, ಪತಿತನಾಗಲಿ, ಅವನ ಅಂತರಾತ್ಮನಿಗೆ ಮರ್ಯಾದಾಭಾವ ತೋರಿದರೆ, ಅವನ ಆತ್ಮವೂ, ನಮ್ಮ ಆತ್ಮವೂ ಉದ್ಧಾರವಾಗುತ್ತದೆ. ಪಾಪಿಯು ಪಾಪಿಯಾದ್ದರಿಂದಲೇ ದೇವನಿಗೆ ಪ್ರಿಯನು. ಪುಣ್ಯವಂತನು ತನ್ನ ಪುಣ್ಯ ದಿಂದಲೇ ಪ್ರಿಯನಾದ.

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥

ಹೀಗೆ ಹದಮಾಡಿಕೊಂಡ ಸಾಧಕನು ತನ್ನಲ್ಲಿನ ಪರಮಾತ್ಮನಲ್ಲಿ ಆಶಾರಹಿತನಾಗಿಯೂ ತನ್ನ ಹಿತಕ್ಕಾಗಿ ಸಂಗ್ರಹಶೂನ್ಯನಾಗಿಯೂ (ಅಪರಿಗ್ರಹಃ) ಅಂತಃಕರಣವನ್ನು ವಶಮಾಡಿಕೊಂಡು, ಏಕಾಕಿಯಾಗಿ, ನಿರಂತರವೂ ರಹಸ್ಯವಾಗಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬೇಕು.

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತಮಂ ॥೧೧॥
ತತ್ರೈಕಾಗ್ರ್ಯಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥
ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸಂ ದಿಶಶ್ಚಾನವಲೋಕಯನ್ ॥೧೩॥
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥

ಇಷ್ಟೆಲ್ಲ ಸಿದ್ಧತೆಯನ್ನು ಮಾಡಿಕೊಂಡರೂ ಸಾಧನೆಗೆ ಸರಿಯಾದ ಕ್ರಮವನ್ನು ಹೇಳುತ್ತಾನೆ. ಯಾವ ರೀತಿ ಪ್ರಯತ್ನಪಟ್ಟರೆ ಸಾಧನೆಯು ಸಿದ್ಧಿಸುತ್ತದೆ ಎನ್ನುವುದಕ್ಕೆ, ಶುಚಿಯಾದ ಸ್ಥಳದಲ್ಲಿ ದರ್ಭಾಸನದ ಮೇಲೆ ವಸ್ತ್ರವನ್ನು ಹಾಸಿ, ಎತ್ತರ ತಗ್ಗಿಲ್ಲದ ಸಮನಾದ ಆಸನದ ಮೇಲೆ ಸ್ಥಿರವಾಗಿ ಕುಳಿತು, ಇಂದ್ರಿಯ ಅಂತಃಕರಣಗಳ ಓಟ ಜಯಿಸಿ, ಆತ್ಮಶುದ್ಧಿಗಾಗಿ ಮನಸ್ಸನ್ನು ಏಕಾಗ್ರವಾಗಿ 'ತತ್' ಚಿಂತನೆಯಲ್ಲಿ ನಿಲ್ಲಿಸಿ, ಚಿತ್ತಶುದ್ಧಿಗಾಗಿ ಯೋಗಾಭ್ಯಾಸ ಮಾಡಬೇಕು. ಯೋಗಕ್ಕೆ ಕೂಡುವಾಗ ಶರೀರ, ಶಿರಸ್ಸು, ಕೊರಳುಗಳನ್ನು ಚಲಿಸದೆ ಸ್ಥಿರವಾಗಿ ಒಂದೇ ನಿಲವಿನಲ್ಲಿ ನಿಲ್ಲಿಸಿ, ದಿಕ್ಕುಗಳಿಗೆ ದೃಷ್ಟಿಪ್ರಸಾರಮಾಡದೆ ತನ್ನ ಮೂಗಿನ ಕೊನೆಯನ್ನೇ ದಿಟ್ಟಿಸುತ್ತ ಶಾಂತನಾಗಿ, ನಿರ್ಭಯನಾಗಿ ಬ್ರಹ್ಮಚರ್ಯವ್ರತದಲ್ಲಿ ಸ್ಥಿರನಾಗಿ, ಪರಬ್ರಹ್ಮನಲ್ಲಿ (ಮಚ್ಚಿತ್ತೋ ಎಂದು ಭಗವಂತನು ಹೇಳುತ್ತಾನೆ) ಚಿತ್ತವಿರಿಸಿ ಯೋಗಾಭ್ಯಾಸವನ್ನು ಮತ್ಪರನಾಗಿ (ಭಗವಂತನ ಪ್ರೀತ್ಯರ್ಥವಾಗಿ, ತನ್ನ ಯಾವ ಸ್ವಾರ್ಥಕ್ಕೂ ಮೋಕ್ಷಕ್ಕೆ ಕೂಡ ಅಲ್ಲದೆ) ಸಮಾಧಿಯನ್ನು ಅಭ್ಯಾಸಮಾಡಬೇಕು. ಪೂರ್ತಿಯಾಗಿ ಕಣ್ಣು ಮುಚ್ಚಿದರೆ ನಿದ್ರೆ ಬರಬಹುದು. ಪೂರ್ತಿಯಾಗಿ ಕಣ್ಣು ತೆರೆದರೆ ನಾಲ್ಕಾರು ಕಡೆಗೂ ದೃಷ್ಟಿ ಚಲಿಸುತ್ತದೆ.

ಅದಕ್ಕಾಗಿ ಅರೆತೆರೆದ ಕಣ್ಣಿನಿಂದ ನಾಸಿಕಾಗ್ರವನ್ನೇ ನೋಡುತ್ತಿರಬೇಕು. ಒಂದು ಕಡೆ ಶೂನ್ಯಾವಸ್ಥೆ, ಇನ್ನೊಂದು ಕಡೆ ಏಕಾಗ್ರತೆ. ಜಾಗ್ರತಾವಸ್ಥೆಯಲ್ಲಿ ಏಕಾಗ್ರತೆಗಾಗಿ ಅರ್ಧೋನ್ಮೀಲಿತವಾಗಿರಬೇಕು. ಕಣ್ಣುಗಳು ಪುರಾಣ, ಪ್ರವಚನಗಳನ್ನು ಕೇಳಹೋದರೆ ನಿದ್ರೆಹತ್ತಿಬಿಡುತ್ತೆ—ತಮೋಗುಣ. ನಿದ್ರೆಗೆಂದು ಮಲಗಿದರೆ ವೃಥಾವಿಚಾರಚಕ್ರಗಳು ಪ್ರಾರಂಭವಾಗುತ್ತೆ—ರಜೋಗುಣ. ಇವುಗಳ ಗುಲಾಮನಾಗದೆ ವ್ಯವಹಾರವೆಲ್ಲ ಶುದ್ಧಮಾಡಿ, ಉದ್ದೇಶ ಊರ್ಧ್ವಾಭಿಮುಖನಾಗಿ, ಬಾಹ್ಯವಿಷಯಗಳ ಚಿಂತನೆ ಬಿಟ್ಟು, ಸತ್ತ್ವಗುಣಧ್ಯಾನ ಅಭ್ಯಾಸಿಸಬೇಕು. ರಜೋಗುಣ ತಮೋಗುಣಗಳನ್ನು ಗೆಲ್ಲಲೂ ಸತ್ತ್ವಗುಣ ಅಭಿವೃದ್ಧಿ ಮಾಡಿಕೊಳ್ಳಲೂ ಧ್ಯಾನದ ಸಿದ್ಧತೆಯು ಅವಶ್ಯಕ. ಏಕಾಗ್ರತೆಗೆ ಕೂಡಬೇಕಾದ ಜಾಗ, ಇರಬೇಕಾದ ನಿಯಮ, ದೇಹವನ್ನು ನಿಲ್ಲಿಸಬೇಕಾದ ಸ್ಥಿತಿ, ಎಲ್ಲ ಇಂದ್ರಿಯಗಳನ್ನು ಸಂಯಮಮಾಡಿ, ಚಿತ್ತನಿರೋಧಮಾಡಿ, ಮುಚ್ಚಿತ್ತಮತ್ಪರನಾಗಿ ಮಾಡಬೇಕಾದ ನಿಯಮವನ್ನೆಲ್ಲ ವಿವರಿಸಿದ್ದಾನೆ. ಏಕೆಂದರೆ, ಆತ್ಮನು ತನ್ನಲ್ಲಿ ತಾನೇ ಲೀನವಾಗಬೇಕಾದರೆ ಗಂಟುಬಿದ್ದಿರುವ ಈ ಚರ್ಮಚೀಲದಿಂದ ಹಾರಿಹೋಗುವಂತಿಲ್ಲ. ಅದರಲ್ಲಿ ಸೆರೆ. ಅದನ್ನೇ ತನ್ನ ಸಾಧನಯಂತ್ರವನ್ನಾಗಿ ಮಾಡಿಕೊಳ್ಳಲು ಪಳಗಿಸಿಕೊಳ್ಳಬೇಕಾದುದರಿಂದ ಅದಕ್ಕೆ ತಕ್ಕ ಉಪಾಯ ಮಾಡಬೇಕು.

"ಎಂಥಾ ಕುದುರೆ ನಾ ಕೊಂಡುಕೊಂಡೆ!
ನಡೆಯುವುದರಲ್ಲಿ ಅದರ ಗುಣ ಕಂಡುಕೊಂಡೆ!
ತೊಡರ್ಗಾಲ್ ಹಾಕಿಕೊಂಡು ಕೆಡವಿತಲ್ಲ!" ಇತ್ಯಾದಿ.

ಜನಪದ ಗೀತೆ ಒಂದರಲ್ಲಿ ಈ ತತ್ತ್ವಾರ್ಥವು ಸೊಗಸಾಗಿ ಬಂದಿದೆ. ನಾವು ಸವಾರಿ ಮಾಡುವ ಕುದುರೆಯ ಗುಣ ನಾವು ಅದನ್ನು ನಡೆಸುವಾಗ ಗೊತ್ತಾಗುವುದು. ಅದನ್ನು ಸರಿಯಾಗಿ ನಮ್ಮ ಉಪಯೋಗಕ್ಕೆ ತಕ್ಕಂತೆ ನಮ್ಮ ಮಾರ್ಗಕ್ಕೆ ಹೋಗುವಂತೆ ಪಳಗಿಸಿಕೊಳ್ಳಬೇಕು. ಅದಕ್ಕೆ ಕಷ್ಟಪಟ್ಟು ಅಭ್ಯಾಸ ಮಾಡಿಸಬೇಕು. ಸರಿಯಾಗಿ ತರಪೇತುಮಾಡಿದರೆ ಜೂಜಿನ ಕುದುರೆಯಾಗಿ, ಈ ಇಹಬಾಳಿನ ಜೂಜಿನಲ್ಲಿ ಗೆಲ್ಲುತ್ತೇವೆ. ಇಲ್ಲವಾಗಿ ಅದರ ಮೇಲೆ ಹತೋಟಿ ಇಲ್ಲದೆ, ಅದು ನಮ್ಮ ಮಾತು ಕೇಳದುದಾದರೆ ನಮ್ಮನ್ನು ಕೆಡವುತ್ತದೆ. ಪಳಗಿಸುವ ಮಾರ್ಗದ ಸುಲಭೋಪಾಯವಾಗಿ ಇಲ್ಲಿ ಈ ಅಭ್ಯಾಸವಿಧಿನಿಯಮವನ್ನು

ಹೇಳಿದೆ. ಇವೆಲ್ಲ ಅಭ್ಯಾಸದ ವಿಧಿಯೇ ಹೊರತು ಈ ಬಾಹ್ಯ ಆಚರಣೆಗಿಂತ ಅತಿಮುಖ್ಯವಾದ ಅಂತರವಸ್ಥೆ ಇದೆಯೆಂದು ಒತ್ತಿ ಹೇಳಲು ಕೊನೆಯದಾಗಿ "ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ" ಎಂದು "ಮನಸ್ಸಂಯಮ"ದ ಪ್ರಾಮುಖ್ಯತೆಯನ್ನು ಹೇಳಿದ್ದಾನೆ ಪರಮಾತ್ಮ. ಹೇಳಿದಂತೆಲ್ಲ ಸರಿಯಾದ ಆಸನಾಭ್ಯಾಸಮಾಡಿ ಕೂತು, ಮನಸ್ಸಂಯಮವಿಲ್ಲದಿದ್ದರೆ ಫಲವಿಲ್ಲ. ಈ ಸಾಧನಕ್ಕೆ ಅರ್ಹನನ್ನು ಮಾಡಲು ಹೇಳಿರುವ ವಿಶೇಷಣಗಳು ಎಷ್ಟು ಗಾಢವಾಗಿವೆ! 'ಏಕಾಕೀ' 'ಯತಚಿತ್ತಾತ್ಮಾ' 'ನಿರಾಶೀಃ' 'ಅಪರಿಗ್ರಹಃ' ಎಂದೆಲ್ಲ ವಿಚಾರ ಮಾಡಿದರೆ, ಈ ಧ್ಯಾನಯೋಗವು ಸಂನ್ಯಾಸಿಗಳಿಗೆ ಉಕ್ತವಾಗಿದೆ ಎಂದು ಶ್ರೀಶಂಕರರ ಮತ. ಶ್ರೀಶಂಕರರು ಸಂನ್ಯಾಸಿಗಳು, ಆಬಾಲ ಬ್ರಹ್ಮಚಾರಿಗಳು, ಆದುದರಿಂದ ಅವರ ಆಶ್ರಮವಾತ್ಸಲ್ಯದ ಮೇಲೆ ಈ ಧ್ಯಾನ ಯೋಗವನ್ನು ಸಂನ್ಯಾಸಿಗಳ ಸ್ವತ್ತುಮಾಡಿಕೊಂಡಿದ್ದಾರೆ, ಗೃಹಸ್ಥಾಶ್ರಮದವರಿಗೇಕೆ ಹಕ್ಕಿಲ್ಲ ಇದರಲ್ಲಿ? ಎಂದು ವಾದಿಸುವವರೂ ಉಂಟು. ಆ ಹಕ್ಕಿಗೆ ಕಾದುವವರು, ಈ ವಿಶೇಷಣಗಳನ್ನು ಪೂರ್ಣವಾಗಿ ಜೀರ್ಣಿಸಿಕೊಂಡು ಜೀವನದಲ್ಲಿ ತೋರಿಸಿ, ಆದಮಟ್ಟಿಗಾದರೂ ಅಭ್ಯಸಿಸುವುದಕ್ಕೆ ಪ್ರಯತ್ನಿಸಿದರೆ ಆಗಬಾರದೇಕೆ? ಪೂರ್ಣಧ್ಯಾನ, ಏಕಾಂತನ್ಸಾಮಿತ್ವವು ಸ್ವಲ್ಪ ಹೊತ್ತಾದರೂ ಸದಾ ಪರಮಾತ್ಮ ಚಿಂತನೆ ಮಾಡುತ್ತ, ಎಸಗುತ್ತಿರುವ ಕಾರ್ಯವನ್ನೆಲ್ಲ ಅವನ ಸಂಕಲ್ಪಕ್ಕೆ ಜೋಡಿಸುತ್ತ, ಇಹವ್ಯಾಪಾರವನ್ನೆಲ್ಲ ಮಹದಾತ್ಮನ ಸೇವಾಭಾವದಿಂದ, ಎಲ್ಲೆಲ್ಲಿಯೂ ಪರಮೇಶ್ವರನ ಸಂಕಲ್ಪವನ್ನೇ ನಡೆಯಿಸುತ್ತ ಮಹಾಪ್ರವಾಹದೊಳಗೈಕ್ಯವಾಗುವ ಪ್ರಯತ್ನವನ್ನಾದರೂ ಸರ್ವರೂ ಏಕೆ ಮಾಡಬಾರದು?

> ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।
> ಶಾಂತಿನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥೧೫॥

ಈ ರೀತಿಯಲ್ಲಿ ಸದಾ ಅಭ್ಯಾಸಮಾಡುವ ಯೋಗಿಯು ಪರಮ ನಿರ್ವಾಣವಾದ ಶಾಂತಿಯನ್ನು ಹೊಂದಿ ಸ್ವರೂಪಭೂತವಾದ ನನ್ನನ್ನು ಹೊಂದುವನು. ಧ್ಯಾನ ಯೋಗದ ಫಲ ಪರಮಾತ್ಮನೇ ಶಾಂತಿದಾಯಕ, ಪರಮ ನಿರ್ವಾಣ, ಶೂನ್ಯ ನಿರ್ವಾಣವಲ್ಲ. ಹಿಂದೆ ಈ ನಿರ್ವಾಣ ಶಬ್ದ ಬಂದಾಗಲೆಲ್ಲ ಬರೀ ಶೂನ್ಯನಿರ್ವಾಣ ಪದ ಒಂದೇ ಇಲ್ಲ, ಬ್ರಹ್ಮನಿರ್ವಾಣವೇ ಯಾವಾಗಲೂ ಪರಬ್ರಹ್ಮಸಂಪರ್ಕ

ದಿಂದ ನಿರ್ವಾಣವೂ ಪೂರ್ಣವಾಯಿತು. ಹೀಗೆಂದು ಹೇಳಿ ಕೇಳಿ ಯಾವು ದನ್ನೂ ಅತಿಯಾಗಿ ಮಾಡಬಾರದು, ಅತಿಯಾಗಿ ಬಿಡಬಾರದು. "ಅತಿ ಸರ್ವತ್ರ ತ್ಯಜೇತ್" ಎಂಬ ಉಪದೇಶ ಮಾಡುತ್ತಾನೆ ಸ್ವಾಮಿ.

ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥೧೬॥

ಅತಿಭೋಜನ ಮಾಡುವವನಿಗೂ, ಉಪವಾಸಮಾಡುವವನಿಗೂ, ಅತಿ ನಿದ್ರೆ ಮಾಡುವವನಿಗೂ, ಸದಾ ಜಾಗ್ರತನಾಗಿರುವವನಿಗೂ ಈ ಯೋಗವು ಸಿದ್ಧಿಸುವು ದಿಲ್ಲ. ಎಲ್ಲಾ ಯುಕ್ತವಾಗಿರಬೇಕು.

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥

ಆಹಾರವಿಹಾರಗಳಲ್ಲಿ, ಕಾರ್ಯ ಕರ್ಮ ಕಲಾಪಗಳಲ್ಲಿ, ಯುಕ್ತವಾದ ನಿದ್ರೆ ಎಚ್ಚರಗಳಲ್ಲಿ ಸಮತೂಕವಾಗಿರುವವರಿಗೆ ದುಃಖ ಪರಿಹಾರಕವಾದ ಈ ಯೋಗವು (ಧ್ಯಾನವು) ಲಭಿಸುವುದು. ಎಲ್ಲಕ್ಕಿಂತಲೂ ಮೇಲಾಗಿ ಚಿತ್ತವೃತ್ತಿ.

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥

ನಿಗ್ರಹಿಸಲ್ಪಟ್ಟ ಚಿತ್ತವು ಅಂತರಾತ್ಮನಲ್ಲಿ ಯಾವಾಗ ಸ್ಥಿರವಾಗುವುದೋ, ಸರ್ವ ಕಾಮವಿಷಯಗಳಲ್ಲೂ ಸ್ಫೂರ್ತಿ ಯಾವಾಗ ತಪ್ಪುವುದೋ ಆಗ ಯುಕ್ತನೆಂದು ಆ ಸಾಧಕನನ್ನು ಹೇಳಬಹುದು. ಇದು ಬುದ್ಧದೇವನು ಉಪದೇಶಿಸಿದ ಮಧ್ಯಮ ಮಾರ್ಗ. ಯಾವುದರಲ್ಲೂ ಅತಿಯಿಲ್ಲದೆ, ಎಲ್ಲ ಮಿತಿಯಾಗಿ ನಡಸಿಕೊಂಡು ಬರುವುದು. ಇದರಿಂದ ಶ್ರಮವಾಗಿ ಆಯಾಸ ತಲೆದೋರದಿರುವುದಕ್ಕೆ ಉಪಾಯ. "ಯುಕ್ತ"ವೆಂಬ ಪದವನ್ನು ಎಷ್ಟು ಯುಕ್ತ ರೀತಿಯಿಂದ ಹೇಳಿದ್ದಾನೆ! ಎಷ್ಟು ಸಾರಿ ಯುಕ್ತವಾಗಿ ಉಪಯೋಗಿಸಿದ್ದಾನೆ! ಎಲ್ಲದರಲ್ಲೂ ಎಣಿಕೆ ಪಥ್ಯವಿರ ಬೇಕು. ಜೀವನವು ಮಧ್ಯಗಾಮಿನಿಯಾಗಬೇಕು. ಉದ್ರೇಕ ಆಲಸ್ಯಗಳಿರ ಬಾರದು. ಇದು ಸಮಾಧಾನಸ್ಥಿತಿಗೆ ಸಾಧನವಾಗಿ ಶಾಂತಿದಾಯಕವಾಗುವುದು. ಏರಿಳಿತಗಳನ್ನು ಉತ್ಸಾಹದಲ್ಲಿ ವಿಪರೀತವನ್ನು ಮಾಡದಂತೆ ತಪ್ಪಿಸುವುದಕ್ಕೆ ಬಹಳ ನಿಗ್ರಹ ಬೇಕು. ಆಚೆ ಈಚೆ ಮಧ್ಯಮಾರ್ಗ ಬಿಟ್ಟು ಹೋಗದಿರಲು ಲಗಾಮು ಬಿಗಿ ಹಿಡಿದಿರಬೇಕು. ಸ್ಥೂಲವಿಷಯಕವಾದ ದೇಹ ಪೋಷಣೆಗೆ

ಬೇಕಾದ ಆಹಾರದ ವಿಷಯದಲ್ಲೂ ಯುಕ್ತನಾಗಿರಬೇಕು. ಸೇವನೆಯ ಕಾಲ, ಪರಿಮಿತಿ ಎಲ್ಲದರಲ್ಲೂ ಗಮನವಿರಬೇಕು. ಯುಕ್ತಾಹಾರವೆಂದರೆ ಸಾತ್ತ್ವಿಕಾಹಾರವೆಂದೂ ಅನ್ವಯವಾಗುತ್ತದೆ. "ಆಹಾರಶುದ್ಧಿಂ ಸತ್ವಶುದ್ಧಿಃ" ಎನ್ನುವಂತೆ ಆಹಾರದ ಗುಣಾವಗುಣಗಳಿಂದ ದೇಹ ಮತ್ತು ಮನಸ್ಸು ಚಿತ್ತಗಳ ಮೇಲೆ ಪರಿಣಾಮವಾಗುತ್ತದೆ. ದೇವಸಿರುವ ದೇವಾಲಯವೆಂದು "ದೇಹೋ ದೇವಾಲಯ ಪ್ರೋಕ್ತಾ" ಈ ದೇಹಕ್ಕೆ ತಕ್ಕಂತೆ ಒಳ್ಳೆಯ ರೀತಿಯಲ್ಲಿರಲು ಅಗತ್ಯವಾದ ಆಹಾರವನ್ನು ಗುಣ, ಕಾಲ, ಮಿತಿ, ಎಲ್ಲದರ ಮೇಲೂ ಗಮನವಿಟ್ಟು ಸೇವಿಸಬೇಕು. ಆ ಆಹಾರವನ್ನು ಸರಿಯಾದ ಮಾರ್ಗದಲ್ಲಿ ಸಂಪಾದಿಸಿರಬೇಕು. ಅಧರ್ಮದಿಂದ ಸಂಪಾದಿಸಿದುದಾಗಲಿ, ಅಧರ್ಮಿಯು ಸಂಪಾದಿಸಿದುದಾಗಲಿ ಆಗಿದ್ದರೆ ಪರಿಣಾಮ ಕೆಟ್ಟದಾಗುತ್ತದೆ. ಸೇವನೆ ಯುಕ್ತವಲ್ಲ. ಶ್ರೀ ರಾಮಕೃಷ್ಣರಿಗೆ ಕೆಲವರು ಮಾರ್ವಾಡಿ ವ್ಯಾಪಾರಗಾರರು ಒಂದಾವರ್ತಿ ಸಿಹಿತಿಂಡಿ ಹಣ್ಣುಗಳನ್ನು ಯಥೇಚ್ಛವಾಗಿ ಅರ್ಪಣೆಗೆ ತೆಗೆದುಕೊಂಡು ಹೋದರು. ಪರಮಹಂಸರು ದೂರದಿಂದಲೇ ಅವನ್ನು ನಿರಾಕರಿಸಿ, ತೆಗೆದುಕೊಂಡು ವಾಪಸು ಹೋಗಬೇಕೆಂದು ವಿಜ್ಞಾಪಿಸಿದರು. ಅನಂತರ ಶಿಷ್ಯವೃಂದಕ್ಕೆ, ಸ್ವೀಕರಿಸುವಾಗ ದಾತನ ನಿರ್ಮಲತ್ವ ಅರ್ಥಶುದ್ಧಿಯು ಮುಖ್ಯವೆಂದು ಉಪದೇಶಿಸಿದರು. ಎಲ್ಲ ಶೌಚಗಳಿಗಿಂತ "ಅರ್ಥಶೌಚವು" ಬಹಳ ಮುಖ್ಯವೆಂದು ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿದೆ. ಮನು ಹೇಳುತ್ತಾನೆ:

> ಸರ್ವೇಷಾಂ ಏವ ಶೌಚಾನಾಂ ಅರ್ಥಶೌಚಂ ವಿಶಿಷ್ಯತೇ ।
> ಯೋರ್ಥೇ ಶುಚಿಃ ಸಹಶುಚಿಃ ನ ಮೃದ್ವಾರಿ ಶುಚಿಃ ಶುಚಿಃ ॥

ಅನ್ನ ವಿಕ್ರಯವಾಗಲಿ, ಸೇಂದಿ ಕಂಟ್ರಾಕ್ಟಾಗಲಿ, ಜೂಜಿನಕಟ್ಟೆ, ಸ್ತ್ರೀದೇಹ ವಿಕ್ರಯ ಸಂಸ್ಥೆಗಳನ್ನಿಟ್ಟಾಗಲಿ ಶ್ರಮವಿಲ್ಲದೆ ಅಲ್ಪ ಕಾಲದಲ್ಲಿ ಹಣವನ್ನು ಸಂಪಾದಿಸಬಹುದು. ಆದರೆ "Earn thy bread with the sweat of thy brow" —ಶ್ರಮಪಟ್ಟು ತನ್ನ ಅನ್ನವನ್ನು ಸಂಪಾದಿಸಿ ಉಣುವ ಸಂತುಷ್ಟಿ, ಇತರ ಸೋಮಾರಿ ಜೀವಿ, ದುರ್ಮಾರ್ಗಿ ಸುಲಭ ಮಾರ್ಗದಲ್ಲಿ ಹಣ ಸಂಪಾದಿಸಿದವನಿಗೆ ಎಲ್ಲಿಂದ ಬಂತು? ಉಣುವುದನ್ನು ಸಂತೋಷದಿಂದ ಹಿತದಿಂದ ಉಣುವ ಮನಸ್ಸಿನ ಉತ್ಸಾಹ ತಾನೆ ಎಲ್ಲಿ ಬಂತು? ಆ ಪವಿತ್ರ ಹಸಿವು ತಾನೆ ಎಲ್ಲಿ ಉದ್ಭವವಾದೀತು? ಸಂಪಾದಿಸಿದ ಆ ಹಣ ಅಲ್ಪವೇ ಆದರೂ ಅದರ ಪವಿತ್ರತೆ

ಯಿಂದ ಜೀವನದ ಎಲ್ಲ ಅಂಗಗಳಿಗೂ ಪವಿತ್ರತೆ ಪ್ರವಹಿಸಿ ಜೀವನವನ್ನು ಸೊಬಗು ಮಾಡುತ್ತದೆ. ಜೀವನಮಾರ್ಗ, ಶರೀರನಿರ್ವಹಣೆಗೆ ರಹವನ್ನು ಸಂಪಾದಿಸುವ ರೀತಿ ಶುಚಿಯಾಗಿರಬೇಕು. ಅದರ ಪರಿಣಾಮವು ಜೀವನದ ಎಲ್ಲ ವ್ಯವಹಾರದಲ್ಲೂ ಮಿಳಿತವಾಗುತ್ತದೆ. ಹೇಗಾದರೂ ಅರ್ಥ ಸಂಪಾದಿಸಿದ ರಾಯಿತೆಂಬ ಭಾವನೆಗೆ ನಮ್ಮ ಧರ್ಮಶಾಸ್ತ್ರಗಳಲ್ಲಿ ಸಮರ್ಥನೆಯಿಲ್ಲ. "ಸಂಪಾದಿಸು, ಸಂಭಾವಿತನಾಗು, ಸತ್ಯವಂತನಾಗು—Get on, Get honour, and Get honest" ಎಂಬ ತತ್ತ್ವಕ್ಕೆ ನಮ್ಮ ಶಾಸ್ತ್ರದಲ್ಲಿ ಸಮ್ಮತಿಯಿಲ್ಲ. ನಮ್ಮ ಧರ್ಮ ಸೂಕ್ಷ್ಮದ ಪ್ರಕಾರ ಉಲ್ಟಾಪಲ್ಟಿ. "ಧರ್ಮಿಷ್ಠನಾಗಿ, ಸತ್ಯಸಂಧನಾಗಿ, ಸಂಭಾವಿತನಾಗಬೇಕು. ಅನಂತರ ಸತ್ಯಸಂಭಾವಿತಮಾರ್ಗದಲ್ಲಿ ಸಂಪಾದಿಸಬೇಕು. ಹೀಗೆ ಸಂಪಾದಿಸಿದ ಹಣ ಧರ್ಮಸಂಪತ್ತು; ಧರ್ಮದಿಂದ ಪರರ ಹಿತಕ್ಕಾಗಿ ವಿನಿಯೋಗಿಸಬೇಕಾದ ಮುಡುಪು ಅದು, ಸ್ವಾರ್ಥಸ್ವಾವಲಂಬನಾರ್ಥವಾಗಿ ಖರ್ಚುಮಾಡಲಲ್ಲ. "ಆಹ್ರಿಯತೇ ಇತಿ ಆಹಾರಃ"—ಇಂದ್ರಿಯಗಳಿಂದ ಯಾವ ಯಾವ ವಿಷಯಗಳನ್ನು ಒಳಕ್ಕೆ ತೆಗೆದುಕೊಂಡು ಅನುಭವಿಸುತ್ತೇವೆಯೋ ಅದೆಲ್ಲವೂ ಆಹಾರವಾಗಿ ಗ್ರಹಿಸಲ್ಪಟ್ಟಿದೆ. ಆದುದರಿಂದ ಪಂಚೇಂದ್ರಿಯಗಳ ಚಪಲಕ್ಕೊಳಗಾಗದೆ ಪ್ರತಿ ಇಂದ್ರಿಯಭೋಗವನ್ನೂ ಯುಕ್ತ ರೀತಿಯಲ್ಲಿ ಮಾಡಬೇಕು. ಇದರ ನಿಯಮದ ಸಹಾಯಕ್ಕಾಗಿಯೇ "ಕಣ್ಣು ಸರ್ವದಾ ನಿನ್ನ ದರ್ಶನದಲ್ಲಿರಲಿ, ನಾಲಗೆ ಯಾವಾಗಲೂ ನಿನ್ನ ಸ್ತುತಿಯಲ್ಲಿರಲಿ, ಮೂಗು ವಾಸನೆ ನೋಡುವಾಗ ನಿನ್ನ ಪ್ರಸಾದ ತುಳಸೀದಳವನ್ನೇ ಆಘ್ರಾಣ ಮಾಡಲಿ, ಕೈ ನಿನ್ನ ಪೂಜೆಯಲ್ಲಿ ನಿರತವಾಗಿರಲಿ, ಕಾಲು ಪ್ರದಕ್ಷಿಣ ನಮಸ್ಕಾರಗಳಲ್ಲಿ ಉಪಯೋಗವಾಗಿರಲಿ, ಕಿವಿ ನಿನ್ನ ಕೀರ್ತನೆಯನ್ನು ಸದಾ ಕೇಳುತ್ತಿರಲಿ" ಎಂದು ಭಕ್ತನು ವಿಷಯಭೋಗಗಳಿಗೆ ಆಸ್ಪದಕೊಡದೆ, ಪಂಚೇಂದ್ರಿಯಗಳಿಗೂ ಪರಮಾತ್ಮನ ಸೇವಾ ಆಹಾರವನ್ನು ಕೊಟ್ಟು ತಣಿಸಿ, ಯುಕ್ತವಾದ ರೀತಿಯಲ್ಲಿ ಯೋಗ್ಯವಾದ ಮಾರ್ಗದಲ್ಲಿ ಇಟ್ಟುಕೊಂಡಿರುತ್ತಾನೆ. ವಿಷಯಕಾಂಕ್ಷಿಯಾಗಿ ಹೋಗುವ ಇಂದ್ರಿಯಗಳಿಗೆ ಆಳಾಗದೆ ಆ ಯೋಗಿಯು ಅವುಗಳ ಯಜಮಾನನಾಗಿ ಬಾಳುತ್ತಾನೆ.

ವಿಹಾರವೆಂದರೆ ಇಂದ್ರಿಯಗಳ ವಿಷಯಗಳಲ್ಲಿ ವಿಹರಿಸುವುದೆಲ್ಲವೂ ಆಗಿರುತ್ತದೆ. ನಾವು ಎಂಥ ಭಾವನೆಯಿಂದ ಆಹಾರ ಸೇವಿಸುವೆವೋ ಅದಕ್ಕೆ ಅನು

ಗುಣವಾಗಿ ನಮ್ಮ ಶರೀರ, ಇಂದ್ರಿಯ,. ಮನಸ್ಸು ಮಾರ್ಪಟ್ಟು, ನಮ್ಮ ವಿಹಾರವೂ ಬಂದು ರೂಪವನ್ನು ತಾಳುತ್ತದೆ. ಯಾವ ವಿಷಯಗಳಲ್ಲಿ ವಿಹರಿಸುತ್ತೇವೆಯೋ ಅದರ ಅಭ್ಯಾಸದಿಂದ ಒಂದು ಸಂಸ್ಕಾರ ಹುಟ್ಟುತ್ತದೆ. ನಾವು ಹೊರಮುಖರಾಗಿ, ಕಾಮಕಾಮಿಗಳಾಗಿ, ವಿಷಯಗಳನ್ನು ಸಂಪಾದಿಸಿಕೊಂಡು, ನಮ್ಮನ್ನು ನಾವು ಕಾಪಾಡಿಕೊಳ್ಳುತ್ತೇವೆಂಬ ಅಭಿಮಾನದಿಂದಲೇ ನಿತ್ಯ ವಿಹಾರಗಳನ್ನೆಲ್ಲ ಮಾಡುತ್ತೇವೆ. ಈಶ್ವರಾನುಗ್ರಹದಿಂದಲೇ ನಮಗೆ ಬೇಕಾದುದೆಲ್ಲವೂ ದೊರೆಯುತ್ತಿದೆ ಎನ್ನುವುದನ್ನು ಮರೆಯುತ್ತೇವೆ. ನಾನು, ನನ್ನದು ಎನ್ನುವುದು ಬಿಡುವುದಿಲ್ಲ.

ಅದು ಹೋದರೆ, ತಾನಾಗಿ ಎಸಗುವ "ಯುಕ್ತಚೇಷ್ಟಸ್ಯ ಕರ್ಮ" ಸ್ವಾಭಾವಿಕವಾಗಿ ಎಸಗುವ ಕಾರ್ಯಕಲಾಪ ಬರುತ್ತದೆ. "ಚೇಷ್ಟೆ" ಎಂದರೆ ಬರಿಯ ದುಶ್ಚೇಷ್ಟೆಯೆಂದೇ ಅರ್ಥವಲ್ಲ.

ಇನ್ನು ನಿದ್ರೆಯ ವಿಷಯ. ವಿಶ್ರಾಂತಿಯಿಲ್ಲದಿದ್ದರೆ ದೇಹವು ಸುಧಾರಿಸಿಕೊಳ್ಳದೆ, ಕೆಲಸಮಾಡಲು ಶಕ್ತಿಯಿಲ್ಲದೆ ಬಳಲುವುದು. ಆದುದರಿಂದ ನಿದ್ರೆ ಅವಶ್ಯಕ. ಅತಿನಿದ್ರೆ ಮಾಡಿದರೆ, ಜಡತ್ವವು ತಲೆಹಾಕುವುದು. ಆದುದರಿಂದ ದೇಹಪರಿಶ್ರಮ ಪರಿಹಾರಾರ್ಥವಾಗಿ ನಿದ್ರೆಯು ಅಗತ್ಯ. ಶ್ರಮಜೀವಿಯು ಹೇಗೆ ಸುಖವಾಗಿ ನಿದ್ರಿಸಿ, ವಿಶ್ರಮಿಸಿ, ಪುನಃ ಕೆಲಸ ಮಾಡಲು ಶಕ್ತಿಹೊಂದಿ ಲವಲವಿಕೆಯಿಂದ ಏಳುತ್ತಾನೆ! ಇದು ಚಕ್ರದಂತೆ. ವಿಶ್ರಾಂತಿ ಪಡೆವುದರಿಂದ ಶ್ರಮಪಡಲು ಶಕ್ತಿ; ಶ್ರಮಪಡುವುದರಿಂದ ನಿಶ್ಚಿಂತೆಯಾಗಿ ಸುಖನಿದ್ರೆ ಮಾಡಲು ಅರ್ಹತೆ; ಹೀಗೆ ದಿನವಹಿ ಚಕ್ರವನ್ನು ಯುಕ್ತತೆಯಿಂದ ನಡೆಯಿಸಬೇಕು. ನಿದ್ರೆಯ ವಿಷಯದಲ್ಲಿ ಮನಸ್ಸಿನ ಅಂಶವೂ ಸೇರಿದೆ. ಸರಿಯಾದ ವಿಶ್ರಾಂತಿಯಿಂದ ಮನಶ್ಶಾಂತಿಯೂ ದೊರೆಯುತ್ತದೆ. ಮನಶ್ಶಾಂತಿಯಿಲ್ಲದಿದ್ದರೆ ನಿದ್ರೆಯೂ ಹತ್ತುವುದಿಲ್ಲ. ಆದುದರಿಂದ ದುರ್ವ್ಯಸನಗಳನ್ನು ಹಚ್ಚಿಕೊಂಡರೆ ನಿದ್ರೆಬಾರದು. ಯಾವ ಶಕ್ತಿಯ ಮೇಲೆ ಭಾರಹಾಕಿ ಮೃಗಗಳು ಕೂಡ ನಿಶ್ಚಿಂತೆಯಿಂದ ಮಲಗುವುವೋ ಆ ಶಕ್ತಿಯೇ ನಮ್ಮನ್ನು ಕಾಪಾಡುವುದೆಂಬ ನಿಶ್ಚಿಂತಭಾವನೆಯಿಂದ ಆ ಅಖಂಡ ಶಕ್ತಿಯ ಮಡಲಿನಲ್ಲಿ ನಿರ್ಭಯವಾಗಿ ಮಲಗಿ ನಿದ್ರಿಸಬೇಕು. ಎಷ್ಟೋ ಜನ ನಿದ್ರೆಬಾರದೆಂದೇ ದೊಡ್ಡ ಯೋಚನೆಯನ್ನು ಹಚ್ಚಿಕೊಂಡು ನಿದ್ರೆಯಿಲ್ಲದೆ ತಪಿಸುವರು. ನಿದ್ರೆ ಬಾರದೆಂಬ ಯೋಚನೆ

ಯಿಂದ ನಿದ್ರೆ ಹತ್ತದು; ನಿದ್ರೆ ಹತ್ತದುದರಿಂದ ಯೋಚನೆ. ವಿಷಮಚಕ್ರ. ಇದರಿಂದ ಮಲಗಿದಾಗ ನಿದ್ರೆ ಬಾರದಿದ್ದರೆ ಆಯಾಸವಾಗಿ, ನಿದ್ರೆಯಿಂದ ಆಕಳಿಸುತ್ತ, ನಿದ್ರಾಗಮನವಾದಾಗಲೇ ಮಲಗಿ ನಿದ್ರಿಸಲು ಹೋಗಬೇಕು; ಸುಮ್ಮನೆ ಸೋಮಾರಿತನಕ್ಕೆ ಮಲಗಿ ನಿದ್ರೆಗೆ ಪ್ರಯತ್ನಿಸಬಾರದು. ನಿದ್ರೆ ಬರಲಿಲ್ಲವೆಂಬ ಚಿಂತೆ ಬಿಟ್ಟು ಭಗವದ್ಧ್ಯಾನಮಗ್ನರಾದರೆ, ಯಾವುದಾದರೂ ಸ್ತೋತ್ರವನ್ನೋ ಭಕ್ತಿಪ್ರಕರಣವನ್ನೋ ಚಿಂತಿಸುತ್ತಿದ್ದರೆ, ನಿದ್ರೆ ತಾನಾಗಿ ಹತ್ತುವುದು. ಜಡ ಸ್ವಭಾವದಿಂದ ನಿದ್ರೆಬಾರದೆ, ಚೈತನ್ಯಪೂರಿತವಾಗಿ, ನಿಶ್ಚಿಂತೆಯಾಗಿ, ನಿಶ್ಚಲವಾಗಿ ಭಗವದ್ಧ್ಯಾನಮಾಡಲವಕಾಶ ಕೊಟ್ಟಿತ್ತಲ್ಲಾ ನಿದ್ರೆ, ತಾ ಬಾರದೇ ಎಂಬ ಭಾವ ಉತ್ಪನ್ನವಾಗಬೇಕು. ತನುಮನಗಳಿಗೆ ಆಯಾಸವಾದಾಗ ತನಗೆ ತಾನೇ ನಿದ್ರೆ ಬರುತ್ತದೆ. ಪ್ರಯತ್ನಿಸಿ ಒಲಿಸಬೇಕೆಂದರೆ ಒಲ್ಲಳು ನಿದ್ರಾಂಗನೆ. ಅರ್ಹನಾದವನನ್ನು ತಾನೇ ಅಪ್ಪಿ ಒಲಿದು ನಿದ್ರಾಪರವಶನನ್ನಾಗಿ ಆಲಿಂಗಿಸುವ ಕರುಣಾಮಯಿ ನಿದ್ರೆ.

ಈಗಿನ ನಾಗರಿಕಸುಖಲೋಲುಪ್ತಿಜೀವನದಲ್ಲಿ ನಿದ್ರಿಸಬೇಕಾದ ಕಾಲವಾದ ರಾತ್ರಿಯಲ್ಲಿ, ಸ್ವೇಚ್ಛಾವಿಹಾರಕ್ಕಾಗಿ ವಿನೋದಗಳನ್ನು ಹುಡುಕಿಕೊಂಡು ರಾತ್ರಿಯೆಲ್ಲಾ ಚಿತ್ರನೋಟ. ನಾಟ್ಯ, ಜೂಜಾಟಗಳಲ್ಲಿ, ರಂಗಸ್ಥಳ, ಕ್ಲಬ್‌ಗಳಲ್ಲಿ ಕಾಲಹಾಕುವ ನವಯುವಕಯುವತಿಯರಿಗೆ ಯುಕ್ತಾಹಾರವಿಹಾರಗಳಿರಲಿ, "ಯುಕ್ತಸ್ವಪ್ನಾವಬೋಧ"ವೆಲ್ಲಿಯದು? ಪಾಶ್ಚಾತ್ಯರನ್ನು ಅಣಕಿಸುವುದನ್ನು ಕಲಿತು, ಅವರ ದುರ್ಗುಣಗಳನ್ನೇ ಹೆಚ್ಚಾಗಿ ಅಭ್ಯಾಸಮಾಡಿ, ಕುಡಿತ, ಕಡಿತ, ನಾಟ್ಯ, ನೋಟಗಳಲ್ಲಿ ಕಾಲಹಾಕುವುದೇ ಯೌವನದ, ಜೀವನದ ಧ್ಯೇಯವೆಂದು ಅರಿತ ಸ್ವೇಚ್ಛಾಚಾರಿಗಳಿಗೆ ಮುಖ್ಯವಾಗಿ ಹೇಳಿರುವುದು ಈ ಯುಕ್ತಾಹಾರವಿಹಾರ, ಚೇಷ್ಟೆನಿದ್ರೆ. ಇದು ಈ ಕಾಲಕ್ಕೆ ಅಗತ್ಯವಾಗಿದೆ. ಎಲ್ಲದರಲ್ಲೂ ಎಲ್ಲೆ ಮೀರಿದ, ಮಿತಿ ಇಲ್ಲದ, ಅತಿಕಾಲದ ವಿಪರೀತದ ನವನಾಗರಿಕ ಜೀವಿಗಳ ಭ್ರಾಂತಿವಿಲಾಸ ತಪ್ಪಿಸುವುದಕ್ಕೆ ಈ ಯುಕ್ತತೆ ಮುಖ್ಯ. ನಮ್ಮ ಅಮೂಲ್ಯ ಶಕ್ತಿಯನ್ನು ಕ್ಷುದ್ರವಸ್ತುಚಿಂತನೆ, ಕ್ಷುದ್ರವಿನೋದಬೇಟೆಗಳಲ್ಲಿ, ಮುಖ್ಯವಾದ ಜೀವನಶಕ್ತಿಭಾಗವನ್ನು ಹೇಗೆ ಹಾಳುಮಾಡುತ್ತಿದ್ದೇವೆಂದು ಯಾರಾದರೂ ಯೋಚನೆಮಾಡಿದ್ದೇವೆಯೆ? ಆತ್ಮ ದೇಹ ವಿಜ್ಞಾನ ಜ್ಞಾನ ಶಕ್ತಿಗಳನ್ನು ಮಾನವನು ಯಾವುದಕ್ಕೆ ಉಪಯೋಗಿಸಿದರೂ ವಿನಿಯೋಗವಾಗಿ

ಬಿಡುತ್ತದೆ. ಕ್ಷುದ್ರವಸ್ತು ಅಭಿಲಾಷೆಗಳಲ್ಲಿ ಈ ಪವಿತ್ರ ಮಾನವಶಕ್ತಿಯನ್ನು ವ್ಯಯಮಾಡಿಬಿಟ್ಟರೆ, ಲೋಕದ ಕ್ಷುಲ್ಲಕವಿಷಯಗಳಲ್ಲಿ ಹರಿಸಿ ತೇಲಿಬಿಟ್ಟರೆ, ಅದನ್ನು ನಿಲ್ಲಿಸಿ ಏಕಾಗ್ರತೆಯಿಂದ ಆತ್ಮೋದ್ಧಾರವನ್ನು ಸಾಧಿಸಲೆಂತು? ಯಾವಾಗ? "ದುಃಖಹಾ"— ದುಃಖವನ್ನು ಹೋಗಲಾಡಿಸಬಲ್ಲ ಸ್ಥಿತಿ ಪಡೆವುದೆಂತು? ಮುಖ್ಯ ನಾವು ನಮ್ಮಲ್ಲೇ, ನಮ್ಮ ಆತ್ಮನಲ್ಲೇ ರಮಿಸಲಾರೆವಾದುದರಿಂದ ಈ ಅಲ್ಪವಿಷಯಸುಖಗಳ ಬೇಟೆಗಾಗಿ ನಮ್ಮ ಶಕ್ತಿಯನ್ನು ಹಾಳುಮಾಡುತ್ತೇವೆ. ಆತ್ಮರತಿಯಾದವನಿಗೆ ಈ ಹೊರಗಿನ ವಸ್ತುಸುಖಗಳ ಮೇಲೆ ಲೇಶವೂ ಆಸೆಯಿರುವುದಿಲ್ಲ. ನಮ್ಮ ಯೌವನ, ಉತ್ಸಾಹ, ಶಕ್ತಿಗಳನ್ನು ಸತ್ಕಾಲಕ್ಷೇಪಗಳಲ್ಲಿ ಇರಿಸಿ, ವೃಥಾ ವ್ಯಯಮಾಡದಿದ್ದರೆ, ವಯಸ್ಸಾದ ಹಾಗೆಲ್ಲ ಮನಸ್ಸು ಗಟ್ಟಿಯಾದೀತು. ಕಸುಕಾಯಿ ಪಕ್ವವಾಗಿ, ಕಳಿತು, ಹೊರಗೆ ಕೊಳೆತಷ್ಟೂ ಒಳಗಿನ ಬೀಜ ಬಲಿತು ಗಟ್ಟಿಯಾಗಿ ಉಳಿದೀತು. ಹೊರಗಿನ ಕಾಯಿಯು ಫಲದ ಸಾರಸರ್ವಸ್ವವಲ್ಲ. ಒಳಗಿನ ಬೀಜವೇ ಮುಖ್ಯ. ಅದರ ಪೋಷಣೆಗಾಗಿ, ಅದರ ಮುಂದಿನ ಮೊಳಕೆಯಾಗುವ ವ್ಯವಸ್ಥೆಗಾಗಿಯೇ ಫಲದ ತಿರುಳಿನ ಮಾಧುರ್ಯ, ಚೆಲುವು ಬಣ್ಣ. ಇವೆಲ್ಲ ನಶಿಸಿ ಬೀಜದ ಪುನರುತ್ಪತ್ತಿ ಜೀವರಚನೆಗಾಗಿ ಅದನ್ನು ಪೋಷಿಸಿ ಉದ್ಧರಿಸುತ್ತವೆ. ಅಂತೆಯೇ ವಯೋವೃದ್ಧರಾದಂತೆಲ್ಲ, ಶರೀರ ಸಡಿಲಬಿದ್ದಂತೆಲ್ಲ, ಒಳಗಿನ ಆತ್ಮತತ್ತ್ವದ ಬೀಜವು ದೃಢವಾಗಬೇಕು, ಬಲಶಾಲಿಯಾಗಬೇಕು. ಈ ಫಲದೃಷ್ಟಿಯಿಂದಲೇ ಏಕಾಗ್ರತೆಯಿಂದ ಸರ್ವಸಾಧನ ಮಾಡಬೇಕು. ಪರಮಾತ್ಮ ಈ ಅಧ್ಯಾಯದಲ್ಲಿ ಹೇಳಿರುವ ಅಭ್ಯಾಸವೆಲ್ಲ ಆ ಸಿದ್ಧಿಗಾಗಿಯೇ, ಸಿದ್ಧತೆಯೆಲ್ಲಾ ಆ ಕೈವಲ್ಯಕ್ಕಾಗಿಯೇ. ಎಲ್ಲರೂ ದೇವರ ಮಕ್ಕಳು, ಆದರೂ ಅಂತರವೇಕೆ? ನರರಲ್ಲಿ ಒಬ್ಬ ಈ ಧ್ಯಾನಸಾಧನೆಯಿಂದ ಯೋಗಿಯಾಗಿ ನಾರಾಯಣನಾಗುತ್ತಾನೆ; ಮತ್ತೊಬ್ಬ ತನ್ನ ಪರಮಾತ್ಮಶಕ್ತಿಯನ್ನೆಲ್ಲ ವೃಥಾ ವ್ಯಯಮಾಡಿ ನರವಾನರನಾಗುತ್ತಾನೆ. ನರನಾರಾಯಣನಾಗುವುದೂ, ನರವಾನರನಾಗುವುದೂ ಅವನ ಕೈಯಲ್ಲಿಯೇ ಇದೆ. ಎಲ್ಲದರಲ್ಲೂ, ಎಲ್ಲೆಲ್ಲಿಯೂ, ಯಾವಾಗಲೂ, ಎಣಿಕೆ, ಅಳತೆ ಅಗತ್ಯ. ಪ್ರತಿಕ್ಷಣವೂ, ಪ್ರತಿ ಇಂದ್ರಿಯದ ಮೇಲೂ ಕಾವಲು, ರಕ್ಷೆ, ಸೂಕ್ಷ್ಮಪರೀಕ್ಷೆ, ಸತತವಾಗಿ ನಡೆಯಬೇಕು.

ಈ ಧ್ಯಾನಯೋಗದ ಅಧ್ಯಾಯದ ಮುಖ್ಯವಿಷಯಗಳನ್ನು ಈ ರೀತಿ ವಿಂಗಡಿಸಬಹುದು:

೧. ಚಿತ್ತದ ಏಕಾಗ್ರತೆ.

೨. ಆ ಏಕಾಗ್ರತೆಗೆ ಉಪಯುಕ್ತವಾಗಿ ಬಾಳಿನ ಎಲ್ಲ ವಿಷಯಗಳಲ್ಲಿಯೂ ಪರಿಮಿತಿ.

೩. ಸಮದೃಷ್ಟಿ—ಸಾಮ್ಯದೆಸೆ, ಒಂದೇ ದೃಷ್ಟಿ.

೪. ಅಭ್ಯಾಸ—ಆಜೀವಪರ್ಯಂತ ಸ್ಥಿಮಿತವಿಲ್ಲದ, ಚಂಚಲದ ಯೌವನದಲ್ಲಿ ಹೆಚ್ಚು ಹಿಡಿತ.

೫. ವೈರಾಗ್ಯ—ಈ ಕೃತ್ರಿಮವಾದ ಬಾಳಿನಲ್ಲಿ ಸ್ವಾಭಾವಿಕತೆ ಸತ್ತುಹೋಗಿದೆ; ವೈರಾಗ್ಯವಿಧ್ವಂಸಕ, ಮಾಧುರ್ಯಸಾಗರ ಆತ್ಮ ತನ್ನಲ್ಲಿ ಅಂತರ್ಗತವಾಗಿದೆ ಎಂಬ ಭಾವನೆಯಿಂದ, ಈ ತುಚ್ಛ ಹೊರಗಣ ಅಲ್ಪ ಸುಖಭೋಗದಲ್ಲಿ ತಾತ್ಸಾರಭಾವ ಹೊಂದುವುದು.

ಈ ಐದು ಅಂಗಗಳನ್ನೂ ಪೂರ್ಣಗೊಳಿಸಿದರೆ, 'ನನಗೆ ನಾನೊಬ್ಬನೇ ರಕ್ಷಕ, ಇನ್ನು ಉಳಿದವರೆಲ್ಲ ನನ್ನ ಭಕ್ಷಕರು' ಎಂಬ ಭಾವನೆಯುಳಿದು, ಚಿತ್ತಶಾಂತಿಯಾದೀತು. ಗುಬ್ಬಚ್ಚಿ ತನ್ನ ಹತ್ತಿರ ಬಂದವರೆಲ್ಲರೂ ತನ್ನ ತಲೆಯ ಮೇಲೆ ಕಲ್ಲೆಸೆಯುತ್ತಾರೆಂದು ಭಯಪಡುವಂತಹ ಭೀತಿ ಅಳಿದೀತು.

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥೧೯॥

ಸೊಗಸಾದ ಉಪಮಾನ ಕೊಟ್ಟ ಸ್ವಾಮಿ. ಈ ಧ್ಯಾನಸಾಧನೆಯಿಂದ ಶುದ್ಧ ಮಾಡಲ್ಪಟ್ಟ ಅಂತಃಕರಣವುಳ್ಳ ಯೋಗಿಯ ಚಿತ್ತವು ವಾಯುವಿನ ಚಲನವಿಲ್ಲದಿರುವ ಪ್ರದೇಶದಲ್ಲಿರುವ ದೀಪಶಿಖೆಯಂತೆ ನಿಶ್ಚಲವಾಗಿ ಒಂದೇ ರೇಖೆಯಲ್ಲಿರುವುದು—ಎಂದು ಯೋಗತತ್ತ್ವವನ್ನು ಅರಿತವರಿಂದ ಹೇಳಲ್ಪಟ್ಟಿದೆ.

"ನಿವಾತಸ್ಥೋ" ಎಂದರೆ ವಾಯುರಹಿತವಾದ ಪ್ರದೇಶವಲ್ಲ. ವಾಯುವಿಲ್ಲದೆ ದೀಪವೇ ಜೀವಿಸಲಾರದು. ವಾಯುವಿರಬೇಕು, ವಾಯುಚಲನೆಯಿರಬಾರದು. ವಾಯುವು ದೀಪವನ್ನು ಪೋಷಿಸಲು ಅಗತ್ಯವಿರಲೇಬೇಕು. ಚಲನೆಯಿಂದ ಅದನ್ನು ಆಡಿಸಬಾರದು, ನಶಿಸುವಂತೆ ಮಾಡಬಾರದು.

ಹೀಗೆಯೇ ಮನೋಲಯವೆಂಬುದೂ ಚಿತ್ತಲಯವೆನ್ನುವುದೂ ಮನಸ್ಸೇ ಚಿತ್ತವೇ ಇಲ್ಲದಂತೆ ನಶಿಸಿಹೋಗುವುದಲ್ಲ; ಮನೋವ್ಯಾಪಾರ, ಚಿತ್ತಚಾಂಚಲ್ಯ ಹರಿದಾಡದಂತೆ ನಿಗ್ರಹದಲ್ಲಿರುವಿಕೆ. ಇದ್ದರೂ ಗಪ್ ಚುಪ್ ಎನ್ನದೆ ಗಮ್ಮ

ನಿರುವುದು. ಆಗ ದೀಪವಾರಿದ ನಿಶ್ಚಲತೆಯಲ್ಲ, ಶ್ಮಶಾನ ಗಾಂಭೀರ್ಯವಲ್ಲ. ದೀಪ ಉರಿಯುವಾಗ, ಮನಸ್ಸು ಜೀವಿತವಾಗಿರುವಾಗಿನ ನಿಶ್ಚಲತೆ, ಆ ಏಕ ಧಾರೆಯ ಪರಮಾತ್ಮನ ಕಡೆ ಊರ್ಧ್ವಶಿಖಿಯಾಗಿ ಪ್ರಜ್ವಲಿಸಲು ಮನಸ್ಸಿನ ಕೊನೆಯೂ ದೀಪಶಿಖೆಯಂತೆ ಚೂಪಾಗಿ ಅಂಧಕಾರವನ್ನು ಭೇದಿಸಿ ಹೋಗಲು ಉಪಯುಕ್ತವಾಗುತ್ತದೆ.

ನಿವಾತಸ್ಥಿತ ದೀಪಶಿಖೆಯೊಂದು, "ತೈಲಧಾರೆಯಂತೆ ಇಡು ಮನಸ್ಸು ಶ್ರೀ ಹರಿಯಲ್ಲಿ" ಎನ್ನುವ ತೈಲ ಅಥವಾ ಶಿಲೆಯಿಂದ ಬೀಳುವ ನೀರಿನಂತೆ ಒಂದೇ ರೇಖೆಯದೊಂದು—ಎರಡು ಉಪಮಾನಗಳು, ವಾಯು ಚಲನವಿಲ್ಲದ ಜಾಗ ದಲ್ಲಿ ಹೇಗೆ ಏಕಧಾರೆಯಾಗಿರುವುದೋ ಅಂತೇ, ಇತರ ವಾತಾವರಣಗಳ ಚಲನೆಗೆ ಸಿಲುಕದ ಯೋಗಿಯ ಚಿತ್ತವೂ ಏಕಧಾರೆಯಲ್ಲಿ ಏಕಾಗ್ರವಾಗಿರುವುದು ಎಂದು ತೋರುವುದು. ಚಿತ್ತದ ಅಲುಗಾಟವನ್ನು ದೀಪದ ಗಾಳಿ ಹೊಡೆತದ ಅಲುಗಾಟಕ್ಕೆ ಹೋಲಿಸಿದೆ. ಗಾಳಿಯಲ್ಲಿ ಚಲಿಸುವ ದೀಪವು ಆರಿಹೋಗಲು ಎಂತು ಅವಕಾಶವೋ, ವಿಷಯಗಳಿಂದ ಅಲ್ಲಾಡಿಸಲ್ಪಡುತ್ತಿರುವ ಚಿತ್ತವೂ ಅಂತೇ ಭ್ರಾಂತಿಹೊಂದಲು ಅವಕಾಶವಾಗುತ್ತೆ.

ಚಿತ್ತಚಾಂಚಲ್ಯಕ್ಕೆ "ವಿಕ್ಷೇಪ"ವೆಂದು ಹೆಸರು. ಧ್ಯಾನಯೋಗಿಗೆ, ಆತ್ಮ ಚಿಂತನೆ ಬಿಟ್ಟು, ವಿಷಯಚಿಂತನೆ ಮಾಡುವುದೇ ಚಿತ್ತಚಾಂಚಲ್ಯಕ್ಕೆ ಕಾರಣ. ಆದುದರಿಂದ ವಿಷಯವೆಂದರೆ ವಿಷವೆಂದು ಭಾವಿಸಬೇಕು. ಮುಂಡಕೋಪನಿ ಷತ್ತಿನಲ್ಲಿ ಈ ಧ್ಯಾನಯೋಗದ ಏಕಾಗ್ರತೆಗೆ ಬಿಲ್ಲುಬಾಣದ ರೂಪಕ ಕೊಟ್ಟು "ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ" ಎಂದು ಬ್ರಹ್ಮ ವನ್ನೇ ಗುರಿಮಾಡಿಕೊಂಡು ಉಪಾಸಕನು ಬ್ರಹ್ಮಮಯನಾಗಿಬಿಡಬೇಕೆಂದು ಹೇಳಿದೆ.

ಯೋಗವಾಸಿಷ್ಠದಲ್ಲಿ "ಏವಂ ನ್ಯಾಸಾತ್ಮನೋ ದೇಹಂ ವಿರಾಡಸ್ಮೀತಿ ಚಿಂತ ಯೇತ್"—ಯೋಗನ್ಯಾಸಮಾಡಿ ತನ್ನ ದೇಹವನ್ನು ವಿರಾಡಾತ್ಮನಾಗಿರುವನು ಎಂದು ಚಿಂತಿಸಬೇಕು, ಎಂದು ಹೇಳಿದೆ. ಈ ಏಕಾಗ್ರತೆಯಲ್ಲಿ, ಈ ಚಿಂತನೆ ಯಲ್ಲಿ ಸಮತ್ವದೃಷ್ಟಿ, ಸರ್ವಏಕತ್ವ, ಅದ್ವೈತಾನುಭವ, ಎಲ್ಲವೂ ವಿರಾಡ್ ರೂಪವೇ, ಅದರಲ್ಲಿ ನಾನು ಸೇರಿ ಒಂದಾಗಿದ್ದೇನೆಂಬ ಚಿಂತನೆಯಿಂದ ಬರುತ್ತೆ. ಈ ಧ್ಯಾನಯೋಗವು ಎಲ್ಲರಿಗೂ ಸುಲಭಸಾಧ್ಯವಲ್ಲವಾದರೂ, ಬರಿಯ ಸಂನ್ಯಾಸಿ

ಗಳಿಗೇ ಹೇಳಿದೆಯೆಂದು ಶ್ರೀ ಶಂಕರರ ಅಭಿಪ್ರಾಯವಾದರೂ, ಇದರ ಉಪ ದೇಶವು ಎಲ್ಲರಿಗೂ ಬೇಕಾಗಿದೆ. ವಿಷಯಗಳಿಂದ ಎಲ್ಲರ ಮನಸ್ಸನ್ನೂ ಹಿಮ್ಮೆಟ್ಟಿಸಬೇಕು. ಅವಶ್ಯವಾಗಿ ಮಾಡುವ ಕರ್ಮಗಳನ್ನು ಪರಮೇಶ್ವರನ ಪ್ರೀತ್ಯರ್ಥವೆಂದು ಭಾವಿಸಬೇಕು. ಅನುಭವಿಸುತ್ತಿರುವ ಕಷ್ಟಸುಖಗಳನ್ನೆಲ್ಲ ರಾಗದ್ವೇಷಗಳಿಲ್ಲದೆ ಈಶ್ವರಪ್ರಸಾದವೆಂದು ದೀನತೆಯಿಂದ ಅನುಭವಿಸಬೇಕು. ಇದಕ್ಕೋಸ್ಕರವೇನೋ ಭಗವಂತನು ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲೆಂದೂ, ಸುಲಭವೆಂದೂ, ಸಾಮಾನ್ಯರಿಗೆ ಉಪದೇಶಿಸಿದುದು.

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥
ಸುಖಮಾತ್ಯಂತಿಕಂ ಯುತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥
ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥
ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗನಿರ್ವಿಣ್ಣಚೇತಸಾ ॥೨೩॥

ಈ ಧ್ಯಾನಯೋಗದ ಫಲವಾಗಿ "ದುಃಖಸಂಯೋಗವಿಯೋಗ"—ಸರ್ವದುಃಖ ನಾಶವನ್ನು ಹೇಳುತ್ತಾನೆ. ಎಲ್ಲಿ ಈ ಧ್ಯಾನಯೋಗಬಲದಿಂದ ನಿರುದ್ಧವಾದ ಚಿತ್ತವು ಉಪರಾಮವನ್ನು (ಶಾಂತಿ) ಹೊಂದುತ್ತದೆಯೋ, ಎಲ್ಲಿ ಆತ್ಮನಿಂದ ಆತ್ಮನನ್ನು ತಿಳಿದು ಆತ್ಮನಲ್ಲೇ ಸಂತುಷ್ಟನಾಗುತ್ತಾನೆಯೋ, ಎಲ್ಲಿ ಬುದ್ಧಿ ಗ್ರಾಹ್ಯವೂ ಇಂದ್ರಿಯಾತೀತವೂ ಆದ ಆತ್ಯಂತಿಕ ಅಧಿಕ ಸುಖವನ್ನು ಪಡೆ ಯುವನೋ, ಎಲ್ಲಿ ನಿಂತಿರುವ ಬುದ್ಧಿಯು ಯಥಾರ್ಥವಸ್ತುವನ್ನು ಬಿಟ್ಟು ಚಪಲದಿಂದ ಚಲಿಸುವುದಿಲ್ಲವೋ, ಯಾವುದನ್ನು ಹೊಂದಿ, ಇನ್ನು ಇದಕ್ಕಿಂತ ಅಧಿಕ ಲಾಭವು ಇನ್ನಾವುದೂ ಇಲ್ಲವೆಂದು ಭಾವಿಸುವನೋ, ಯಾವ ಸ್ಥಿತಿಯಲ್ಲಿ ಅತಿ ಕಠಿಣವಾದ ದುಃಖವು ಕೂಡ ಆತನನ್ನು ಅಲ್ಲಾಡಿಸಲಾರವೋ, ಅದನ್ನೇ ಸರ್ವ ಸಂಕಟಪರಿಹಾರಯೋಗವೆಂದು ತಿಳಿದು (ಸಂಜ್ಞಿತಂ) ನಿಶ್ಚಯವಾಗಿ, ಉತ್ಸಾಹಚಿತ್ತದಿಂದ ಅವಶ್ಯವಾಗಿ ಅಭ್ಯಸಿಸಲು ಯೋಗ್ಯವಾಗಿರುವುದು.

"Happy Land"—ಸುಖದೇಶವೆಂಬ ಇಂಗ್ಲೀಷ್ ಗೀತೆಯೊಂದನ್ನು ಹುಡುಗರಾಗಿದ್ದಾಗ ಓದುತ್ತಿದ್ದೆವು. "Not there, not there, my child"

'ಅಲ್ಲಿ ಇಲ್ಲ, ಅಲ್ಲಲ್ಲ' ಎಂದು "ನೇತಿ ನೇತಿ" ಎನ್ನುವ ಧ್ಯೇಯವನ್ನು, ಗುರಿಯನ್ನು ಪರಮಾತ್ಮಸ್ಥಾನವನ್ನು ಹೇಳುವಾಗ ಎಲ್ಲವನ್ನೂ "ಅದಲ್ಲ, ಇದಲ್ಲ" ಎಂದೇ ವಿವರಿಸಿರುವರು. ಅಮೃತವನ್ನು ಕೂಡ, ಬಹಳ ಮಧುರವಾದದ್ದು, ಇಂತಹುದು ಅಂತಹದು ಎಂದು ವಿವರಿಸಲಾರದೆ "ನೇತಿ"ಯನ್ನೇ ಅನುಸರಿಸಿ, "ಮೃತವಲ್ಲದ್ದು" ಎಂದು ನಿಷೇಧವಾಕ್ಯದಿಂದಲೇ ನಾಮಾಂಕಿತಮಾಡಿದ್ದಾರೆ. ವಾಕ್ಕಿಗೆ ನಿಲುಕದ ವಸ್ತುವಿವರಣೆಯೆಲ್ಲ ಇಷ್ಟೆ. ಆದುದರಿಂದ ಇಲ್ಲಿ ದುಃಖವಿಯೋಗವನ್ನೇ ಸುಖವೆಂದಿದ್ದಾರೆ. ಹಾಗೆಯೇ ಆ ಪರಮಶಾಂತಿಸ್ಥಾನವನ್ನು, ಎಲ್ಲಿ ದುಃಖವಿಲ್ಲವೋ ಅದನ್ನೆ ದುಃಖಸಂಯೋಗವಿಯೋಗವೆಂದು ವಿವರಿಸಿದ್ದಾನೆ ಪರಮಾತ್ಮ. ಇದು ವರ್ಣನಾತೀತವು, ಅನುಭವಯೋಗ್ಯವು. ಸ್ವತಃ ಅನುಭವಿಸಿ ತಿಳಿಯಬಹುದೇ ವಿನಾ ಇತರರು ವಿವರಿಸಿ ತಿಳಿಸುವಂತಿಲ್ಲ, ತಿಳಿವಂತಿಲ್ಲ, ವಿವರಿಸುವಂತಿಲ್ಲ. "ನೇತಿ ನೇತಿ" ಎಂದರೆ ನಮ್ಮ ಬಾಹ್ಯ ಪಂಚೇಂದ್ರಿಯಗಳಿಂದ ಗ್ರಾಹ್ಯವಾದುದಲ್ಲವೆಂದು ಗ್ರಹಿಸಬೇಕು. ನಮ್ಮ ಈ ಹೊರನೋಟಕ್ಕೆ, ಪ್ರಪಂಚದ ಅನುಭವಕ್ಕೆ, ಇಂದ್ರಿಯವ್ಯಾಪಾರಗಳಿಗೆ ಸಿಗಲಾರದವು ಎಷ್ಟೋ ಇವೆ. "There are more things in heaven and earth, Horatio, than are dreamt of in your Philosophies" ಎಂದು ಷೇಕ್ಸ್‌ಪಿಯರ್ ಕವಿ ಹೇಳಿರುವಂತೆ ನಮ್ಮ ಇಹಾನುಭವದಲ್ಲಿ ಜಾಗ್ರತಾವಸ್ಥೆಗೇ ಅಲ್ಲ, ಸ್ವಪ್ನಾವಸ್ಥೆಗೆ ಕೂಡ ನಿಲುಕದ ವಿಷಯಗಳಿವೆ. ಇವೆಲ್ಲ ಅಂತಶ್ಚಕ್ಷುವಿನಿಂದ, ಚಿತ್ತದಿಂದ ಸಂಪರ್ಕಹೊಂದಿ ತಿಳಿಯಬೇಕು. ತಿಳಿಯಬಲ್ಲವರಿದ್ದಾರೆ, ತಿಳಿದು ಆನಂದಿಸಿದವರಿದ್ದಾರೆ. ಆಗ ಸುಖವೂ ದುಃಖವೂ ಅಲ್ಲಾಡಿಸಲಾರವು, ಆದರೆ ತಿಳಿದವರು ವಿವರಿಸಲಾರರು. ಅನುಭವಿಸಿದರೇ ಹೊರತು, ವಿವರಣಸಿದ್ಧವಲ್ಲ. ಎಲ್ಲರೂ ತಾವು ತಾವೇ ತಿಳಿದು, ಅನುಭವಿಸಿ, ಆನಂದಿಸಬೇಕಾದ ವಿಷಯವಿದು. ಆ ಅನುಭವದ ಚರಮಸೀಮೆಯ ಎಲ್ಲೆಯಲ್ಲಿ ವಿಹರಿಸುವವನ ಸ್ಥಿತಿ "ಓಂ"ಧ್ಯಾನಪರವಶನಾದವನನ್ನು ವಿವರಿಸುತ್ತಾ ಕಠೋಪನಿಷತ್ತಿನಲ್ಲಿ "ಸರ್ವೇವೇದಾಯತ್ಪದಮಾಮನಂತೀ, ತಪಾಂಗ್ಂಸಿ ಸರ್ವಾಣಿ ಚ ಯದ್ವದಂತಿ ಯದಿಚ್ಛಂತೊ, ಬ್ರಹ್ಮಚರ್ಯಂ ಚರಂತಿ, ತತ್ತೇಪದದ್ಂ ಸಂಗ್ರಹೇಣ ಬ್ರವೀಮ್ಯೋಮಿತ್ಯೆತತ್" ಎಂದು ಹೇಳಿದೆ. "ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ" ಎನ್ನುವುದನ್ನು ಗಮನಿಸಬೇಕು.

ಆ ಪರಬ್ರಹ್ಮವಸ್ತುವನ್ನು ಪಡೆದ ಮೇಲೆ ಇನ್ನು ಹೆಚ್ಚಿನದೇನಿದೆ? "ರಸೋ ವೈ ಸಃ ಯಂ ಲಬ್ಧ್ವಾ ಆನಂದೀಭವತಿ, ತೃಪ್ತೋ ಭವತಿ, ಅಮೃತೋ ಭವತಿ" ಎಂದು ಉಪನಿಷತ್ತಿನಲ್ಲಿ ಹೇಳಿದೆ. ಆನಂದವೂ ತೃಪ್ತಿಯೂ ಅಮೃತತ್ವವೂ ಸಿಕ್ಕಿದ ಮೇಲೆ, ಇನ್ನು ಹೆಚ್ಚಿನದನ್ನು ಯಾವನು ಅಪೇಕ್ಷಿಸಿಯಾನು? ಇಹದಲ್ಲಿನ ವಿಷಯಸುಖವನ್ನೆಲ್ಲ ಇದಕ್ಕೆ ಹೋಲಿಸಿದರೆ ಕನಸಿಲ್ಲದೆ ನಿದ್ರಿಸಿದ ಸುಖದಂತೆ ಭಾವಿಸುತ್ತಾನೆ. ಆ ಅನುಭವವನ್ನು ವಿವರಿಸೆಂದರೆ "ಏನೂ ತಿಳಿಯದೆ ಸುಖವಾಗಿ ನಿದ್ರೆಹೋದೆ" ಎಂದಾನು. ಏನೂ ಬಾಧೆ ಇಲ್ಲದುದೇ ಸುಖಾವಸ್ಥೆ. ಅದನ್ನು ಇನ್ನೂ ಒತ್ತಿ ಕೇಳಿದರೆ "ವಿವರಿಸಲಾಗುವುದಿಲ್ಲ. ನೀನೂ ಅನುಭವಿಸಿಯೇ ತಿಳಿ" ಎಂದಾನು.

ಈ ೨೦, ೨೧ರ ಪೂರ್ವಾರ್ಧ ಮತ್ತು ೨೨ನೇ ಶ್ಲೋಕಗಳು, ಅಕ್ಷರಶಃ ಯೋಗಶಿಖೋಪನಿಷತ್ತಿನಲ್ಲಿ ಬಂದಿದೆ. ೨೧ರ ಉತ್ತರಾರ್ಧ "ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ವತಃ" ಎನ್ನುವುದಕ್ಕೆ ಬದಲು "ಏತತ್ಕ್ಷರಾಕ್ಷರಾತೀತ ಮನಕ್ಷರಮಿತಿರ್ಯತೇ" ಎಂದಿದೆ. ಈ ಉಪನಿಷತ್ ಹಿರಣ್ಯಗರ್ಭ (ಪದ್ಮಸಂಭವ) "ಸರ್ವಸಿದ್ಧಿಕರಂಮಾರ್ಗಂ"ಗೆ ಶಂಕರನು ಹೇಳಿದ ಉಪದೇಶದಲ್ಲಿ ಅಂತರ್ಗತವಾದ ಮುಖ್ಯ ತಾತ್ಪರ್ಯದ ಈ ಶ್ಲೋಕಗಳನ್ನು ಇಲ್ಲಿ ಶ್ರೀಕೃಷ್ಣ ಪರಮಾತ್ಮನು ಯೋಗದ ಫಲದ ವಿಷಯವಾಗಿ ಇಲ್ಲಿ ತಿಳಿಸಿದ್ದಾನೆ.

ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।<br>
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥೨೪॥

ಶನೈಃಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।<br>
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೨೫॥

ಆ ಸ್ಥಿತಿಯನ್ನು ಎಚ್ಚರದಲ್ಲಿಯೇ ಅನುಭವಿಸಬೇಕಾದರೆ ಈ ಧ್ಯಾನಸಮಾಧಿಯಲ್ಲೇ, ಅದರ ಪೂರ್ಣತೆಗಾಗಿ ಸಂಕಲ್ಪದಿಂದ ಹುಟ್ಟಿದ ಸರ್ವಕಾಮನೆಗಳನ್ನೂ ತ್ಯಜಿಸಿ, ವಿಷಯಗಳಲ್ಲಿ ಪ್ರವರ್ತಿಸುವ ಇಂದ್ರಿಯಗಳನ್ನು ಮನಸ್ಸಿನಿಂದ ನಿರೋಧಿಸಿ, ಧಾರಣಾಯುಕ್ತವಾದ ಬುದ್ಧಿಯಿಂದ ಮನಸ್ಸನ್ನು ಸಾವಧಾನವಾಗಿ ಆತ್ಮೋನ್ಮುಖವಾಗಿ ಮಾಡಿ, ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿದನಂತರ ಮತ್ತಾವುದನ್ನೂ ಚಿಂತಿಸಬಾರದು. ಇದೇ ಸಮಾಧಿ.

ಪ್ರಾಣಾಯಾಮವಾದ ಮೇಲೆ, (೧) ಪ್ರತ್ಯಾಹಾರ, (೨) ಧ್ಯಾನ, (೩)

ಧಾರಣ, (೪) ಸಮಾಧಿ ಎನ್ನುವ ನಾಲ್ಕು ಸ್ಥಿತಿಗಳನ್ನೂ ಈ ಶ್ಲೋಕಗಳಲ್ಲಿ ಸೇರಿಸಿ, ಸಮಾಧಿಸ್ಥಿತನ ಲಕ್ಷಣವನ್ನು "ನ ಕಿಂಚಿದಪಿ ಚಿಂತಯೇತ್"ಎಂದು ಒಂದೇ ಪಾದದಲ್ಲಿ ವಿವರಿಸಿದ್ದಾರೆ. ಮುನಿಯ ಮೌನ, ಯೋಗಿಯ "ಚಿತ್ತ ವೃತ್ತಿನಿರೋಧ" ಎಲ್ಲ ಬಂದುಹೋಯಿತು. ಇಂದ್ರಿಯಗಳಿಗೆ ಅನುಭವಿಸಿರುವ ಸುಖವಾಸನೆಯೇ ಚಾಪಲ್ಯ, ಆ ಸುಖಗಳನ್ನು ಪುನಃ ಅನುಭವಿಸಬೇಕೆಂಬುದೇ ಹಂಬಲ. ಈ ಹಿಡಿತಗಳಲ್ಲಿ ಸಿಕ್ಕಿರುವ ವಿಷಯಚಾಪಲ್ಯ ಹಂಬಲಗಳಿಂದ ಹಿಂತಿರುಗಿಸಿ, ವಿಷಯಭೋಗಗಳಿಲ್ಲದಿದ್ದರೆ ಉಪಶಮನವಿಲ್ಲವಲ್ಲಾ ಎಂಬ ದಿಗಿಲಿನಿಂದ ಇಂದ್ರಿಯಗಳನ್ನು ತಪ್ಪಿಸಿ, ನಿರೋಧಿಸುವುದೇ ಪ್ರತ್ಯಾಹಾರ. ಆ ನಿರೋಧಿಸಿದ ಮನಸ್ಸಿನ ಉಪರಾಮ, (ಶಾಂತಿಯೇ) ಧ್ಯಾನ. ಆ 'ಧೃತಿ ಗೃಹೀಯತಾ' ಎಂಬುದೇ ಧಾರಣ. ಆತ್ಮನಲ್ಲಿ ಮನಸ್ಸನ್ನು ಸ್ವಸ್ಥವಾಗಿ ನಿಲ್ಲಿಸುವುದೇ ಸಮಾಧಿ. ಹಿಂದೆ ಹೇಳಿದಂತೆ, ಆಸನದಲ್ಲಿ ಅಚಲಪ್ರತಿಷ್ಠಿತನಾಗಿ, ನಾಸಾಗ್ರದೃಷ್ಟಿಯಲ್ಲಿ ಪ್ರಾಣಾಯಾಮಮಾಡುವುದು ಬಾಹ್ಯನಿರೋಧವಾಯಿತು. ಅನಂತರ ನಾಲ್ಕು ಸ್ಥಿತಿಗಳೂ ಅಂತರ್‌ನಿರೋಧ. ಈ ಸಪ್ತಾಂಗ ಸಮಾಧಿಯೇ ಪತಂಜಲಿಯ ಯೋಗ. ಆ ಸ್ಥಿತಿಯಲ್ಲಿ ಸದಾ ಇರುವವನೇ ಯೋಗಿ.

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥೨೬॥

ಸ್ಥಿರವಾಗಿ ನಿಲ್ಲದೆ ಯಾವಾಗ ಯಾವಾಗ ಮನಸ್ಸು ಚಂಚಲವಾಗಿ ವಿಷಯಗಳ ಕಡೆ ಹೊರಳುವುದೋ ಆಗಾಗಲೇ, ಆಯಾ ವಿಷಯಗಳಿಂದ ಮನಸ್ಸನ್ನು ಹಿಮ್ಮೆಟ್ಟಿಸಿ ಆತ್ಮನಲ್ಲಿಯೇ ವಶವಾಗಿ ನೆಲೆಯಾಗಿ ನಿಲ್ಲುವಂತೆ ನಿಯಮ ಮಾಡಬೇಕು.

ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಸಮಾಧಿ ಎಲ್ಲವೂ ಬಂದುಬಿಟ್ಟಿತು—ಈ ಮೂರು ಶ್ಲೋಕಗಳಲ್ಲಿ. ಯೋಗಸೂತ್ರದಲ್ಲಿ ಉಲ್ಲೇಖವಾಗಿರುವ ಮುಖ್ಯವಿಷಯಗಳನ್ನೆಲ್ಲ ಧ್ಯಾನಯೋಗಾಭ್ಯಾಸದ ಈ ಅಧ್ಯಾಯದಲ್ಲಿ ಪರಮಾತ್ಮ—ಸುಲಲಿತವಾಗಿ ಮೆಟ್ಟಲುಮೆಟ್ಟಲಾಗಿ ಗ್ರಹಿಸಲು ಅನುಕೂಲವಾಗಿ ತಿಳಿಯುವಂತೆ ವಿವರಿಸಿದ್ದಾನೆ. ಆ ಸಮಾಧಿಸ್ಥಿತಿಯನ್ನು ಹೊಂದಿ, ಆ ಸ್ಥಿತಿಯಲ್ಲಿ ನಿಲ್ಲಲು ಬೇಕಾದ ಸಲಕರಣೆಗಳನ್ನೂ, ಮಾರ್ಗಗಳನ್ನೂ ಬರುವ ಆತಂಕ ನಿರೋಧಮಾರ್ಗವನ್ನೂ ಹೇಳಿದೆ.

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥೨೭॥

ಅದರಿಂದ ಆಗುವ ಸುಖಪ್ರಾಪ್ತಿ ಹೋಗಿರುವುದೆಂದರೆ, ಪ್ರಶಾಂತಚಿತ್ತ, ನಿಷ್ಪಾಪ, ರಜೋಗುಣಶಾಂತನಾಗಿ ಬ್ರಹ್ಮಭಾವದ ಉತ್ತಮಸುಖ ಹೊಂದುವನು. ಯೋಗಾಭ್ಯಾಸ ಧ್ಯಾನವೆಲ್ಲ ಈ ಸ್ಥಿತಿ ಹೊಂದುವುದಕ್ಕಾಗಿಯೇ. ಸುಷುಪ್ತಿಯ ಅವಸ್ಥೆಗೂ ಸಮಾಧಿಯ ಈ ಸ್ಥಿತಿಗೂ ಅಜಗಜಾಂತರ ವ್ಯತ್ಯಾಸ. ಸುಷುಪ್ತಿಯಿಂದ ಎಚ್ಚೆತ್ತವನು, ಮುಂಚಿನಂತೆ ಇದ್ದ ಅಜ್ಞಾನಿಯೇ ಆಗಿರುವನು. ಸಮಾಧಿಸ್ಥಿತಿಯಿಂದ ಎದ್ದವನು ರಜೋಗುಣಶಾಂತನಾಗಿ ಪ್ರಶಾಂತಚಿತ್ತನಾಗಿ, ಎಚ್ಚರವಾದ ಅವಸ್ಥೆಯಲ್ಲಿ ಕೂಡ, ಆ ಸಮಾಧಿಯಲ್ಲಿದ್ದ ಶಾಂತಸುಖಾವಸ್ಥೆಯನ್ನೇ ಅನುಭವಿಸುತ್ತ ಬಹ್ಮಭಾವಿಯಾಗಿರುವನು. ನಿದ್ರೆ ತಮೋವಸ್ಥಾ. ಸಮಾಧಿ ಸಾತ್ವಿಕಾತೀತಅವಸ್ಥಾ. ನಿರ್ಮಲ ನಿಶ್ಚಲ ಚಿತ್ತ.

ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥೨೮॥

ಈ ಧ್ಯಾನಯೋಗಿಯು ಸರ್ವದಾ ಆತ್ಮನಲ್ಲಿ ಮನವನ್ನು ನಿರೋಧಗೊಳಿಸಿ ಆತ್ಮಚಿಂತನೆಮಾಡುತ್ತಾ ಅನಾಯಾಸವಾಗಿ ಬ್ರಹ್ಮಸಂಬಂಧ (ಸ್ಪರ್ಶ—ಲಗತ್ತಾಗಿಯೇ ಇರುವ ಸಂಬಂಧ)ದಿಂದ ಉದ್ಭವವಾದ ನಿರತಿಶಯಸುಖವನ್ನು ಅನಂತವಾಗಿ ಅನುಭವಿಸುತ್ತಿರುತ್ತಾನೆ. "ಭದ್ರಂ ತದ್ ವಿಶ್ವಂ ಯದವಂತಿ ದೇವಾ" ಈ ವಿಶ್ವವು ಮಂಗಳಮಯವು; ಇದನ್ನು ದೇವದೇವನು ಕಾಯುತ್ತಿದ್ದಾನೆ. ಯಾವುದೂ ಕೆಟ್ಟದ್ದೇ ಇಲ್ಲ, (ತನ್ನ ದೃಷ್ಟಿ ಕೆಟ್ಟುದಾದರೆ ತಾನೆ ಯಾವುದಾದರೂ ಕೆಟ್ಟುದಾಗಿ ಕಂಡೀತು) ಎಂಬ ಸಂತುಷ್ಟಭಾವನೆಯಿಂದ ಸರ್ವಮಂಗಳಮಯಿಯಾದ ವಿಶ್ವಶಕ್ತಿಯಲ್ಲಿ ತಲ್ಲೀನನಾಗಿ ತಾನೂ ಮಂಗಳವನ್ನು ಅನುಭವಿಸುತ್ತಾನೆ.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶಿನಃ ॥೨೯॥

ಆಗ ಬರುವ ದೃಷ್ಟಿಯಾದರೂ ಎಂತಹದು! ಸರ್ವತ್ರಸಮಮಂಗಳದರ್ಶಿಯಾದ ಯುಕ್ತಯೋಗಿಗೆ, ಸಮಾಧಿಯಲ್ಲಿರಲಿ, ಎಚ್ಚರದಲ್ಲಿರಲಿ, ಯಾವಾಗಲೂ, ಎಲ್ಲಾ ಭೂತಗಳಲ್ಲಿ ತನ್ನ ಆತ್ಮನನ್ನೂ, ಸಮಸ್ತ ಭೂತಗಳನ್ನು ತನ್ನಾತ್ಮ

ನಲ್ಲಿಯೂ, ಎಲ್ಲರನ್ನೂ ಎಲ್ಲವನ್ನೂ ಸಮದರ್ಶನದಿಂದ ಕಾಣುವನು. ಅಭೇದ ಬುದ್ಧಿ, ಅದ್ವೈತಬುದ್ಧಿಯು ಸಾಧಾರಣಸ್ಥಿತಿಯಾಗಿಬಿಡುವುದು.

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥

ಯಾವನು ಸರ್ವವನ್ನು ನನ್ನಲ್ಲಿಯೂ (ಪರಮಾತ್ಮನಲ್ಲಿ) ನನ್ನನ್ನು (ಪರಮಾತ್ಮ) ನನ್ನು ಸರ್ವದರಲ್ಲೂ ನೋಡುವನೋ ಅವನಿಗೆ ನಾನು ಪ್ರತ್ಯಕ್ಷನು, ಅವನು ನನಗೆ ಪ್ರತ್ಯಕ್ಷನು. ಇದು ರಾಧೆಯ ಪರಿಸ್ಥಿತಿ. ರಾಧೆಗೆ ಸರ್ವವೂ ಕೃಷ್ಣಮಯ ವಾಗಿತ್ತು. ರಾಧೆಯೇ ಕೃಷ್ಣನಾಗಿಬಿಟ್ಟು ತನ್ಮಯಳಾದಳು. ಎಲ್ಲಿ ನೋಡಿದರೂ ಕೃಷ್ಣ, ಎಲ್ಲಾ ವಸ್ತುಗಳೂ ಕೃಷ್ಣ. ಇದು ಧ್ಯಾನಯೋಗದ ಪರಮಾವಧಿ. ಮತ್ತೊಬ್ಬ ಸಾಧಕ ಗೋಪಿಯು ತನಗದು ಸಾಧ್ಯವಾಗದಿದ್ದಾಗ, ಮತ್ತೊಬ್ಬ ಗೋಪಿಯನ್ನು ಬೇಡುತ್ತಾಳೆ: "ಸಖಿ, ಕೃಷ್ಣನನ್ನು ಕಾಣಲಾರೆ. ಕೃಷ್ಣನನ್ನು ಕಾಣದೆ ವಿರಹತಾಪ ಸೈರಿಸಲಾರೆ. ಸಖಿ, ಕೃಪೆಮಾಡಿ ರಾಧೆಯ ನೇತ್ರಾಂಜನ ವನ್ನಾದರೂ ತಂದು ನನ್ನ ಕಣ್ಣಿಗೆ ಕಾಡಿಗೆಯಾಗಿ ಹಚ್ಚು. ಆಗ ಕೃಷ್ಣನು ಕಾಣಿಸುವನೇನೋ, ಸಖಿ! ತಾ, ರಾಧಾನೇತ್ರದಂಜನ." ಇದೇ ರಾಧೆಯ ತದೇಕಧ್ಯಾನದ ಫಲವಾದ ನೈಜ ನೇತ್ರಾಂಜನ. ಆ ಧ್ಯಾನದಿಂದ ರಾಧೆಯ ತನುಮನಗಳನ್ನು ತುಂಬಿದ್ದಾನೆ ಕೃಷ್ಣ. ಕಣ್ಣಿಗೆ ಕಟ್ಟಿರುವುದೇನು ಹೆಚ್ಚು! ಈ ಭಾವದಿಂದ ಪರಮಾತ್ಮನನ್ನು ಎಲ್ಲೆಲ್ಲಿಯೂ, ಎಲ್ಲದರಲ್ಲೂ ಕಾಣುವ ಸೂಕ್ಷ್ಮ ವನ್ನು ಗ್ರಹಿಸಬೇಕು. ಹಚ್ಚು ಸಾಧಕನೇ, ನೀನೂ ರಾಧೆಯ ಕಣ್ಣುಕಪ್ಪನ್ನು. ಕಾಣು ಪರಮಾತ್ಮನನ್ನು ಎಲ್ಲೆಡೆಯೂ. ಕೃಷ್ಣನಿಗೂ ರಾಧೆ ಸದಾ ಪ್ರತ್ಯಕ್ಷ.

ಸೃಷ್ಟಿಯೆಲ್ಲವೂ ಪವಿತ್ರ, ಶುಭ, ಎಂಬ ಜ್ಞಾನ ಬಂದಮೇಲೆ, ಪರಮಾತ್ಮ ನನ್ನು ಎಲ್ಲದರಲ್ಲೂ, ಎಲ್ಲವನ್ನು ಪರಮಾತ್ಮನಲ್ಲೂ ಕಾಣುವಾಗ, ಒಬ್ಬರೊಬ್ಬರಿಗೆ ಪರಸ್ಪರ ಭೇಟಿಯಾದ ಮೇಲೆ, ಒಬ್ಬರ ಕಣ್ಣಿಗೆ ಒಬ್ಬರು ಕಟ್ಟಿದಂತೆ ಯೋಗಿಯೂ ಪರಮಾತ್ಮನೂ ಪರಸ್ಪರ ಪ್ರತ್ಯಕ್ಷರಲ್ಲದೆ ಮತ್ತೇನು?

೨೯, ೩೦ ನೇ ಶ್ಲೋಕಗಳ ಬಿಂಬಭಾವನೆ "ಅನ್ನಪೂರ್ಣೋಪನಿಷತ್ತಿ"ನಲ್ಲಿ ಬರುವ—

ಯದಾ ಸರ್ವಾಣಿ ಭೂತಾನಿ ಸ್ವಾತ್ಮನ್ಯೇ ವ ಹಿ ಪಶ್ಯತಿ
ಸರ್ವಭೂತೇಷು ಚಾತ್ಮಾನಂ ಬ್ರಹ್ಮಸಂಪದ್ಯತೇ ತದಾ

ಯದಾ ಸರ್ವಾಣಿ ಭೂತಾನಿ ಸಮಾಧಿಸ್ಥೋ ನ ಪಶ್ಯತಿ
ಏಕೀಭೂತಃ ಪರೇಣಾಸೌ ತದಾ ಭವತಿ ಕೇವಲಃ ।

ಎಂಬುದರ ಅರ್ಥವು ಎಷ್ಟು ಚೆನ್ನಾಗಿ ಬಂದಿದೆ!

ದರ್ಶನೋಪನಿಷತ್ತಿನ ಕೊನೆಯಲ್ಲಿಯೂ "ಯದಾ ಸರ್ವಾಣಿ . . . ಸಂಪದ್ಯತೇ ತಥಾ" ಎಂಬ ಮತ್ತು ಮುಂದಿನ ಶ್ಲೋಕ ಬಂದು, ಅನಂತರ—

ಯದಾ ಪಶ್ಯತಿ ಚಾತ್ಮಾನಂ ಕೇವಲಂ ಪರಮಾರ್ಥತಃ
ಮಾಯಾಮಾತ್ರಂ ಜಗತ್ಕೃತ್ಸ್ನಂ ತದಾ ಭವತಿ ನಿರ್ವೃತಿಃ

ಎಂಬ ಶ್ಲೋಕವೂ ಬಂದು ಸಮಾಪ್ತವಾಗಿರುವುದು. ಈ ಶ್ಲೋಕಗಳ ಅರ್ಥಭಾವವು ಎಷ್ಟು ಮುಖ್ಯವಾದುದೆಂಬುದು ಮನದಟ್ಟುತ್ತದೆ.

ಕೈವಲ್ಯೋಪನಿಷತ್ತಿನಲ್ಲಿಯೂ

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ
ಸಂಪಶ್ಯನ್ ಬ್ರಹ್ಮಪರಮಂ ಯಾತಿ ನಾನ್ಯೇನಹೇತುನಾ

ಎಂದು ಬರೆದಿದೆ.

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೩೧॥

ಯಾವನು ಸರ್ವಭೂತಗಳಲ್ಲಿಯೂ ಸ್ಥಿತನಾಗಿರುವ ನನ್ನನ್ನು (ಪರಮಾತ್ಮನನ್ನು) ಅಭೇದಬುದ್ಧಿಯಿಂದ ಭಜಿಸುವನೋ ಸೇವಿಸುವನೋ ಆ ಯೋಗಿಯು ಯಾವ ರೀತಿ ವರ್ತಿಸುತ್ತಿದ್ದರೂ ನನ್ನಲ್ಲೇ ವರ್ತಿಸುವನು.

ಅಭೇದಬುದ್ಧಿಯ ಚರಮಸೀಮೆಯನ್ನು ತೋರಲು ಶ್ರೀರಮಣರ ಒಂದು ಕಥೆ ಜ್ಞಾಪಕಕ್ಕೆ ಬರುತ್ತೆ. ಅಸ್ವಸ್ಥತೆಯಿಂದ ಅವರು ನರಳುತ್ತಿದ್ದಾಗ ಅವರ ಶಿಷ್ಯರು ಅವರಿಗೆ ಅನುಕೂಲವಾದ ಬೇರೆ ಊಟ ಉಪಚಾರ ಒಪ್ಪಿಸಿಕೊಳ್ಳಲು ಪ್ರಾರ್ಥಿಸಿದರು. ರಮಣಾಶ್ರಮದಲ್ಲಿ ಪಂಕ್ತಿಭೇದದ ಕನಸನ್ನೇ ಕಾಣದ ಶಿಷ್ಯವೃಂದ, ಅತಿಥಿಅಭ್ಯಾಗತರೊಡನೆ ಅರುಣಾಚಲಾನುಗ್ರಹವಾದ ನೈವೇದ್ಯವನ್ನು ಸಮಾರಾಧನೆಯಲ್ಲಿ (ಸಮ+ಆರಾಧನೆ) ಎಲ್ಲರೊಡನೆ ಒಂದೆಡೆ ಎಡೆಮಾಡಿ ಕುಳಿತು ಸರ್ವಜನಸಾಮಾನ್ಯವಾಗಿ ಭಿಕ್ಷೆ ಸ್ವೀಕರಿಸುತ್ತಿದ್ದ ಶ್ರೀರಮಣರಿಗೆ, ತಮ್ಮ ಕಾಯಿಲೆಗೆ ಪಥ್ಯರೂಪವಾಗಿ ಹೆಚ್ಚು ಅನುಕೂಲದ ಒಳ್ಳೇ ತಿಂಡಿತೀರ್ಥಗಳು ಅವಶ್ಯವಾಗಿದ್ದರೂ, ಭೇದಮಾಡಿ ಬೇರೆ ಆಹಾರವನ್ನು ತೆಗೆದುಕೊಳ್ಳಲು

ನಿರಾಕರಿಸಿದರು. ಬಹಳ ಒತ್ತಾಯಪಡಿಸಿದಾಗ, "ಆಗಲಿ, ತೆಗೆದುಕೊಳ್ಳು ತ್ತೇನೆ. ಆದರೆ ಒಂದು ಷರತ್ತಿನ ಮೇಲೆ" ಅಂದರು. ಅದು ಏನೆಂದು ಆತುರ ದಿಂದ ಶಿಷ್ಯರು ಕೇಳಲು, "ನನಗೆ ಕೊಡುವ ಆಹಾರವನ್ನು ಸರ್ವರಿಗೂ ಹಾಕ ಬೇಕು" ಎಂದು ನಸುನಕ್ಕರಂತೆ. ಎಲ್ಲರಿಗೂ ಸಹಪಂಕ್ತಿಭೋಜನವಾದ ಮೇಲೆ ತಮಗೆ ಇನ್ನು ಹೇಗೆ ವಿಶೇಷ ಬಂತು? ಎಂದು ಅಭೇದ ಬುದ್ಧಿ ಸಾಧಿಸಿ ದರು. ಯಾವ ಸ್ಥಿತಿಯಲ್ಲಿಯೂ, ಯಾವಾಗಲೂ, ತಾನು ಇತರರಿಂದ ಬೇರೆ ಎಂಬ ಭೇದಬುದ್ಧಿ ಬಾರದಂತೆ, ತಾನು ತನ್ನದು ಎನ್ನುವದನ್ನು ಎಷ್ಟರಮಟ್ಟಿಗೆ ತುಳಿದು ಸಮತ್ವವನ್ನು ನಿತ್ಯಜೀವನದಲ್ಲಿ, ನಿತ್ಯವ್ಯವಹಾರದಲ್ಲಿ ಸಾಧಿಸುವುದು ಈಗಲೂ ಸಾಧ್ಯವೆಂದು ಇದರಿಂದ ಕಾಣುತ್ತದೆ. ಅವನು ಮಾಡುವುದೆಲ್ಲಾ ಪರಮಾತ್ಮಕಾರ್ಯವೇ. ತಾನು ಮಾಡುವವನೆ ಅಲ್ಲ. ಮಹದಾತ್ಮನು ಬೇಕಾದ ಸೇವೆಯನ್ನು ತನ್ನಲ್ಲಿ ನಿಂತು ತನ್ನಿಂದ ಮಾಡಿಸಿಕೊಳ್ಳುತ್ತಿರುವಾಗ ಇನ್ನು ನಾನು ತಾನೆಂಬ, ತನ್ನದೆಂಬ ಭೇದಬುದ್ಧಿಯೂ, ಇತರ ಭೂತಗಳು ಬೇರೆ, ಅವುಗಳಿಗೆ ಮಾಡುತ್ತಿರುವ ಸೇವೆ ಪರಸೇವೆ ಎಂಬ ಭಾವವೂ ಎಲ್ಲಿಂದ ಬಂದೀತು? ಮಹ ದಾತ್ಮ (Cosmic action) ಕಾರ್ಯಕ್ಕೆ ಕಿಂಚಿತ್ಸೇವೆಗಾಗಿ ಈ ಪಾಮರ ಸೇವಕ ನಲ್ಲಿ ನಿಂತು ಸೇವೆ ಕೈಕೊಳ್ಳುತ್ತಿದ್ದಾನೆ ಎಂಬ ಭಾವನೆ ದೃಢವಾದಾಗ ಯಾವುದು ನಡವಳಿಕೆ ತಾನೆ ತಪ್ಪು ನಡವಳಿಕೆಯಾದೀತು? "Handsome is that handsome does" ಸುಂದರ ಕೃತಿಗಳನ್ನು ಎಸಗುವವನೇ ಸುಂದರನು. "ಯತ್ಕೃತಂ ಯತ್ಕರಿಷ್ಯಾಮಿ ತತ್ಸರ್ವಂ ನ ಮಯಾಕೃತಂ, ತ್ವಯಾ ಕೃತಂ ತು ಫಲಭುಕ್ ತ್ವಮೇವ ಮಧುಸೂದನ" ಎಂದು ಕುಲಶೇಖರರು ಮುಕುಂದ ಮಾಲಾಸ್ತೋತ್ರದಲ್ಲಿ ಹಾಡಿರುವುದರ ತತ್ತ್ವವಾದರೂ ಇದೇ. ಭೇದಬುದ್ಧಿಯೇ ಇಲ್ಲ. ಎಲ್ಲಾ ಕಾರ್ಯಕ್ಕೂ ಪರಮಾತ್ಮನೇ ಕರ್ತೃ, ಎಲ್ಲಾ ಫಲಕ್ಕೂ ಪರಮಾತ್ಮನೇ ಭೋಕ್ತೃ. ತಾನು ಮಾಡುವುದೇನು? ಫಲವನ್ನು ಅನುಭವಿಸುವುದು ಎಂತು?

> ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
> ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥

ಆತ್ಮನ ದೃಷ್ಟಾಂತದಿಂದ ಸರ್ವಪ್ರಾಣಿಗಳ ಸುಖದುಃಖಗಳನ್ನು ಯಾವನು ಸಮವಾಗಿ ಪರೀಕ್ಷಿಸಿ ತಿಳಿವನೋ ಆ ಯೋಗಿಯೇ ಉತ್ಕೃಷ್ಟನು. "ತನ್ನಂತೆ" ಇತರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು" ಎಂಬ ಸರ್ವಜ್ಞರ ನುಡಿ

ಯಾವಾಗಲೂ ಮಾನವನನ್ನು ಪರೀಕ್ಷೆ ಮಾಡಿದೆ. ಯಾವಾಗ ಕೈಲಾಸವೆಂದರೆ: ಯಾವಾಗ ಇತರರನ್ನೂ ತನ್ನಂತೆಯೇ ಬಗೆಯುವ ಮನೋವೃತ್ತಿಯನ್ನು ಮಾನವ ಪ್ರತಿಯೊಬ್ಬನೂ ಅನುಸರಿಸುತ್ತಾನೋ ಆಗಲೇ ಇಹವೇ ಕೈಲಾಸ. ಕೈಲಾಸ ಬೇರೆ ಇಲ್ಲ. ಇದ್ದವರನ್ನು ಮುರಿದು ಇತರರಿಗೆ ಹಂಚಬೇಕೆಂಬ ಮನೋವೃತ್ತಿಯಾಗಲಿ, ಹಿರಿದನ್ನು ಅಸೂಯೆಯಿಂದ ಕಿರಿದಾಗಿಮಾಡಿ ಸಮತ್ವ ಸಾಧಿಸಬೇಕೆಂಬ ತತ್ತ್ವವನ್ನಾಗಲಿ "Levelling down" ನಾಗರಿಕತೆಗೆ ಪ್ರಾಚೀನ ನೆಲೆವೀಡಾದ ಭಾರತಕ್ಕೆ ಅಸಂಗತ. ಅಭೇದಬುದ್ಧಿಯಿಂದ ಭಜಿಸುವುದೇ, ಸೇವೆಯಿಂದ ಕಿರಿಯರನ್ನು ಹಿರಿಯರನ್ನಾಗಿ ಮಾಡಲು ಶ್ರಮಿಸುವುದೇ "Levelling up" ಭಾರತದ ನಿತ್ಯಧ್ಯೇಯ. ಆರ್ಥಿಕ ಸಮತಾದೃಷ್ಟಿಗಿಂತ, ಜ್ಞಾನದ ಸಮತೆಗೆ ಎಲ್ಲರೂ ಪ್ರಯತ್ನಿಸುತ್ತಿದ್ದರು. "Plain living and high thinking" — "ಮನಸಿಜಪರಿತುಷ್ಟೇ ಕೋ ಅರ್ಥವಾನ್ ಕೋ ದರಿದ್ರಃ" ಎಂದು ಭರ್ತೃಹರಿ ನುಡಿದಂತೆ, ಇದ್ದುದರಲ್ಲಿ ಸಂತುಷ್ಟರಾಗಿ, ಇತರರು ಹೆಚ್ಚು ಪಡೆದವರನ್ನು ಕಂಡು ಅಸೂಯೆಪಡದೆ, ನಮ್ಮ ಪೂರ್ವಿಕರು ಆರ್ಯ ಸನಾತನಧರ್ಮಾವಲಂಬಿಗಳು ಸಮತಾ ಜ್ಞಾನಾರ್ಜನೆಯಿಂದ ಚಿತ್ತಶಾಂತಿ ಮಹಾದಾನಂದದಲ್ಲಿ ಹಣವಂತ ದರಿದ್ರರೆಂಬ ಭಾವನೆಯೇ ಹಿಂದಾಗಿ ಸಂತುಷ್ಟಿಯಿಂದ ಜೀವಿಸುತ್ತಿದ್ದರು. "ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು, ಸುಡುವಗ್ನಿಯೊಂದೇ ಇರುತಿರೆ, ಕುಲಗೋತ್ರ ನಡುವೆ ಎತ್ತಣದು?" ಎಂದು ಯಾರಿಗೂ ನೋವಾಗದಂತೆ, ಎಲ್ಲರಿಗೂ ಹಿತವಾಗುವಂತೆ, ಪ್ರೀತಿಯಿಂದ ವರ್ತಿಸುವ ಸದಾಚಾರಸಂಪನ್ನರಾಗಿದ್ದರು, ಹಿಂದಿನ ಸಮಾಜವ್ಯಕ್ತಿಗಳು. ಈಗಿನಂತೆ ಸಮಾಜವ್ಯಕ್ತಿದ್ವೇಷ, ಸಂಘದ್ವೇಷಗಳು ತಲೆಯೆತ್ತಲು, ಹೇಳುವದಕ್ಕೆಲ್ಲಾ ಸಂತೆಯಲ್ಲಿ "ಗೋವಿಂದಾ, ಗೋವಿಂದಾ" ಎನ್ನುವ ಕುರುಡು ಬುದ್ಧಿಯ ಜನರಾಗಿರಲಿಲ್ಲ. ಅವರು ಹಿಂದಿನ ಸಮತಾವಾದದಲ್ಲಿ ಮಹೋಪನಿಷತ್ತಿನಲ್ಲಿ ಬರುವ "ಉದಾರಚರಿತಾನಾಂ ತು ವಸುಧೈವ ಕುಟುಂಬಕಂ" ಎಂಬ ಸುಜ್ಞಾನಸುಧೆಯಲ್ಲಿ, ಈಶನು ಈ ಸರ್ವಸ್ವದಲ್ಲೂ ವಾಸವಾಗಿದ್ದಾನೆಂಬ ತಿಳಿವಿನಲ್ಲಿ, ಲೋಕ ಕುಟುಂಬಿಯಾಗಿ ಉದಾರತೆಯಿಂದ ವರ್ತಿಸುತ್ತಿದ್ದರು. ಈ "ಆತ್ಮೌಪಮ್ಯ" ತತ್ತ್ವದ ಸಾರ ಈಗಿನ ಅಸೂಯಾಪ್ರಪಂಚಕ್ಕೆ, ಜನಾಂಗಮತ್ಸರಕ್ಕೆ, ವರ್ಣದ್ವೇಷಕ್ಕೆ ಪರಿಹಾರಾರ್ಥವಾಗಿ ಹೆಚ್ಚಿನ ಅಗತ್ಯದ ಉಪದೇಶ. ತನ್ನಂತೆಯೇ

ಇತರರನ್ನು ತಿಳಿಯುವುದು ಯೋಗದ ಪರಮಾವಧಿ. ಯಾವುದು ಸಂಭವಿಸಿದರೂ, ಯಾರಿಗೆ ಸಂಭವಿಸಿದರೂ, ತನಗೆ ಸಂಭವಿಸಿದ್ದರೆ ತನಗಾಗುವ ಕಷ್ಟಸುಖಗಳೇ ಇತರರಿಗೂ ಆಗುತ್ತದೆಂಬ ಭಾವವು ಆತ್ಮದ ಉಪಮಾನದಿಂದ ಸರ್ವರಲ್ಲೂ ಸಮವಾಗಿ ಬಂದರೆ, ಎಲ್ಲರ ಕಷ್ಟಸುಖಗಳನ್ನೂ ನಿಜವಾಗಿ ತಿಳಿದಂತಾಗುವುದು. ಇದು ಸರ್ವಮತಸಾರ, ಸರ್ವಸಾಧನಾಫಲ. ಇದಕ್ಕಿಂತ ಹೆಚ್ಚಿನ ತತ್ತ್ವವೇ ಇಲ್ಲ. ಸರ್ವಭೂತದಲ್ಲಿರುವ ಪರಮಾತ್ಮನನ್ನು ಏಕರೂಪಿಯಾಗಿ ಕಂಡು, ಸರ್ವರ ಹಿತವನ್ನೆಸಗುವುದೆ, ಪರಮಾತ್ಮಪೂಜೆಯೆಂದು ಭಾವಿಸಿ ನಡೆವವನಿಗೆ, ಕಾರ್ಯತಃ ನಡವಳಿಕೆಗೆ ಇದು ಅಳತೆಯ ಕೋಲು. ಇದರಿಂದ ಪ್ರತಿಯೊಬ್ಬರ ಕಷ್ಟಸುಖ ಗಳನ್ನೂ ಪ್ರತಿಯೊಂದು ಕಾರ್ಯವನ್ನೂ ತುಲನಮಾಡಿದರೆ, ಆ ರೀತಿಯಲ್ಲಿ, ಆ ಪರಿಸ್ಥಿತಿಯಲ್ಲಿ ನನಗೆ ಹೇಗೆ ಆಗುತ್ತಿತ್ತು, ಏನಾದರೆ ನನಗೆ ಹಿತವಾಗುತ್ತಿತ್ತು ಎಂದು ಯೋಚಿಸಿ, ಪರರಿಗೂ ತನ್ನ ಆಪ್ತಹಿತವನ್ನೇ ಬಯಸಿ, ಕಾಯಾ ವಾಚಾ ಮನಸಾ ನಡೆದರೆ, ಯೋಗದ ಪರಮಾವಧಿಯಲ್ಲದೆ ಮತ್ತೇನು? ಇತರರನ್ನು ನೋಯಿಸಿದರೆ, ನನಗೆ ಕಠಿಣೋಕ್ತಿಯಾಡಿದರೆ, ನನಗೆ ಅಹಿತ ಬಯಸಿದರೆ, ನನಗೆ ಹೇಗೆ ಹಿಂಸೆಯಾಗುತ್ತದೆಂಬ ಭಾವನೆಯು ಕ್ಷಣಕ್ಷಣಕ್ಕೂ ಎದ್ದು ನಿಲ್ಲ ಬೇಕು. ಆಗ ಯೋಗಿಯಾದುದಕ್ಕೆ ಸಾರ್ಥಕ.

೨೯ ರಿಂದ ೩೨ ರ ಈ ನಾಲ್ಕು ಶ್ಲೋಕಗಳಲ್ಲಿ ಉಪನಿಷತ್‌ಸಾರವನ್ನೆಲ್ಲ ಸೂರೆಗೊಂಡಿದ್ದಾನೆ ಸ್ವಾಮಿ. ಈಶಾವಾಸ್ಯದ ಪ್ರಥಮಮಂತ್ರದ "ಈಶಾ ವಾಸ್ಯಮಿದಂ ಸರ್ವಂ, ಯತ್ಕಿಂಚ ಜಗತ್ಯಾಂ ಜಗತ್" ಮತ್ತು ೭ನೆಯ ಮಂತ್ರದ "ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾ ಭೂದ್ವಿಜಾನತಃ ತತ್ರ ಕೋ ಮೋಹಃ ಕೋ ಶೋಕಃ ಏಕತ್ವಮನುಪಶ್ಯತಃ" ಎಂಬುದರ ಭಾವಾರ್ಥ ವನ್ನೂ ತಂದಿದ್ದಾನೆ. "ಆತ್ಮವಾಭೂದ್ವಿಜಾನತಃ" ಆದವನಿಗೆ ನಾನು, ನನ್ನದು, ಪರರು, ಪರರದು ಎಂಬ ಮೋಹವೆಲ್ಲಿಯದು? ಬೃಹದಾರಣ್ಯದ "ಯತ್ರ ಹಿ ದ್ವೈತಂ ಮಿವ ಭವತಿ ತದಿತರಇತರಂ ಪಶ್ಯತಿ,—ತದ್ದಿತರಮಭಿ ವದತಿ" ಇತ್ಯಾದಿ ದ್ವೈತವಿಲ್ಲದೆಯೇ "ಏಕತ್ವಮನುಪಶ್ಯತಿ"—ಎಂದರೆ ಎಲ್ಲ ವನ್ನೂ ಏಕೀಭಾವದಿಂದ ನೋಡುತ್ತಾನೆ.

ಕಠದಲ್ಲಿನ "ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ" "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹುನಾ

ಯೋ ವಿದಧಾತಿ ಕಾಮಾನ್" ಜ್ಞಾನ ಬಂದ ಮೇಲೆ "ತ್ವಮಾತ್ಮಸ್ಥಂ ಯೇನುಪಶ್ಯಂತಿ ಧೀರಾ, ತೇಷಾ ಸುಖಂ ಶಾಶ್ವತಂ ನೇತರೇಷಾಂ" ಎಂದು ಒತ್ತಿಹೇಳಿದೆ. ಇದು ಯೋಗಾಭ್ಯಾಸದ ಜ್ಞಾನಫಲ. ಇದನ್ನು ಸರ್ವದಾ ಸರ್ವಾವಸ್ಥೆಯಲ್ಲೂ ಪೋಷಿಸಿ ನಡಸಿಕೊಂಡು ಬರಬೇಕು. ನಿತ್ಯಕಾರ್ಯಾಚರಣೆ ಯಲ್ಲೂ ಪ್ರತಿ ಸನ್ನಿವೇಶದಲ್ಲೂ ಈ ನಾಲ್ಕು ಶ್ಲೋಕಗಳ ತತ್ತ್ವವನ್ನು ಪಾಲಿಸ ಬೇಕು. ಇದು ಸಮದರ್ಶಿತ್ವದ ಉಚ್ಚಸ್ಥಿತಿ. ಪರಮಯೋಗಿಯ ಸಹಜಸ್ಥಿತಿ. ಕ್ರೈಸ್ತಮತದಲ್ಲೂ "Do unto others as you would be done by" ಎಂಬ ಆತ್ಮೌಪಮ್ಯ ತತ್ತ್ವವನ್ನೇ "ನಿನಗೆ ಇತರರು ಎಂತು ವರ್ತಿಸಬೇಕೆಂದು ಅಪೇಕ್ಷಿಸುವೆಯೋ, ಅಂತೆಯೇ ಇತರರೊಡನೆ ವರ್ತಿಸು" ಎಂದು ಧರ್ಮಸಾರ ವನ್ನು ಸಾರಿದ್ದಾರೆ. ಇದು ಸಮಾಜೋದ್ಧಾರಕತತ್ತ್ವವೂ ಹೌದು. ಪರರ ಹಿತ ವನ್ನು ತನ್ನ ಹಿತದಂತೆಯೇ ಪಾಲಿಸಲು ಬುದ್ಧಿಕಲಿಸುತ್ತದೆ. ತನ್ನಂತೆಯೇ ಪರರನ್ನು ಕಂಡಾಗ ಏಕಭಾವವು ಬರುತ್ತದೆ. ಈ ಗಾಢವಾದ ತತ್ತ್ವವನ್ನು, ಈ ಧರ್ಮಸೂಕ್ಷ್ಮವನ್ನು, ಸುಲಭವಾಗಿ ಕಂಡರೂ, ಗ್ರಹಿಸುವುದು ಬಹಳ ಕಷ್ಟ. ಇದನ್ನು ಕಾರ್ಯರೂಪಕ್ಕೆ ತರಲು ಮನಸ್ಸನ್ನು ಹದಮಾಡಿ, ಸತತ ವರ್ತನೆಯಲ್ಲಿ ಇರಿಸಿಕೊಳ್ಳುವುದು ಸುಲಭವಲ್ಲ. ಈ ಪರಮೋತ್ಕೃಷ್ಟ ತತ್ತ್ವವಿಮರ್ಶೆಯಿಂದ ಅರ್ಜುನನಿಗೆ ಕೂಡ ತಲೆ ತಿರುಗಿರಬೇಕು. ಗ್ರಹಿಸಲಸಾಧ್ಯವಾಗಿರಬೇಕು. ಆಗ ಹೇಳುತ್ತಾನೆ:

> ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।
> ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥
>
> ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।
> ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥೩೪॥

"ನನ್ನ ಚಂಚಲವಾದ ಅಸ್ಥಿರವಾದ ಸ್ಥಿತಿಯಲ್ಲಿ ನೀನು ಹೇಳಿದ ಸಮಭಾವ ರೂಪವಾದ ಈ ಯೋಗವನ್ನು ಕಂಡು ನೈಜವಾದ ಸ್ಥಿತಿಯನ್ನು ತಿಳಿಯಲಾರೆನು. ಈ ಮನಸ್ಸಾದರೋ ಚಂಚಲಸ್ವಭಾವವುಳ್ಳದ್ದು. ಮೂರ್ಖವಾದುದು, (ಉಗ್ರ) ಬಲವಾದುದು, ಭೇದಿಸಲಸಾಧ್ಯವಾದುದು. ಇದರ ನಿಗ್ರಹವು, ಗಾಳಿಯನ್ನು ಮೂಟೆ ಕಟ್ಟುವಂತೆ, ಸರ್ವವ್ಯಾಪಕವಾದ ವಾಯುವನ್ನು ನಿಗ್ರಹಿಸುವಂತೆ ದುಷ್ಕರವಾದುದು" ಎಂದು ತನ್ನ ಮನೋಚಾಂಚಲ್ಯವನ್ನು ಬಿಚ್ಚಿ ತಿಳಿಸು

ತ್ತಾನೆ. ಎಲ್ಲಿಯೋ ಇಲ್ಲದೆ ಸ್ವೇಚ್ಛೆಯಾಗಿರುವ ವಾಯುವನ್ನು ನಿಗ್ರಹಿಸಿ, ಹತೋಟಿಗೆ ತರುವುದು ಎಂತು ಸುಲಭಸಾಧ್ಯವಲ್ಲವೋ, ಅಂತೆಯೇ ಎಲ್ಲಿಯೋ ಇಲ್ಲದ ಸ್ವೇಚ್ಛೆಯಾದ ಮನಸ್ಸನ್ನು ನಿಗ್ರಹಿಸುವುದು ಬಹು ಕಷ್ಟವು ಒಂದು ಕಡೆ ತಡೆದರೆ ಮತ್ತೊಂದು ಕಡೆ ಚಲಿಸುತ್ತದೆ ವಾಯು. ಒಂದು ಕಡೆ ನಿರ್ಬಂಧ ಹಾಕಿದರೆ, ಮತ್ತೊಂದು ಕಡೆ ಓಡುತ್ತದೆ. ಮನಸ್ಸನ್ನು ನಾಲ್ಕು ಕಡೆಯೂ ನಿರ್ಬಂಧಿಸಿ, ಅದನ್ನು ನಿಗ್ರಹಿಸುವುದು ಕಷ್ಟತರ. ಎಂತಹ ಎಂತಹ ಯೋಗಿಗಳಿಗೂ ಸಿದ್ಧರಿಗೂ ಚಕ್ಕರ್ ಕೊಟ್ಟು ಮಣ್ಣು ತಿನ್ನಿಸಿದ ಈ ಚಂಚಲ ಚಪಲ ಚಿತ್ತವನ್ನು ನಿಗ್ರಹಿಸುವುದೆಂತು?

> ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್
> ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥೩೫॥
> ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ
> ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥

ಒಪ್ಪಿದ ಪರಮಾತ್ಮ. ಸಾಧಕರ ಕಷ್ಟಗಳನ್ನರಿಯನೆ ದೇವ? ಅದನ್ನು ಪರಿಹರಿಸುವ ಮಾರ್ಗ ತೋರಲೇ ಅಲ್ಲವೆ ಈ ಗೀತಾ ಉಪದೇಶವೆಲ್ಲ? ಮಹಾಬಾಹುವಾದ ಅರ್ಜುನನಿಗೇ ಕಷ್ಟಸಾಧ್ಯವಾಗಿದ್ದಾಗ ನಮ್ಮಂಥ ಕುಬ್ಜರಿಗೆ ಇನ್ನೆಷ್ಟು ಕಷ್ಟಸಾಧ್ಯ? ಹೌದು, ಅಸಂಶಯವು, ನಿನ್ನ ಸಂಶಯವು ಅಸಂಶಯವು ನಿಜ, ಈ ಚಂಚಲಸ್ವಭಾವದ ಸ್ವೇಚ್ಛಾಪ್ರವೃತ್ತಿಯಲ್ಲಿ ತಾನೇ ತಾನಾಗಿರುವ ಮನಸ್ಸನ್ನು ನಿಗ್ರಹಿಸುವುದು ಕಠಿಣ. ಆದರೆ, 'ಕೌಂತೇಯನೇ'—ಎಂದು ಬಂಧುತ್ವದ ಅಭಿಮಾನದಿಂದ ಸಂಬೋಧಿಸಿ, ಚುಟುಕೆಯಲ್ಲಿ ಹೇಳುತ್ತಾನೆ, ಅದಕ್ಕೆ ಉಪಾಯವನ್ನು. ಅಭ್ಯಾಸದಿಂದಲೂ ವೈರಾಗ್ಯದಿಂದಲೂ ನಿಗ್ರಹಿಸಲು ಸಾಧ್ಯ; ಸಾಧಿಸಲೇಬೇಕೆಂದ ಪರಮಾತ್ಮ. ನಿನ್ನೊಬ್ಬನ ಅಭಿಪ್ರಾಯವೇ ಅಲ್ಲ, ನನ್ನ ಅಭಿಪ್ರಾಯವೂ ಅದೇ. ಅಭ್ಯಾಸವೈರಾಗ್ಯಗಳಿಲ್ಲದೆ ಈ ಯೋಗ ಸಾಧಿಸಲು, ದುಷ್ಪ್ರಾಪ್ಯ—ಪ್ರಾಪ್ತವಾಗಲಾರದು. ಉಪಾಯದಿಂದ ಆತ್ಮವನ್ನು (ಅಂತಃಕರಣಗಳನ್ನು) ವಶಮಾಡಿಕೊಂಡವನಿಗೆ, ಅಭ್ಯಾಸವೈರಾಗ್ಯಗಳಿಂದ ಇದು ಶಕ್ಯವಾಗುವುದು. ಕಷ್ಟ ಸುಲಭ ಎನ್ನುವುದು ಅದನ್ನು ಮಾಡುವ ಅಭ್ಯಾಸಬಲದಿಂದ ಉಂಟಾದ ಅರಿವಿನ ಕರ್ತವ್ಯರೀತಿಯೇ.

ಶ್ರೀ ಶಂಕರರು, ಅಭ್ಯಾಸ ವೈರಾಗ್ಯವೆಂಬುದು ಸಾಧಕನಿಗೆ, ಹಕ್ಕಿಗೆ ಮೇಲಿ

ಹಾರಲು ಸಹಾಯಕವಾಗುವ ಎರಡು ರೆಕ್ಕೆಗಳಿದ್ದಂತೆ, ಸಾಧಕನನ್ನು ಮೇಲ ಕ್ಕೊಯ್ಯಲು ಸಹಾಯಕ, ಎಂದಿದ್ದಾರೆ. ಇಕ್ಕಡೆಯೂ ಪಕ್ಷವಿದ್ದುದರಿಂದಲೇ, ಅದು ಪಕ್ಷಿಯಾಗಿರುವುದು. ಅಭ್ಯಾಸ, ವೈರಾಗ್ಯಗಳೆಂಬ ಪಕ್ಷಗಳು ಇಕ್ಕಡೆಯೂ ಇದ್ದರೇ ಅವ ಯೋಗಿಯಾಗುವುದು. ಲಭ್ಯವಾಗದಿದ್ದರೂ ಪುನಃ ಪುನಃ ಪುರುಷಪ್ರಯತ್ನವನ್ನು ಮಾಡುತ್ತಿರುವುದೇ ಅಭ್ಯಾಸ. "Try, try again; If at first you don't succeed, Try try again," ಎನ್ನುವಂತೆ ಸಾಧನಮಾಡಬೇಕು. ಮಾಡುವುದು ತನ್ನದಾಗುವ ವರೆಗೂ ಪ್ರಯತ್ನಿಸುವುದೇ ಅಭ್ಯಾಸ. ಬರುವುದಿಲ್ಲಪ್ಪಾ ಎಂದು ಪ್ರಯತ್ನಿಸಿ ಅಭ್ಯಾಸಕ್ಕೆ ಷುರುವೇ ಮಾಡ ದಿದ್ದರೆ, ಯಾವುದು ತಾನೆ ಕಲಿಯಲು ಸಾಧ್ಯ? ನೀರಿಗಿಳಿದು ಅಭ್ಯಸಿಸಿದ ಹೊರತು ಈಜು ಬರುವುದೆಂತು? ಈಜು ಬಂದ ಮೇಲೆ ನೀರಿಗಿಳಿಯುತ್ತೇನೆಂಬ ಹುಚ್ಚನಂತೆ, ಅಭ್ಯಾಸ ಮಾಡದವನ ಸ್ಥಿತಿಯಾಗುತ್ತದೆ. ಅಭ್ಯಾಸದಿಂದ ಅಸಾಧ್ಯವಾದ ಕೆಲಸಗಳನ್ನೆಲ್ಲ ಸಾಧಿಸಬಹುದು. ಗಾಳಿಯನ್ನು ಮೂಟೆ ಕಟ್ಟಬಹುದು, ಮನಸ್ಸನ್ನು ನಿಗ್ರಹಿಸಬಹುದು. ಒಂದೇ ರೆಕ್ಕೆಯಿಂದ ಹಾರ ಲಾರದು ಹಕ್ಕಿ, ಆದಕ್ಕಾಗಿ ಇನ್ನೊಂದರ ಸಹಾಯ ಬೇಕು. ಅದೇ ವೈರಾಗ್ಯ. "ರಾಗ"ವಿಲ್ಲದ್ದೇ "ವೈರಾಗ್ಯ". ರಾಗಕ್ಕೆ ಪ್ರೀತಿಯಿಂದ ಹಿಡಿದು "ಮಮತ್ವ"ದ ವರೆಗೂ ಅರ್ಥಾವಲಂಬನವಿದೆ. ರಾಗರಹಿತನಾಗುವುದು ಸುಲಭವಲ್ಲ. ಅದಕ್ಕೂ ಅಭ್ಯಾಸದ ಸಹಾಯ ಬೇಕು; ಅಭ್ಯಾಸಕ್ಕೂ ವೈರಾಗ್ಯದ ಸಹಾಯ ಬೇಕು. ಎರಡೂ ರೆಕ್ಕೆಗಳು ಇಕ್ಕಡೆ, ಒಂದರ ಸಹಾಯದಿಂದ ಇನ್ನೊಂದರ ಗಮನ. ಒಂದು ರೆಕ್ಕೆ ಬೀಸಿದಾಗ ಮತ್ತೊಂದೂ ಜೊತೆಗೆ ಸಹಾಯವಾಗಿ ಬೀಸು ವಂತೆ—ಏರಲು ಮಾರ್ಗ. ವಾಯುವಿನ ಉಪಮಾನವನ್ನು ಮನಸ್ಸಿಗೆ ಬಹಳ ಒಪ್ಪುವಂತೆ ಕೊಟ್ಟ ಅರ್ಜುನ. ವಾಯುವನ್ನೂ ಆವಿಯನ್ನು (ಅದೂ ವಾಯುವೇ) ತುರುಕಿ ತುರುಕಿ ಅದುಮಿ ನಿಗ್ರಹಿಸಿಟ್ಟರೆ, ಅದರಲ್ಲೆಂತು, ಅದರಲ್ಲೆಷ್ಟು ಶಕ್ತಿಯು ಸಂಗ್ರಹವಾಗಿರುತ್ತದೆ? ಆದರಿಂದ ಅಗಾಧವಾದ ಯಂತ್ರಗಳನ್ನೆ (Steam Engine) ಚಲನಮಾಡಿ ಉಪಯೋಗ ಪಡೆಯ ಬಹುದು. ಅಂತೆಯೇ ಮನಸ್ಸನ್ನು ನಿಗ್ರಹಿಸಿ, ಅದರ ಅಪಾರಶಕ್ತಿಯನ್ನು ಸಂಗ್ರಹಿಸಿ (ಹೊರಗೆ ಪೋಲಾಗದಂತೆ ಶೇಖರಿಸಿ) ಇಟ್ಟಿದ್ದರೆ ಅದರಿಂದ ಪರಮಾತ್ಮದರ್ಶನವಾದ ಅಗಾಧ ಕೆಲಸವನ್ನೇ ಮಾಡಿಸಬಹುದು.

ಅಭ್ಯಾಸವು ಅಡ್ಡಾದಿಡ್ಡಿಯಾಗಬಾರದು. ಮಧ್ಯೆಮಧ್ಯೆ ಮುರಿದು ತುಂಡಾಗ ಬಾರದು. ವೈರಾಗ್ಯವು ಶುಷ್ಕವೈರಾಗ್ಯವಾಗಬಾರದು. ಹರಿಕಥೆಯಲ್ಲಿ ಹೇಳು ವಂತೆ, ಇಂದಿದ್ದು ನಾಳೆಯೋಡುವ ಅಭಾವವೈರಾಗ್ಯ, ಪ್ರಸೂತವೈರಾಗ್ಯ, ಪುರಾಣವೈರಾಗ್ಯಗಳಾಗಬಾರದು. ಸತತವಾಗಿ ಅಭ್ಯಾಸದ ವೈರಾಗ್ಯಧಾರೆ ಹರಿಯಬೇಕು. ಅದು ಮನಸ್ಸಿನ ಸಾಮಾನ್ಯವೃತ್ತಿಯಾಗಬೇಕು. ಅಂತಃಕರಣ ದಿಂದ ಉತ್ಪತ್ತಿಯಾಗಿ ರಾಗವು ಧ್ವಂಸವಾಗಬೇಕು. ರಾಗ ಎಂದರೆ ಬಣ್ಣ ವೆಂದೂ ಅರ್ಥವುಂಟು. ಆಗ ವೈರಾಗ್ಯದಿಂದ ಮನಸ್ಸಿನ ಬಣ್ಣವೂ ಹೋಗಿ ನಿರ್ವರ್ಣವಾಗುತ್ತದೆ. ರಾಗವೆಂದರೆ ಕಾಮವೆಂಬ ಅರ್ಥವೂ ಉಂಟು. ವೈರಾಗ್ಯದಿಂದ ಮನಸ್ಸಿನ ಕಾಮವೆಲ್ಲವೂ ದಹಿಸಿ ನಿಷ್ಕಾಮವಾಗುತ್ತಗೆ. ಯಾವಾಗ ರಾಗದ್ವೇಷರಹಿತವಾಗಿ, ದ್ವಂದ್ವಾತೀತವಾಗಿ, ನಿರ್ವರ್ಣವಾಗಿ, ಶುದ್ಧಿಯಾಗಿ, ನಿಷ್ಕಾಮವಾಗಿ ನಾನು, ನನ್ನದು ಎಂಬ ಭಾವನೆಯಳಿದರೆ, ವೈರಾಗ್ಯ ಸಿದ್ಧಿಸಿದಂತೆಯೇ. ಪರಮಾತ್ಮಗುಣಗಳೆಲ್ಲಾ ಬಂದಂತೆಯೇ. ಆತ್ಮನು ಆತ್ಮನೊಡನೆ ಸೇರಲು ಅನುವಾದಂತೆಯೆ.

ಕುದುರೆಯನ್ನೊ, ಬೈಸ್ಕಲ್ಲನ್ನೊ ಸವಾರಿ ಮಾಡಿ ಕಲಿವಾಗ, ಮೊದಲನೆಯ ಸಾರಿ ಬಿದ್ದು, ಕೈಕಾಲು ತರೆದು, ಆಶೆ ಮುರಿದು, ಉತ್ಸಾಹಭಂಗವಾದ ಅಭ್ಯಾಸ ಪ್ರಥಮವೇ ಈಗ ಕಲಿತು ಸುಲಲಿತವಾಗಿ ಸವಾರಿ ಮಾಡುವ ಚತುರತೆಗೆ ತಳಹದಿಯಾಯಿತು. ಒಂದೇ ದಿನದ ಪ್ರಯತ್ನವು ಎಂದಿಗೂ ಅಭ್ಯಾಸವಲ್ಲ. ಹತ್ತು ಪೆಟ್ಟಿಗೆ ಸೀಳಿದ ಸೌದೆ, ಒಡೆದ ಕಲ್ಲು, ಹತ್ತನೇ ಪೆಟ್ಟಿನ ಪರಿಣಾಮ ವಾಗಿಯೇ ಸೀಳಲಿಲ್ಲ, ಒಡೆಯಲಿಲ್ಲ. ಮೊದಲನೆಯ ಪೆಟ್ಟಿನ ಪ್ರತಾಪವೂ ಅದಕ್ಕೆ ಸಹಕಾರಿಯಾಗಿದೆ; ಸೀಳಲು, ಒಡೆಯಲು ಸಿದ್ಧತೆ ಮಾಡಲು ಶುರು ಮಾಡಿದೆ. ಅದರಿಂದಲೇ ಆಂಗ್ಲ ಭಾಷೆಯಲ್ಲಿ "Every failure is a stepping stone to success" ಎಂದು ಹೇಳುವುದು. ಯಾವ ಪ್ರಯತ್ನವೂ ನಿಷ್ಫಲವಲ್ಲ. ನಿಷ್ಫಲವೆಂದು ನಾವು ಭಾವಿಸಿದ ಪ್ರಯತ್ನಗಳೇ ಸಫಲವಾಗಲು ಮೆಟ್ಟಿಲುಗಳು. ಅಭ್ಯಾಸದಲ್ಲೂ ಫಲದ ಮೇಲೆ ಕಣ್ಣಿಟ್ಟು ಪ್ರಯತ್ನಮಾಡದಂತೆ ವೈರಾಗ್ಯ ಬರಬೇಕು. ನಮ್ಮ ಪ್ರಯತ್ನವನ್ನು ಮಾಡಿಯೇಬಿಡೋಣ, ನಿಷ್ಫಲ ವಾದರೂ ಆಗಲಿ ಎಂಬ ವೈರಾಗ್ಯವಿರಬೇಕು. ಹನಿ ನೀರು ತೊಟ್ಟಿಡುತ್ತಿರು ವಾಗ ಬಂಡೆ ಸವೆಯುವುದು ಕಾಣುವುದೆ? ಅದೇ ವರ್ಷಗಳನಂತರ ನೋಡಿ.

ಅದರಿಂದ ಕಾಣದೆಯೆ ಸವೆದು ಆಗಿರುವ ಅಗಾಧಕಾರ್ಯವನ್ನು, ಕೊರಕಲನ್ನು.

ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥
ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥
ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।
ತ್ವದನ್ಯಸಂಶಯಸ್ಯಾಸ್ಯ ಛೇತ್ತಾ ನಹ್ಯುಪಪದ್ಯತೇ ॥೩೯॥

ಸಾಧನೆಯ ಯೋಗವು ಇಷ್ಟು ಕಷ್ಟವಾದ ಮೇಲೆ, ಇಷ್ಟು ಸತತವಾಗಿ ನಡೆಯ ಬೇಕಾದಾಗ, ಮಧ್ಯೆಮಧ್ಯೆ ಪೂರ್ಣತೆಯನ್ನು ಹೊಂದದೆ ವಿಘ್ನ ಬಂದು ಸಾಧನೆ ನಿಂತುಹೋದರೆ, ಪೂರೈಸುವುದರೊಳಗೆ ಮರಣಬಂದರೆ, ಆ ಕಷ್ಟಪಟ್ಟ ಸಾಧಕ ನಿಗೇನಾದರೂ ಫಲವುಂಟೆ? ಇಲ್ಲ ವ್ಯರ್ಥವೋ ಎಂಬ ಸಂಶಯ ಬಂದು, ಅರ್ಜುನ ಪರಮಾತ್ಮನನ್ನು ಕೇಳಿದನು: "ಶ್ರದ್ಧಾಯುಕ್ತನಾದರೂ ಚಲಿತಚಿತ್ತ ನಾಗಿ ಯತ್ನವನ್ನು ಮಾಡದ, ಯೋಗಸಿದ್ಧಿಯನ್ನು ಹೊಂದದ(ಅಪ್ರಾಪ್ಯ)ವನ ಗತಿಯೇನು? ಏನನ್ನು ಹೊಂದುವನು? ಈ ರೀತಿಯಾದ ಯೋಗಭ್ರಷ್ಟನು ಬ್ರಹ್ಮಮಾರ್ಗಸ್ಥಿತಿಯನ್ನು ಪಡೆಯದೆ, ಉಭಯತೋಭ್ರಷ್ಟವಾದ ಮೇಘದೋ ಪಾದಿಯಲ್ಲಿ ಮಧ್ಯದಲ್ಲಿಯೇ ನಾಶಹೊಂದುತ್ತಾನೊ? ನಿನ್ನ ಹೊರತು ಇನ್ನಾರೂ ನನ್ನ ಈ ಸಂಶಯವನ್ನು ನಿಶ್ಶೇಷವಾಗಿ ಪರಿಹರಿಸಲು ಸಮರ್ಥರಲ್ಲವಾದುದರಿಂದ ಈ ಸಂಶಯವನ್ನು ಪರಿಹರಿಸು."

ಇದೆಲ್ಲಾ ನಮಗೆ ಸಾಮಾನ್ಯರಿಗೆ ಸಾಧಾರಣವಾಗಿ ಯಾವಾಗಲೂ ಬರುವ ಸಂಶಯವೇ? ಯಾವುದು ಮಾಡಲು ಉಪಕ್ರಮಿಸುವ ಮೊದಲೇ ವಿಘ್ನವಾಗಿ ಮಧ್ಯದಲ್ಲಿ ನಿಂತರೆ, ಪೂರ್ಣವಾಗದಿದ್ದರೆ ನಮಗೆ ಲಾಭವೇನು? ನಷ್ಟವೆಷ್ಟು? ವೃಥಾ ಶ್ರಮ ತೆಗೆದುಕೊಳ್ಳುವುದಕ್ಕೆ ಯಾರಿಗೂ ಇಚ್ಛೆ ಇರುವುದಿಲ್ಲ. ಹಳ್ಳ ಹಾರುವಾಗ ಪೂರ್ತಿ ಹಾರಿದರೇ ಆ ದಡ ಸೇರುವುದೇ; ಒಂದಡಿ ಕಡಮೆ ಯಾದರೂ ಕೂಡ ಮಧ್ಯನೀರಿನಲ್ಲಿ ಬೀಳುವುದೇ! ಹೀಗಾದರೆ ನಮ್ಮಲ್ಲೇ ನಮಗೆ ಸಾಧಿಸಲು ಮನದಲ್ಲಿ ಧೈರ್ಯವಿಲ್ಲದೆ ಎಷ್ಟೋ ಜನ ಹಿಂದೇಟು ಹಾಕುವರು. ಉಭಯತೋಭ್ರಷ್ಟನಾಗಲು ಯಾರೂ ಸಮ್ಮತಿಸುವುದಿಲ್ಲ. ಇದ್ದದ್ದೂ ಹೋಯಿತು, ಏನೂ ಬರಲೂ ಇಲ್ಲ, ಆಗಬಾರದು. ನಾವು ಯಾವಾಗಲೂ ಏನೂ

ಪ್ರಯತ್ನವಿಲ್ಲದೆ, ಕಷ್ಟಪಡದೆ ಫಲ, ಸುಖ, ಬಯಸುವವರಿಗೆ, ಪ್ರಯತ್ನ ಕಷ್ಟ ವೆಲ್ಲ ಪಟ್ಟರೂ, ಮಧ್ಯೆ ಆತಂಕ ಬಂದು ಏನೂ ಇಲ್ಲವಾದರೆ, ಯಾರು ತಾನೆ ಪ್ರಯೋಗಕ್ಕೆ ಇಳಿದಾರು? ಇಹದ ಸುಖವನ್ನೂ ತ್ಯಜಿಸಿ, ಇಲ್ಲದ ಹಿಗ್ಗಟ್ಟು ಮುಗ್ಗಟ್ಟಿನಲ್ಲಿ ಸಿಲುಕಿ, ಕಷ್ಟಪಟ್ಟು ಯೋಗಾಭ್ಯಾಸಕ್ಕೆ ಪ್ರಯತ್ನಿಸಿದರೆ, ಮಧ್ಯೆ ತೊಡಕೋ ಮರಣವೋ ಬಂದು ಪೂರ್ತಿಯಾಗದೆ ಸಿದ್ಧಿಯಾಗದಿದ್ದರೆ, ಗತಿ ಏನು? ಇಹವೂ ಇಲ್ಲ, ಪರವೂ ಇಲ್ಲ—ಈ ಸ್ಥಿತಿಯೊ? ಸರಿಯಾಗಿ ಮುಂಚೆಯೇ ಪೂರ್ವಾಪರಗಳನ್ನು ತಿಳಿಯುವುದೇ ಒಳ್ಳೆಯದೆಂದು ಅರ್ಜುನನ ಪ್ರಶ್ನೆ.

> ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।
> ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥

ಭಗವಂತನದು ಯಾವಾಗಲೂ ಅಭಯಹಸ್ತ. ಎಲ್ಲರಿಗೂ ಕಲ್ಯಾಣವಾಗಲೆಂದು ನಿರೀಕ್ಷಿಸುತ್ತ ತಪಿಸುತ್ತಿರುವವ, ಪ್ರಯತ್ನಿಸುವ ಸಾಧಕನನ್ನು, ಮಾರ್ಗದಲ್ಲಿರುವ ಯೋಗಿಯನ್ನು ಎಂದಾದರೂ ಕೈಬಿಟ್ಟಾನೆ? ಹಾಗೆ ಯೋಗಭ್ರಷ್ಟನಾದವನಿಗೆ ಇಹದಲ್ಲಿಯೂ ಪರದಲ್ಲಿಯೂ ಎಂದಿಗೂ ಹಾನಿ ಸಂಭವಿಸುವುದಿಲ್ಲ ಎಂದು ಘಂಟಾಘೋಷವಾಗಿ, ಉತ್ತಮಕಾರ್ಯವನ್ನು (ಪರಹಿತಕಲ್ಯಾಣ) ಮಾಡು ವವನು ಎಂದಿಗೂ ಯಾವನೂ ದುರ್ಗತಿಯನ್ನು ಹೊಂದುವುದಿಲ್ಲವಯ್ಯಾ— ಎಂದನು.

ಉಭಯತೋಭ್ರಷ್ಟವಾದ ಮೇಘದ ಉಪಮಾನ ತೆಗೆದದ್ದರಿಂದ, ಇಹ ದಲ್ಲಿಯೂ, ಪರದಲ್ಲಿಯೂ, ಏನೂ ಹಾನಿ ಸಂಭವಿಸುವುದಿಲ್ಲವೆಂದು ಅಭಯ ಹೇಳಿದ ಸ್ವಾಮಿ. ಫಲವನ್ನೇ ಅಪೇಕ್ಷಿಸದೆ, ಈಶ್ವರಾರ್ಪಣ ಬುದ್ಧಿಯಿಂದ ನಾನು, ನನ್ನದು ಎಂಬುದನ್ನು ಬಿಟ್ಟು ಯೋಗ ಶುರುಮಾಡಿದವನಿಗೆ ಇನ್ನು ಹಾನಿ ಎಂತಹುದು? ಎಲ್ಲಿಗೆ ನಿಂತರೆ ಅಲ್ಲಿಗೆ, ಏನು ಫಲವಾದರೆ ಅಷ್ಟಕ್ಕೇ ಎಲ್ಲವನ್ನೂ ಪರಮಾತ್ಮನ ಮಡಿಲಿನಲ್ಲಿ ಹಾಕುವ ಸಾಧಕನಿಗೆ, ಕಲ್ಯಾಣವೆಸಗು ವವನಿಗೆ ದುರ್ಗತಿ ಎಲ್ಲಿಯದು? ಮಾಡಿದುದು ಎಷ್ಟಾದರೆ ಅಷ್ಟಕ್ಕಾದರೂ ಫಲ ವಿದ್ದೇ ಇದೆ. ಶಾಸ್ತ್ರದಲ್ಲಿ "All or nothing—law" ಎಂದು ಒಂದು ನಿಯಮವಿದೆ; ಆದರೆ ಪೂರ್ತಿ, ಇಲ್ಲವಾದರೆ ಏನೂ ಇಲ್ಲ ಎಂದು. ಇದೇನು ಮರಾಮತ್ತು ಕಂಟ್ರಾಕ್ಟೆ? ಕೆಲಸ ಮುಗಿದರೇ ಬಿಲ್ಲು. ಅವರೂ ಕೂಡ ಎಷ್ಟೋ ವೇಳೆ, ಆದ ಕೆಲಸಕ್ಕೆ ಮುಂದಿನ ಕೆಲಸದ ಸಲಕರಣೆಸಂಗ್ರಹಕ್ಕೆ ಮುಂಗಡ ಹಣ

ವನ್ನು ಕೊಡುವುದೂ ಉಂಟು. ಆದ ಕೆಲಸಕ್ಕೆ ಬಿಲ್ಲು ಮಾಡುವುದೂ ಉಂಟು. ಪರಮಾತ್ಮ ಅಂಥ ವ್ಯಾಪಾರಿಯಲ್ಲ. ಸಾಧಕನನ್ನು ತನ್ನೆಡೆಗೆ ಒಯ್ಯಲು ಸಹಾಯ ಮಾಡಲು ಆತುರನಾದ ಸ್ವಾಮಿ.

ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥೪೧॥

ಹೀಗೆ ಯೋಗಭ್ರಷ್ಟನಾದವನು ತಾನು ಮಾಡಿದ ಯೋಗಕ್ಕೆ ಹೊಂದಲು ಯೋಗ್ಯವಾದ ಉತ್ತಮ ಲೋಕವನ್ನೂ, ಶಾಶ್ವತವಾಗಿ ಪಡೆದವರಂತೆಯೇ ಸಮ ನಾಗಿ ಸೇರಿದನಂತರ ಶುಚಿಯಾದ ಶ್ರೀಮಂತರ ಗೃಹದಲ್ಲಿ ಜನಿಸುವನು. ಆಗ ನೋಡಿ ಯೋಗ ಪೂರ್ಣಮಾಡಿಕೊಳ್ಳಲು ಅನುಕೂಲ. ಶುಚಿ ಎಂದರೆ ನಿರ್ಮಲ ರಾಗಿ ಪಾಪವಿಲ್ಲದವರು; ಬುದ್ಧಿವಂತರು. ಎಂದರೆ, ಅಲ್ಲಿ ಜನನವಾದರೆ, ಬೆಳೆದರೆ, ಅಡಚಣೆಯಿಲ್ಲದೆ, ಅವರ ಸಹಾಯದಿಂದ ಆತ್ಮೋದ್ಧಾರಕ್ಕೂ, ಅಭಿವೃದ್ಧಿಗೂ ಅನುಕೂಲಿಸುವುದಿಲ್ಲವೆ? ಸರಿಯಾದ ಆವರಣವನ್ನು ಕಲ್ಪಿಸಿಕೊಡುತ್ತದೆ. ಅವನ ಹಿಂದಿನ ಸತ್ಕರ್ಮದ ಗಂಟು ಅಭಿವೃದ್ಧಿಯಾಗಲು ಅವಕಾಶ ಒದಗಿಸುತ್ತದೆ.

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥೪೨॥

ಇಲ್ಲವೇ ಧೀಮತಾಮ್, ಪ್ರಾಜ್ಞನು (ಧೀಃ = ಬುದ್ಧಿ) ಜ್ಞಾನಯೋಗಿಯು ಯೋಗಿಗಳ ಕುಲದಲ್ಲೇ ಜನಿಸುತ್ತಾನೆ. ಇದಕ್ಕೆ ಸದೃಶವಾದ ಈ ಲೋಕ ಜನ್ಮವು ದುರ್ಲಭವು. ಮನುಷ್ಯತ್ವವೂ ಮುಮುಕ್ಷುತ್ವವೂ ಸತ್ಪುರುಷರ ಸಹವಾಸವೂ—ಕೇವಲ ಯೋಗಿಗಳ ಕುಲದಲ್ಲೇ ಹುಟ್ಟಿದ ಮೇಲೆ ಅವರ ಸಹ ವಾಸಕ್ಕಿಂತ ಇನ್ನಾರು ಬೇಕು ಸತ್ಪುರುಷರು?—ಮೂರೂ, ಶ್ರೀಶಂಕರರು ದುರ್ಲಭವೆಂದು ಹೇಳಿದ್ದಾರೆ. ಯೋಗಭ್ರಷ್ಟನಾದವನಿಗೆ, ಪರಿಪೂರ್ಣವಾಗಲು ಈ ಮೂರನ್ನೂ ಕರುಣಿಸಲು ವಾಗ್ದಾನಮಾಡಿದ್ದಾನೆ. ಆವನವನು ಸಾಧಿಸಿ ಪಡೆದ ದರ್ಜೆಗೆ ಸೇರಿಸುತ್ತಾನೆ. ಅವರವರಿಗೆ ಬೇಕಾದ ಸನ್ನಿವೇಶ ಒದಗಿಸಿಕೊಡು ತ್ತಾನೆ. ಅದನ್ನು ನಾವು ಉಪಯೋಗಿಸಿಕೊಳ್ಳದಿದ್ದರೆ ನಿರ್ಭಾಗ್ಯರು. ಬಿದ್ದರೆ ಎತ್ತಲು ಸಿದ್ಧನಾಗಿದ್ದಾನೆ, ಎಡವರಿಸಿದರೆ ಬೆನ್ನು ಸವರುತ್ತಾನೆ. ದಾರಿ ತಪ್ಪಿದರೆ ದಾರಿ ತೋರಿಸುತ್ತಾನೆ; ಆದರೆ ಮುಂದುಹೆಜ್ಜೆಯನ್ನು ಹಾಕಿ ಹತ್ತುವುದನ್ನು ನಾವೇ ಮಾಡಬೇಕು.

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥೪೩॥

ಪುನಃ ಷುರುಮಾಡಬೇಕೆಂದು "ಓನಾಮದ" ದಿಗಿಲೇನಿಲ್ಲ. ಪೂರ್ವದೇಹದಲ್ಲಿನ ಜ್ಞಾನಸಾಧನೆಗಳ ಬುದ್ಧಿಸಂಯೋಗದಿಂದ, ಅಲ್ಲಿಂದ ಮುಂದೆ ಪುನಃ ಅಧಿಕ ಪ್ರಯತ್ನಮಾಡಿ, ಸಿದ್ಧನಾಗುತ್ತಾನೆ. ಪುನಃ ಹೆಚ್ಚು ಪ್ರಯತ್ನ ಮಾಡುತ್ತಾನೆ.

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥೪೪॥

ಯೋಗಭ್ರಷ್ಟನು ಪುನರ್ಜನ್ಮದಲ್ಲಿ ಪ್ರಯತ್ನಮಾಡದಿದ್ದರೂ, ಹಿಂದಿನ ಅಭ್ಯಾಸ ಬಲದಿಂದಲೇ, ಹಿಂದಿನ ಆ ಯೋಗಾಭ್ಯಾಸದ ಸಂಸ್ಕಾರದಿಂದಲೇ, ಆ ಅಭ್ಯಾಸವೇ ಪ್ರವೃತ್ತಿಯನ್ನುಂಟುಮಾಡುವುದು. ಮುಂದಿನ ಜಾಡು ಅದೇ ಹಿಡಿಯುವುದು. ಜಿಜ್ಞಾಸುವಾದರೂ, ಯೋಗಕ್ಕಾಗಿ ವಿಧಿನಿಷೇಧಶಾಸ್ತ್ರಗಳನ್ನು (ಶಬ್ದ ಬ್ರಹ್ಮ) ಉಲ್ಲಂಘಿಸಿ ಆ ಮಾರ್ಗದಲ್ಲಿ ಪ್ರವರ್ತಿಸುವನು. ಜೀವನವಾದರೂ ಇಷ್ಟೇ: ಹಗಲಿನದು ರಾತ್ರಿಗೆ, ಇವೊತ್ತಿನದು ನಾಳೆಗೆ, ಈ ವರ್ಷದ್ದು ಮುಂದಿನ ವರ್ಷಕ್ಕೆ. ಯೌವನದ್ದು ಮುಪ್ಪಿಗೆ, ಈ ಜೀವನದ ಸಂಸ್ಕಾರ ಮುಂದಿನ ಜೀವನಕ್ಕೆ. ಇಂದಿನ ಕಾರ್ಯಾಲಾಪಗಳನ್ನು, ರಾತ್ರಿ ಮಲಗಿದ್ದು ಎದ್ದನಂತರ ನಾಳೆ ಎಂತು ಮುಂದುವರಿಸುವೆವೊ, ಆ ರೀತಿ ಜನ್ಮ ಮುಗಿದು ಕೊನೆನಿದ್ರೆಯ (ಮರಣದ) ಅನಂತರ ಎಚ್ಚತ್ತಾಗ (ಪುನರ್ಜನಿಸಿದಾಗ) ಆ ವಾಸನೆಯಿಂದಲೇ, ಆ ಅಭ್ಯಾಸದಿಂದಲೇ, ಆ ಹಿಂದಿನ ಸಂಸ್ಕಾರದ ಬಲದಿಂದಲೇ ಪ್ರವರ್ತಿಸುತ್ತೇವೆ. ಹಿಂದಿನ ಸಂಗ್ರಹಶಕ್ತಿಯೇ ಮುಂದಕ್ಕೆ ಪ್ರವರ್ತಿಸುತ್ತದೆ. ಆ ಶಕ್ತಿಯು ಪ್ರವಹಿಸುತ್ತಿದ್ದ ಮಾರ್ಗದಲ್ಲಿಯೇ ಮುಂದಿನ ಜನ್ಮದಲ್ಲೂ ಪ್ರವಹಿಸುತ್ತದೆ. ಅದರಲ್ಲೂ ಪ್ರತ್ಯಗಭಿನ್ನ ಬ್ರಹ್ಮದ ಜಿಜ್ಞಾಸವು ತನ್ನ ಪವಿತ್ರ ಧ್ಯೇಯದ ದೃಷ್ಟಿಯಿಂದ ಅದೇ ಅಭ್ಯಾಸದ ಮಾರ್ಗದಲ್ಲಿಯೇ ವಿಧಿನಿಷೇಧಗಳನ್ನು ಕೂಡ ಅತಿವರ್ತಿಸಿ ತನ್ನ ಯೋಗಸಿದ್ಧಿಯನ್ನು ಸಾಧಿಸುವನು. ಸತ್ಯಶೋಧನೆಯಲ್ಲಿ ಅವನಿಗೆ ಅಲ್ಲದ ನಿಯಮಗಳು ಪ್ರಕೃತವ್ಯವಹಾರಶಾಸ್ತ್ರಗಳು ಅಡ್ಡಿಬಂದರೂ ಅವನ್ನೆಲ್ಲ ಅತಿಕ್ರಮಿಸಿ, ಅವುಗಳಿಗಿಂತ ಆಚೆ ಹೋಗಿ, ಅತಿವರ್ತಿಸಿ, ಸತ್ಯಮಾರ್ಗದಲ್ಲಿಯೇ ಆ ಹಿಂದಿನ ಅಭ್ಯಾಸದಲ್ಲೇ ಮುಂದುವರಿಯುವನು.

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂಗತಿಮ್ ॥೪೫॥

ಕಲ್ಮಷಗಳಿಂದ (ಕಿಲ್ಬಿಷಃ) ಹೊರಸಂಪರ್ಕದಿಂದ ಉಂಟಾದ ಕಿಲುಬು ಹಿಡಿದಿರುವ ತುಕ್ಕು ಸಂಶುದ್ಧನಾದ ಯೋಗಿಯು ಉತ್ತರೋತ್ತರ ಪ್ರಯತ್ನವನ್ನು ಮಾಡುತ್ತ ಅನೇಕ ಜನ್ಮಸಂಸಿದ್ಧಿಯಿಂದ ಪರಮಗತಿಯನ್ನು ಹೊಂದುವನು. ಆದುದರಿಂದ ಅರ್ಜುನನ ಸಂಶಯಕ್ಕೆ ಆಸ್ಪದವೇ ಇಲ್ಲ. ಉತ್ತರೋತ್ತರಪ್ರಯತ್ನಮಾಡು ವವನಿಗೆ ಮೆಟ್ಟಲನ್ನು ಹತ್ತುತ್ತ ಹತ್ತುತ್ತ ಉಚ್ಚಜನ್ಮಗಳು ಪ್ರಾಪ್ತವಾಗಿ, ಹಿಂದಿನ ಸಾಧನದಿಂದ ಮುಂದಕ್ಕೆ ಅನುಕೂಲವಾಗಿ "ಪರಾಂಗತಿ" ಪ್ರಾಪ್ತ ವಾಗುತ್ತೆಯೇ ವಿನಾ ಪ್ರಯತ್ನಪೂರ್ವಕವಾದ ಸಾಧಕನ, ಸಾಧನದ ಮಧ್ಯೆ ಆತಂಕದಿಂದ (ಮರಣದಿಂದ) ಯೋಗಭ್ರಷ್ಟನು ಉಭಯಭ್ರಷ್ಟನಾಗಿ ನಾಶ ಹೊಂದುವುದಿಲ್ಲವೆಂದು ಪರಮಾತ್ಮನು ಅಭಯಪ್ರದಾನಮಾಡಿದ್ದಾನೆ. ಇದರಲ್ಲಿ ಸಂಶಯವಿಲ್ಲ. ನಾವು ಸಾಧಕನ ಅಪೂರ್ಣಫಲಸಾಧನಶಕ್ತಿಯು ಅವನೊಡನೆ ನಾಶವಾಗದೆ ಮುಂದೆ ಅವನ ಉತ್ತರೋತ್ತರಜನ್ಮಕ್ಕೆ ಹೋಗುತ್ತದೆಂದು ನಂಬಲು ಮುಂದೆ ಹೇಗೆ ಅವು ಜನ್ಮಜನ್ಮಾಂತರಗಳಿಗೆ ಒಯ್ಯಲ್ಪಡುವುದೆಂದು ವಿವರಿಸಲು, ೧೫ ಅ. ೮ ಶ್ಲೋಕದಲ್ಲಿ ಉಪಮಾನಸಹಿತವಾಗಿ ತಿಳಿಸಿದ್ದಾನೆ ಪರಮಾತ್ಮ. "ಶರೀರಂ ಯದವಾಪ್ನೋತಿ . . . ವಾಯುರ್ಗಂಧಾನಿವಾಶಯಾತ್" ಎಂದು. ಒಳಗಡೆ ಒಂದು ಹಲಸಿನ ಹಣ್ಣಿದೆ. ಮರದ ಮೇಲೆಲ್ಲೋ ಒಂದು ಸಂಪಿಗೆ ಹೂವು ಅರಳಿದೆ. ನಾವು ಅದನ್ನು ಕಾಣದೆ, ಅದು ಗೋಚರವಾಗದೆ, ವಾಯು ವಿನಲ್ಲಿ ಆ ವಾಸನೆಯು ಸ್ಥಳದಿಂದ ಸ್ಥಳಕ್ಕೆ ಹೇಗೆ ಒಯ್ಯಲ್ಪಡುವುದೋ, ಹಾಗೆಯೇ, ಈ ಶರೀರಾಶ್ರಯವಾದ ಶಕ್ತಿಯೂ (ಯೋಗಸಾಧಕನ ಆರ್ಜಿತ ವೆಲ್ಲ) ಇಹಜನ್ಮದ ವಾಸನೆಯೂ ಸೂಕ್ಷ್ಮವಾದ ವಾಯುವಿನಲ್ಲಿ ಸ್ಥಳಾಂತರ ಹೊಂದಿ ಮುಂದಿನ ಜನ್ಮಕ್ಕೆ ಒಯ್ಯಲ್ಪಡುತ್ತದೆ. ಒಂದು ವಸ್ತುವನ್ನು ದಹಿಸಿ ದಾಗ ಕೂಡ ಅದರ ಮುಖ್ಯತತ್ತ್ವವು ಸೂಕ್ಷ್ಮವಾಯುವನ್ನು, ಸೂಕ್ಷ್ಮರೂಪ ದಿಂದ ಸೇರುವಂತೆ (Essence evaporating) ಯೋಗಿಯ ಅಭ್ಯಾಸದ ಮುಖ್ಯತತ್ತ್ವಗಳೆಲ್ಲ ಅತಿ ಸೂಕ್ಷ್ಮರೂಪದಲ್ಲಿ, ಅತಿಸೂಕ್ಷ್ಮವಾಯುವಿನ (Ether) ಮೂಲಕ ಆಕಾಶಸಂಭೂತವಾಗಿದ್ದು ಮತ್ತೊಂದೆಡೆಗೆ ಆತ್ಮನ ಜನ್ಮಸ್ಥಾನಕ್ಕೆ ಸೇರುವುದು. ಜನ್ಮಾಂತರಗಳ ಅನಂತರ ಮೋಕ್ಷವನ್ನು ಪಡೆದು ಜನ್ಮಬಂಧನ

ದಿಂದ ಬಿಡುಗಡೆಯನ್ನು ಹೊಂದಿ ಆತ್ಮನೊಡನೆ ಲೀನವಾಗುವುದು.

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥೪೬॥

ತಪಸ್ವಿಗಿಂತಲೂ ಯೋಗಿ ಅಧಿಕನು, ಜ್ಞಾನಿಗಿಂತಲೂ ಶ್ರೇಷ್ಠನು, ಕರ್ಮಿಗಿಂತಲೂ ಹೆಚ್ಚಿನವನು; ಆದುದರಿಂದ ಅರ್ಜುನ, ನೀನೂ ಯೋಗಿಯಾಗು. ತಪಸ್ವಿ ಎಂದರೆ ಧ್ಯಾನಯೋಗಿ ಎಂದಿಟ್ಟುಕೊಳ್ಳಬಹುದು. ಜ್ಞಾನಿ ಎಂದರೆ ಶಾಸ್ತ್ರಜನ್ಯ ಜ್ಞಾನಯೋಗಿಯೆಂದು ಭಾವಿಸಬಹುದು. ಕರ್ಮಿ ಎಂದರೆ ಮುಂಚೆ ಹೇಳಿದ ಕರ್ಮಯೋಗಿ ಎನ್ನೋಣ. ಈ ಧ್ಯಾನಯೋಗಿ, ಜ್ಞಾನಯೋಗಿ, ಕರ್ಮಯೋಗಿ, (ನಿಷ್ಕಾಮಿಕರ್ಮ ಕರ್ಮಸಂನ್ಯಾಸಕ್ಕಿಂತ ಹೆಚ್ಚಿನದೆಂದು ಸಾಧಕನಿಗೆ ಬೋಧಿಸಿದ ಕರ್ಮಯೋಗ) ಎಲ್ಲರಿಗಿಂತಲೂ ಹೆಚ್ಚಿನ ಯೋಗಿ ಯಾರು? ಅಧಿಕಮಹತ್ತ್ವ ಕೊಡುವ ಭಾವವಾವುದು?

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೪೭॥

ಇದೇ, ಎಲ್ಲಾ ಯೋಗಿಗಳಲ್ಲೂ ಯಾವನು ನನ್ನಲ್ಲಿಯೇ ಅಂತರಾತ್ಮನಾಗಿ ಶ್ರದ್ಧೆಯಿಂದ ನನ್ನನ್ನೇ ಸೇವಿಸುತ್ತಾನೋ (ಭಜತೇ) ಆ ಯುಕ್ತತಮನೇ ಯೋಗಿ ಎಂದು ಮತ ನಿಶ್ಚಯವು. ಎಲ್ಲಾ ಯೋಗಕ್ಕಿಂತ, ಪರಮಾತ್ಮನೊಡನೆ ಅಂತರಾತ್ಮವನ್ನು ಲೀನಮಾಡಿ, ತಚ್ಚಿತ್ತನಾಗುವುದೂ (ಮದ್ಗತೇನಾಂತರಾತ್ಮನಾ) ಶ್ರದ್ಧೆಯಿಂದ (Faith = ಶ್ರದ್ಧಾ, ಬಹು ಮುಖ್ಯ ಸಾಧನೆಗಳಲ್ಲಿ) ಅಭೇದಭಾವದಿಂದ (ತಾನೂ ಪರಮಾತ್ಮನೂ ಒಂದಾದ ಮೇಲೆ ಸೃಷ್ಟಿಪ್ರಪಂಚವೆಲ್ಲಾ ಅವನೇ ತುಂಬಿರುವುದರಿಂದ ಇನ್ನು ಭೇದವೆಲ್ಲಿಯದು? ಎಲ್ಲೆಲ್ಲಿಯೂ ಎಲ್ಲದರಲ್ಲೂ ಪರಮಾತ್ಮನನ್ನು ಭಜಿಸುವುದು (Serve)—ಸರ್ವಸೇವೆಯಲ್ಲಿ ಮಹದಾತ್ಮನ ಸೇವೆಯಲ್ಲಿ ಪರರ ಹಿತಕ್ಕಾಗಿ ಪರಮಾತ್ಮನ ಸೇವೆಮಾಡುವ ಭಾವವು—ಯುಕ್ತತಮ. ಯುಕ್ತ, ಯುಕ್ತತರ, ಯುಕ್ತತಮ—ಬಹುಹೆಚ್ಚಿನ ಯುಕ್ತವಾದ ಭಾವವು ಯೋಗಿಗಳಲ್ಲಿ. ಆದುದರಿಂದ, "ಮದ್ಗತೇನಾಂತರಾತ್ಮಾನಾ" ಭಾವದಿಂದ ತಾನೆಂಬುದನ್ನು ಮರೆತುಬಿಟ್ಟು, "ಶ್ರದ್ಧಾವಾನ್ ಭಜತೆ ಯೋ ಮಾಂ" ಭಾವದಿಂದ ತನ್ನದೆಂಬುದನ್ನು ಬಿಟ್ಟು, ಅಹಂಕಾರ ಮಮಕಾರರಹಿತನಾದ ಯೋಗಿಯೇ ಶ್ರೇಷ್ಠನು—ಭಗವಾನನ ಮತದಲ್ಲಿ. ಆಗ, ನಾನು ಯೋಗಿ

ಎಂಬ ಭಾವ ನಶಿಸುತ್ತದೆ, ಆಗ ನನಗೇ ಮೋಕ್ಷವೆನ್ನುವ ಧ್ಯೇಯ ಮಾಯ ವಾಗುತ್ತದೆ. ಎಲ್ಲಾ ಪರಮಾತ್ಮನೆ. ಇದೇ ಅಭ್ಯಾಸದ ಚರಮಸೀಮೆ, ಉತ್ಕೃಷ್ಟ ಧ್ಯೇಯ, ಪಡೆಯಬೇಕಾದ ಪರಾಂಗತಿ.

ಶ್ರೀಮದ್ಭಗವದ್ಗೀತೆ ಎನ್ನುವ
ಉಪನಿಷತ್ತಿನ, ಬ್ರಹ್ಮವಿದ್ಯೆಯ, ಯೋಗಶಾಸ್ತ್ರದ
ಶ್ರೀ ಕೃಷ್ಣಾರ್ಜುನ ಸಂವಾದದಲ್ಲಿ
ಅಭ್ಯಾಸಯೋಗವೆಂಬ ಆರನೆಯ ಅಧ್ಯಾಯ ಸಮಾಪ್ತಿ.

---

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ೨.

## ನಾರಾಯಣ ಸಾಹಿತ್ಯ

೧. ಪಾದುಕಾಪ್ರಭಾವ
(ದೃಶ್ಯಗಳು, ಕವನಗಳು) .... ರೂ. 1-2

೨. ಕೇಳದ ವರ (ದೃಶ್ಯಗಳು, ಕವನಗಳು) .... ರೂ. 1

೩. ಕಾಪಾಡಿದವರ್‍ಯಾರು (ಕಥೆಗಳು) .... ರೂ. 1-8

೪. ಕಾರಾಗೃಹದ ನೆನಪುಗಳು (ಕಥೆಗಳು) .... ರೂ. 2

೫. ಪಾದುಕಾಪಹರಣ
(ಪ್ರಬಂಧಗಳು, ಕವನಗಳು) .... ರೂ. 1

೬. ಶಿವೂ (ವಿನೋದಪ್ರದವಾದ ಹರಟೆ) .... ರೂ. 1-4

೭. ಗೀತೆಯಲ್ಲಿ ಏನಿದೆ?
(ಗೀತೆಯನ್ನು ಕುರಿತ ವಿಚಾರಲೇಖನಗಳು) ರೂ. 2-8

ಪುಸ್ತಕ ದೊರಕುವ ಸ್ಥಳ:

ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು

ವಿಚಾರ ಸಾಹಿತ್ಯ ಲಿಮಿಟೆಡ್, ಬೆಂಗಳೂರು

ಉಷಾ ಪುಸ್ತಕ ಭಂಡಾರ, ಮೈಸೂರು.